ಅಂತರ ಭಾರತೀಯ ಪುಸ್ತಕ ಮಾಲೆ

# ಆತ್ಮಪ್ರಕಾಶ

ಸುನೀಲ್ ಗಂಗೋಪಾಧ್ಯಾಯ

ಅನುವಾದ

ಗೀತಾ ವಿಜಯಕುಮಾರ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ರಕ್ಷಾಪುಟ: ಸತ್ಯಸೇವಕ್ ಮುಖರ್ಜಿ

ISBN 81-237-2670-8

ಮೊದಲ ಮುದ್ರಣ: 1999 (ಶಕ 1920)

Original Title : Atmaprakash (Bengali)
Kannada Translation : Atmaprakasha
ರೂ. **60.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ–5, ಗ್ರೀನ್‌ಪಾರ್ಕ್, ಹೊಸ ದೆಹಲಿ – 110 016 ಇವರಿಂದ ಪ್ರಕಟಿತ

# ಮುನ್ನುಡಿ

ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಹಾಗೂ ಅದರ ನಂತರ ಬಂಗಾಳದ ಮಧ್ಯಮ ವರ್ಗದ ಸಮಾಜದಲ್ಲಿನ ಪ್ರಚಲಿತ ಧೋರಣೆಗಳು, ಆಮೂಲಾಗ್ರವಾಗಿ ಅನೇಕ ರೀತಿಯಿಂದ ಬದಲಾಗಬೇಕಾಯಿತು. ಐದನೇ ದಶಕದಲ್ಲಿನ ಭೀಕರ ಕ್ಷಾಮಕ್ಕೆ ಮೂಕಸಾಕ್ಷಿಯಾಗಿ, ಭೀಕರ ನೈತಿಕ ಕಾಂಡದ ಹೊಣೆಗಾರಿಕೆ ಹೊತ್ತು ನೈತಿಕ ಅಪರಾಧಿ ಭಾವನೆಯನ್ನು ಅದು ಮೂಡಿಸಿಕೊಳ್ಳಬೇಕಿತ್ತು. ಆದರೆ ಆ ರೀತಿ ಏನೊಂದೂ ನಡೆಯಲಿಲ್ಲ. ತನ್ನನ್ನುಳಿಸಿಕೊಳ್ಳಬಯುಸಿದ ಮಧ್ಯಮ ವರ್ಗದ ಬಂಗಾಳಿ ಮಹಾಶಯನ ಅಪರಾಧಿ ಭಾವ, ಸಾಮಾಜಿಕ ಸಕ್ರಿಯೆಯಲ್ಲಿ ರೂಪಾಂತರವೇನೂ ಹೊಂದಲಿಲ್ಲ. ಆದರೆ ಬಂಗಾಳಿ ಕಾದಂಬರಿ, ಕಥೆ ಹಾಗೂ ನಾಟಕಗಳಲ್ಲಿ ಅದರ ಭಾವ ಚೆನ್ನಾಗಿಯೇ ಪ್ರಕಟಗೊಂಡಿತ್ತು. ಇದರ ನಂತರವೇ ಸಂಪ್ರದಾಯದ ವಿರುದ್ಧ ಸಂಘರ್ಷ ನಡೆದದ್ದು. ಅದರಲ್ಲಿಯೇ ಹಳೆಯ ಸ್ಲೋಗನ್ನುಗಳು ನಶಿಸಿಹೋದವು. ಸ್ವಾತಂತ್ರ್ಯವೇನೋ ಲಭಿಸಿತ್ತು. ಆದರೆ ಭಾರತ ಇಬ್ಭಾಗವಾಗಿತ್ತು. ಮನೆ ಮಾರು ಕಳೆದುಕೊಂಡ ಲಕ್ಷಾಂತರ ಜನರಿಗೆ ಸ್ವಾತಂತ್ರ್ಯದುತ್ಸವ ಯಾವೊಂದೂ ಅರ್ಥವನ್ನು ನೀಡಲಿಲ್ಲ. ಅನೇಕ ದೇಶೀ ಬ್ಯಾಂಕುಗಳು ಮುಚ್ಚಲ್ಪಟ್ಟವು. ಅನೇಕರ ಧೋರಣೆ, ಕನಸುಗಳು ನುಚ್ಚು ನೂರಾದವು. ಎರಡನೇ ಮಹಾಯುದ್ಧದ ಮೊದಲೇ ಪ್ರೇಮ, ಸಾಧನೆ ಹಾಗೂ ನಿರ್ಮಲ ಕನಸುಗಳಿಗೆ ಹುಳು ಹತ್ತಿತ್ತು. ಅದು ಸಂಪೂರ್ಣ ಜನಜೀವನವನ್ನೇ ಜಾಲಾಡಿಬಿಟ್ಟಿತ್ತು. ಇವೆಲ್ಲದರ ಪರಿಚಯ ನಮಗಾಗೋದು ಬ್ಲಾಕ್‌ಔಟ್ ರಾತ್ರಿಗಳಲ್ಲಿ, ಅಣ್ಣ-ತಮ್ಮಂದಿರೇ ಪರಸ್ಪರ ಕಚ್ಚಾಡುವುದರಲ್ಲಿ, ಕ್ಷಾಮ ಪೀಡಿತರಿಗಾಗಿ ನಡೆಸಲ್ಪಡುವ ಆಶ್ರಮಧಾಮಗಳಲ್ಲಿ, ಮನೆ-ಮಠ ತೊರೆದು ಬಂದವರ ಭಿಕ್ಷಾವೃತ್ತಿಯಲ್ಲಿ. ಆದರ್ಶದ ರಂಗು ಮೆರಗು ನೋಡನೋಡುತ್ತಿರುವಂತೆಯೇ ವಿವರ್ಣವಾಗಿಬಿಟ್ಟಿತ್ತು. ಪ್ರಬೋಧ್ ಕುಮಾರ್ ಸಾನ್ಯಾಲರ (1905-1983) ಯುದ್ಧಕಾಲೀನ ಕಥೆ *ಅಂಗಾರ*ದ ಕೊನೆಯ ಪರಿಚ್ಛೇದ ಅಥವಾ ಸಂತೋಷ್‌ಕುಮಾರ್ ಘೋಷರ *ಕಿನೂ ಗೋಲಾರ್ ಗಲಿ* ಅಥವಾ ಜ್ಯೋತೀಂದ್ರ ನಂದಿಯ *ಮಿರಾರ್‌ದುಪುರ್* ರಚನೆಗಳು ನಾವು ಬಹಳಷ್ಟು ಕಳೆದುಕೊಂಡಿದ್ದೇವೆ ಅನ್ನುವುದನ್ನ ನಾನಾ ರೀತಿಯಲ್ಲಿ ನಮಗೆ ತಿಳಿಸಿವೆ.

ಇದರ ಒಂದು ನೂರು ವರ್ಷದ ಮೊದಲು, ಹತ್ತೊಂಬತ್ತನೇ ಶತಮಾನದ ಆರನೆಯ ದಶಕದಲ್ಲಿ ಬಂಗಾಳಿ ಕಾದಂಬರಿ ತನ್ನ ಯಾತ್ರೆ ಪ್ರಾರಂಭಿಸಿತು. ಅಂದು ಈ ಕಾದಂಬರಿ ಯಾವ ಮಧ್ಯಮ ವರ್ಗದ ಚಿತ್ರಣ ನೀಡಿತ್ತೋ ಆ ವರ್ಗ, ತನ್ನ ರಕ್ಷಣೆ ಹಾಗೂ ಸ್ಥಾಯಿತ್ವಕ್ಕಾಗಿ, ಸಿಪಾಯಿ ದಂಗೆಯ ಕಡೆಗೆ, ಆಧುನಿಕ ಭಾರತೀಯ ಇತಿಹಾಸದ ಪ್ರಥಮ ತಾಂಡವ ನೃತ್ಯದ ಕಡೆಗೆ ಮುಖ ತಿರುಗಿಸಿ ನಿಂತಿತ್ತು. ***ಆಲೋಲೆರ್ ಘರೇರ್ ದುಲಾಲ್*** (1858) ಎಂಬ ಬಂಗಾಳಿ ಸಾಹಿತ್ಯದ, ಪ್ರಥಮ ಕಾದಂಬರಿಯಲ್ಲಿ, ಅದೇ ವಿಕ್ಟೋರಿಯನ್ ಮಧ್ಯಮ ವರ್ಗ, ಪಾಶ್ಚಾತ್ಯ ಶಿಕ್ಷಣ ಅನುಮೋದಿತ ಸದಾಚಾರದ ರೀತಿಯನ್ನಲ್ಲದೆ ಬೇರಿನ್ನೇನನ್ನು ಹುಡುಕುತ್ತಿರಲಿಲ್ಲ – ಅಂದರೆ ಏನು ಮಾಡಿದರೆ ಸಂಭಾವಿತನಾಗಲು ಸಾಧ್ಯ ? ಎಂಬುದರ ಹುಡುಕಾಟವಿತ್ತು. ಆದರೆ ಈ ಸೀಮಾ ಬದ್ಧತೆಯ ನಡುವೆಯೂ, ***ಆಲೋಲೆರ್ ಘರೇರ್ ದುಲಾಲ್*** ಕೇವಲ ಮೊದಲ ಕಾದಂಬರಿ ಎಂದಲ್ಲದೆ, ಮತ್ತೆರಡು ವಿಶೇಷ ಕಾರಣಕ್ಕಾಗಿ ಮಹತ್ವಪೂರ್ಣವಾಗಿದೆ. ಮೊದಲ ಕಾರಣವೇನೆಂದರೆ ***ಆಲೋಲೆರ್ ಘರೇರ್ ದುಲಾಲ್***ದ ಗದ್ಯದಲ್ಲಿ ಜೀವನದ ಸಾಮಾನ್ಯ ವಾಸ್ತವಿಕತೆಯನ್ನು, ಟೈಪ್ ಆದ ಪಾತ್ರವನ್ನು ಹಿಡಿದಿಡಲು ಸಾಧ್ಯವಾಯಿತು. ಮತ್ತೊಂದು ಕಾರಣವೆಂದರೆ, ಈ ಕಾದಂಬರಿಯಿಂದಲೇ ನಾವು ಹೇಳುವ ಕಥೆಯ ವಿಷಯ ನಮ್ಮ ಸುತ್ತಮುತ್ತಲೇ ಲಭ್ಯವಾಗುತ್ತದೆ ಎಂಬುದರ ಅರಿವಾದದ್ದು. ಬಂಕಿಮ್‌ಚಂದ್ರರು ಗಂಭೀರವಾದ ಪ್ರಶ್ನೆಗಳಿಗೆ ಹಾಗೂ ಜೀವನದ ವ್ಯಾಖ್ಯೆಗೆ ಪ್ರಾಧಾನ್ಯತೆ ನೀಡಿದರು. ಈ ವಿಷಯದಲ್ಲಿ ಅವರಿಗೆ ನೆರವಾದದ್ದು, ಅವರ ತೀಕ್ಷ್ಣ ಬುದ್ಧಿ ಹಾಗೂ ಅಂತರ್‌ದೃಷ್ಟಿ. ಬಂಕಿಮರ ಇನ್ನೊಂದು ಹೆಸರೇ ಕಲ್ಪನೆ. ಅವರೂ ಸಹ ಬಂಗಾಳದ ವಿಕ್ಟೋರಿಯನ್ನರ ತರಹ ಹೊಸದಾಗಿ ಉದ್ಭವಿಸಿದ, ಮಧ್ಯಮ ವರ್ಗದ ಜಾಗೃತ ಪ್ರಹರಿ ಎಂಬುದೇನೋ ನಿಜ; ಅವರ ಕ್ರಾಂತಿಕಾರಿಗಳು, ಆತ್ಮರಕ್ಷಣೆಗಾಗಿ ಕಾಲದೊಂದಿಗೆ ಸಮಾಲೋಚಿಸಿದ್ದೇನೋ ದಿಟ – ಯಾವ ರೀತಿ ***ಆನಂದ ಮಠ*** (1884) ದಲ್ಲಿ ಕ್ರಾಂತಿಕಾರಿಗಳು ಪಶ್ಚಾತ್ತಾಪದಿಂದ, ಹಿಂತಿರುಗಿದ್ದರೋ ಅದೇ ರೀತಿ ಅವರ ***ಚಂದ್ರಶೇಖರ್*** (1875) ಕಾದಂಬರಿಯಲ್ಲಿ ಸಹ. ಅವರ ಹಠಮಾರಿ, ಗೊಂದಲಮಯ ಸಂಭಾವಿತ ಪುರುಷ ಪಾತ್ರಗಳು, ಕಲ್ಪಿತ ಹಾಗೂ ಸೃಷ್ಟಿಯ ಜೀವನದೊಂದಿಗೆ ಬಹಳ ಸಮೀಪದಲ್ಲಿ ಸ್ಪಂದಿಸುತ್ತವೆ ಎಂಬ ಮಾತನ್ನು ನಾವು ತೆಗೆದುಹಾಕಲು ಸಾಧ್ಯವಿಲ್ಲ. ಅವರ ನಾರೀ ಪಾತ್ರಗಳು ವಿಧಿಯ ಪ್ರತಿಸ್ಪರ್ಧಿಗಳಾಗ ಬಯಸುತ್ತವೆ. ಶೈವಲಿನಿ ತನ್ನ ಗಂಡನಿಗೆ ತನ್ನ ಹಾಗೂ ಪ್ರತಾಪನ ಸಂಬಂಧದ ಬಗೆಗೆ ತಿಳಿಸುತ್ತ ಹೇಳುತ್ತಾಳೆ: "ನಾವು ಒಂದೇ ರೆಂಬೆಯ ಎರಡು ಹೂಗಳು, ಒಂದೇ ಕಾಡಿನ ಮಧ್ಯದಲ್ಲಿ ಅರಳಿದ್ದೆವು. ಕಿತ್ತು ಬೇರ್ಪಡಿಸಿದರೇಕೆ ?" ಅಥವಾ ಶೋಚನೀಯ ಮೃತ್ಯುವಿನ ಎದುರು ನಿಂತು, ರೋಹಿಣಿ (***ಕೃಷ್ಣಕಾಂತೇರ್ ವಿಲ್***, 1878) ಹೇಳುತ್ತಾಳೆ: "ಏಕೆ ಸಾಯೋದು ?" ಆಗ ಬಂಕಿಮರ ನಾಯಕಿಯರ ತತ್ವ ನಮಗರ್ಥವಾಗುತ್ತದೆ. ಅವರುಗಳು ತತ್ವ, ಸಂಸ್ಕಾರ, ಪದ್ಧತಿಗಳೆದುರು, ಜೀವನಾರ್ಥವನ್ನು ಸಮರ್ಪಿಸಿ ಕುಳಿತು ಬಿಡುವುದಿಲ್ಲ. ಅವರು ಜೀವನವನ್ನು ರಕ್ತ – ಮಾಂಸ, ಕಾಮ – ಪ್ರೇಮಗಳಲ್ಲಿ ದೇಹ ಹಾಗೂ ಆತ್ಮಗಳಲ್ಲಿ ಅರ್ಥ ಮಾಡಿಕೊಳ್ಳಬಯಸುತ್ತಾರೆ. ಈ ಮಾತು ಕೇವಲ

ರೋಹಿಣಿ ಹಾಗೂ ಶೈವಲಿನಿ ಸಂಬಂಧದಲ್ಲಿ ಮಾತ್ರ ಸತ್ಯ ಅಂತೇನಲ್ಲ. ಈ ಮಾತು ಪದ್ಮಾವತಿ (*ಕಪಾಲ ಕುಂಡಲ*, 1866)ಕುಂದ (*ವಿಷವೃಕ್ಷ*, 1873)ಅಷ್ಟೇ ಅಲ್ಲ ಇಂದಿರಾರ (*ಇಂದಿರಾ*, 1873) ಸಂಬಂಧದಲ್ಲಿಯೂ ಸತ್ಯ. ಟ್ರಾಜಿಕ್ ಪರಿಣಾಮ ಹಾಗೂ ಕಾಮಿಕ್ ಪರಿಸಮಾಪ್ತಿಯಲ್ಲಿ ಬಂಕಿಮರ ನಾಯಕಿಯರು ಅಜೇಯರು. ಅವರ ಸಂಭಾವಿತ ನಾಯಕರುಗಳ ಪೈಕಿ ಅಮರನಾಥ (*ರಜನಿ*, 1877) ಸಾಂಪ್ರದಾಯಿಕ, ಟ್ರ್ಯಾಜಿಡಿಯ ಮೌಲ್ಯದಲ್ಲಿ ಬಿದ್ದ ಏಕಮಾತ್ರ ಪಾತ್ರವಲ್ಲ. ವಿಚ್ಛಿನ್ನತೆಯಲ್ಲಿ, ವಿಷಾದದಲ್ಲಿ, ಹೊಣೆಗಾರಿಕೆಯಲ್ಲಿ ಅವನು ಆಧುನಿಕ ಪಾತ್ರಗಳ ಅಗ್ರದೂತ; ಅವನು ಕೊನೆಯುವರೆಗೂ ಯಾವುದರೊಂದಿಗೂ ಹೊಂದಿಕೊಳ್ಳಲು ಸಾಧ್ಯವಾಗುವುದಿಲ್ಲ. *ಕೃಷ್ಣಕಾಂತೇರ್ ವಿಲ್* ಕಾದಂಬರಿಯ ಗೋವಿಂದಲಾಲ ಅವನ ಅಚರಿತಾರ್ಥ ಜೀವನದಲ್ಲಿ ಸನ್ಯಾಸ ತೆಗೆದುಕೊಂಡಿದ್ದ; ಈಶ್ವರನ ಅನ್ವೇಷಣೆಯಲ್ಲಿ ಹೊರಟು ಹೋಗಿದ್ದ. ಅಮರನಾಥ ಕಾಶ್ಮೀರಕ್ಕೆ ಹೊರಟು ಹೋಗಿದ್ದ. ಇವೆರಡರ ಕೊನೆಯ ಪ್ರಸ್ಥಾನ ಪಲಾಯನವಾಗಿದೆ.

ಖಂಡಿತವಾಗಿಯೂ, ಬಂಕಿಮ್‌ಚಂದ್ರರು ದೊಡ್ಡ ಮೌಲ್ಯದ ಕಾದಂಬರಿಕಾರರು. ಯಾವುದೇ ಒಬ್ಬ ಕಾದಂಬರಿಕಾರನ ಮೌಲ್ಯ ನಿರ್ಧರಿಸಲ್ಪಡುವುದು ಆತನ ಕಾಲಮಾನದ ನಕ್ಷೆಯಲ್ಲಿ. ವ್ಯಕ್ತಿ ಜೀವನದ ಯಾವ ಸಮಸ್ಯೆಯನ್ನು ಅವರು ಗುರುತಿಸುತ್ತಾರೋ ಅದರ ಪ್ರತಿಬಿಂಬವನ್ನು ಅವರ ಕಾದಂಬರಿಯ ಪಾತ್ರ ಚಿತ್ರಣದಲ್ಲಿ ಕಾಣಬಹುದು. ಅಮರನಾಥರಂತಹ ಪಾತ್ರವನ್ನು *ರಜನಿಯ* ವಿಶಿಷ್ಟ ಟೆಕ್ನಿಕಲ್ಲದೇ ಬೇರೆ ರೀತಿ ವ್ಯಕ್ತ ಮಾಡಲಾಗುವುದಿಲ್ಲ. ಅದೇ ಸೂತ್ರದಿಂದಲೇ, ನಾವು ರವೀಂದ್ರನಾಥರ ಕಾದಂಬರಿಯ ಬಗ್ಗೆ ಯೋಚಿಸಿದರೆ, ಅವರಲ್ಲಿ ವ್ಯಕ್ತಿಯ ಸಾಮಾಜಿಕ ಸತ್ತೆಯ, ಸಂಕಟದ ಸಮಸ್ಯೆ ಪ್ರಧಾನವಾಗಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಮನಸ್ಸಿಗೆ ಮೊದಲು ಬರುವುದು, ವಿನೋದಿನಿಯ ಕಥೆ (*ಚೋಕೇರ್ ಬಾಲಿ*, 1903). ಸ್ವಾರ್ಥ ಸಮಾಜದಲ್ಲಿ ಎಲ್ಲಿ ಹೆಂಗಸರನ್ನು ಸಂಪತ್ತಿನ ಅಳತೆಗೋಲಿನಿಂದ ಅಳೆಯಲಾಗುವುದೋ ಅಲ್ಲಿ ಒಂಟಿ ಹೆಂಗಸೊಬ್ಬಳು ತನ್ನ ಶುದ್ಧತೆಯ ಚಿಲುಮೆಯನ್ನು, ಯಾವ ರೀತಿ ಹುಡುಕಿ ಪಡೆದುಕೊಂಡಳೆನ್ನುವುದೇ ವಿನೋದಿಯ ಕಥೆ. ರವೀಂದ್ರನಾಥ ಹಾಗೂ ಬಂಕಿಮ್‌ಚಂದ್ರರ ಕಾದಂಬರಿಯ ಪ್ರತಿಭೆಯ ವಿಚಾರದಲ್ಲಿ ಯಾರೊಬ್ಬರೂ ಹೆಚ್ಚು ಕಡಿಮೆಯಲ್ಲ. ಆದರೆ ರವೀಂದ್ರರು ಇತಿಹಾಸದ ಅನುಕೂಲ ಪಡೆದಿದ್ದರು. ಇಪ್ಪತ್ತನೇ ಶತಮಾನದ ಮೊದಲ ದಶಕದಲ್ಲಿ ವಂಗ ಭೂಮಿಯಲ್ಲಿ ಆಂಗ್ಲ ಸರಕಾರದ ವಿರುದ್ಧ ಸ್ವದೇಶಿ ಆಂದೋಲನದ ಕಿಡಿ ಎಚ್ಚೆದ್ದಿತು. ರವೀಂದ್ರರು ಆ ಆಂದೋಲನದ ಪ್ರತ್ಯಕ್ಷ ಭಾಗಿಗಳಾಗಿದ್ದರು. ಅದರ ಫಲವಾಗಿ ಅವರಿಗೆ ಬಹಳಷ್ಟು ಅನುಭವ ದೊರಕಿತು. ಆದರೆ ಅದೇ ಬಂಕಿಮ್‌ಚಂದ್ರರಿಗೆ ಕೇವಲ ಅದರ ಆಭಾಸವಾಗಿತ್ತು ಮಾತ್ರ. ಸ್ಪಷ್ಟತೆಯನ್ನು ನೀಡಿರಲಿಲ್ಲ.

ರವೀಂದ್ರರು ತಮ್ಮ ಮಹಾಕಾವ್ಯದಂತಿರುವ ಕಾದಂಬರಿ *ಗೋರಾದಲ್ಲಿ* (1910) ಆಂಗ್ಲ ಶಿಕ್ಷಿತ ಭಾರತೀಯ ಮಧ್ಯಮ ವರ್ಗದವರ ಸಂಕಟ, ಅವರ ಆಶಯ ಹಾಗೂ

ಸಾಧನೆಯ ಮೂಲಭೂತ ನಿರರ್ಥಕತೆಯ ಬಗ್ಗೆ ಮೊದಲು ಬೊಟ್ಟು ಮಾಡಿ ತೋರಿಸಿದರು. *ಗೋರಾದ* ಮೊದಲು, ಒಂದು ಅತ್ಯಂತ ಕಾರುಣ್ಯಜನಕ ಕಥೆ *ಮೇಘ ರೌದ್ರ* (1894) ದಲ್ಲಿಯೇ ಅವರು ಈ ಕೆಲಸವನ್ನು ಪ್ರಾರಂಭಿಸಿದ್ದರು. ಭಾರತೀಯತ್ವವೆಂದರೆ ಹಿಂದುತ್ವ ಅಥವಾ ಬ್ರಹ್ಮತ್ವವಲ್ಲ. ಭಾರತೀಯತ್ವ ವಿಶ್ವಮಾನವನ ಸ್ವನಿರ್ಭರ ಭಾರತೀಯ ಅಂಶ. ನಾಯಕ ಗೋರಾ ಯಾವ ರೀತಿ ಅದನ್ನು ಪಡೆಯಲು ಸಿದ್ಧನಾದನೆನ್ನುವುದೇ ಈ ಕಾದಂಬರಿಯ ವಸ್ತು.

*ಗೋರಾ, ಘರೇ ಬಾಯಿರೇ* (1915) ಹಾಗೂ *ಚಾರ್ ಅಧ್ಯಾಯ್* (1934) ಈ ಮೂರು ಕಾದಂಬರಿಗಳ ಹಿಂದೆ, ರವೀಂದ್ರರ ಸ್ವದೇಶಿ ಜೀವನದ ಬಗೆಗಿನ ಆಸ್ಥೆಯನ್ನು ಗಮನಿಸಬಹುದು. *ಘರೇ ಬಾಯಿರೇ* ಬರೆದಾಗಲೇ ಅದೇ ಸಮಯಕ್ಕೆ ರವೀಂದ್ರರು *ಚತುರಂಗ*ವನ್ನು ಬರೆದರು. ಕೇವಲ ಅಸಾಧಾರಣ ದೈಹಿಕ ಬೆಳಕಿನಲ್ಲಷ್ಟೆ ಅಲ್ಲ, ಅರೂಪನ ಜೊತೆ ಒಂದಾಗುವ ಮತ್ತಿನಲ್ಲಿ ಶಚೀಶ ಹಾಗೂ ಜೀವನದಲ್ಲಿ ಒಂದಾಗಬೇಕೆಂಬ ಮತ್ತಿನಿಂದ ದಾಮಿನಿ ಸಮಾಂತರಾಳದ ಚಿಹ್ನೆಯಿಂದಲೇ ಜೀವನ ಅಥವಾ ಈಶ್ವರ ಎಂಬುದನ್ನು ಅರಿತರು. ಅವಳು ಯಾರನ್ನು ಬೇಕಾದರೂ ಹುಡುಕಿಕೊಳ್ಳಲಿ, ಅದನ್ನು ಪಡೆಯುವ ಪ್ರಯತ್ನ ಹಾಗೂ ಸಾಧನೆಯೇ ನಿಜವಾದ ವಿಷಯ. ಇದರಿಂದಾಗಿಯೇ ಆ ಪುಸ್ತಕ ಅನನ್ಯ. ದಾಮಿನಿಯದು ಆಶ್ಚರ್ಯಕರ ಪಾತ್ರ. ರವೀಂದ್ರನಾಥರ ಸಮಸ್ತ ನಾಯಕಿಯರುಗಳು, ಅವಳು ವಿನೋದಿನಿಯೇ ಆಗಿರಲಿ ಅಥವಾ ದಾಮಿನಿಯೇ ಆಗಿರಲಿ ಅಥವಾ *ಯೋಗಾಯೋಗ* ಕಾದಂಬರಿಯ ಕುಮೂವೇ ಆಗಿರಲಿ ವಿಭಿನ್ನ ಪರಿಸ್ಥಿತಿಗಳಲ್ಲಿ ಅವರುಗಳು ವಿವಿಧ ರೀತಿಯಲ್ಲಿ ತಮ್ಮ ಸ್ವಂತಿಕೆಯನ್ನು ಹುಡುಕಿಕೊಳ್ಳುವ ಪ್ರಯತ್ನ ಮಾಡುತ್ತಾರೆ. *ಘರೇ ಬಾಯಿರೆ*ಯ ವಿಮಲಳಿಗೆ ಅದನ್ನು ಟ್ರಾಜೆಡಿಯ ವಿರಕ್ತಿಯ ದಾರಿಯನ್ನು ಹಿಡಿದು ಹುಡುಕಿಕೊಳ್ಳಬೇಕಾಯಿತು. ಆದರೂ ಇಡೀ ಕಾದಂಬರಿಯಲ್ಲಿ ಅವಳ ತರಹ ಜೀವ ತುಂಬಿದ ವ್ಯಕ್ತಿ ಬೇರಿನ್ನಾರು ಇಲ್ಲ. ಕಾದಂಬರಿಕಾರ ರವೀಂದ್ರರು ಬಂಗಾಳಿ ಸಾಹಿತ್ಯದ ಉತ್ತುಂಗ ಸ್ಥಿತಿಯಲ್ಲಿ ಇದ್ದಾಗ ಶರಶ್ಚಂದ್ರರು ಕಾಣಿಸಿಕೊಂಡರು. ಬಂಕಿಮ್ ಹಾಗೂ ರವೀಂದ್ರನಾಥರ ತರಹ ತಾತ್ವಿಕ ಹಾಗೂ ಬೌದ್ಧಿಕ ವಾತಾವರಣ ಅವರ ಕಾದಂಬರಿಯಲ್ಲಿ ಕಂಡುಬರಲಿಲ್ಲ. ಒಂದು ವೇಳೆ ಅವರು ಬಯಸಿದ್ದರೂ ಅದು ವ್ಯರ್ಥವಾಗಿತ್ತು. ಯಾವ ರೀತಿ *ಶೇಷಪ್ರಶ್ನೆ* (1931)ಅವರ ವ್ಯಾಪ್ತಿಯಲ್ಲವೋ ಅದೇ ರೀತಿ. ಆದರೆ ವ್ಯಕ್ತಿ ಕಾಲದ ವಿಸ್ಮಯವನ್ನು ಯಾವ ರೀತಿ ಎತ್ತಿ ಹಿಡಿಯಲು ಸಾಧ್ಯ ಎನ್ನುವ ವಿಷಯದಲ್ಲಿ ಶರಶ್ಚಂದ್ರರ ಸಾಫಲ್ಯ ಪ್ರಶ್ನಾತೀತ. ಅವರ ಕಾದಂಬರಿಗಳ ವಿಷಯ ವಸ್ತು ಬಹಳ ಸ್ಪಷ್ಟ, ನಿಖರ. ಅವರ ಪಾತ್ರಗಳು ಗ್ರಾಮೀಣ ಮಧ್ಯಮ ವರ್ಗದ ಜನರು. ಅವರ ಮನೋವೃತ್ತಿಯೂ ಕೂಡ ಅದಕ್ಕನುಸಾರವಾದದ್ದು. ಆದರೆ ಅವರ *ನಿಷ್ಕೃತಿ* (1917) ಕಾದಂಬರಿಯು ದಿಲೀಪ್‌ಕುಮಾರ್‌ರಾಯರಿಂದ ಆಂಗ್ಲ ಭಾಷೆಗೆ *ಡೆಲಿವರೆನ್ಸ್* ಎಂಬ ಹೆಸರಿನಲ್ಲಿ ಅನುವಾದಗೊಂಡಿದ್ದು ಅದರ ಮುನ್ನುಡಿಯಲ್ಲಿ ರವೀಂದ್ರನಾಥರು ಸಾಧಾರಣ ಭಾವದಿಂದ ಏನೊಂದು ಹೇಳಿದ್ದಾರೋ ಅದು ಸರ್ವಾಂಶವೂ ಸತ್ಯ:

"ಅವರು ನಮ್ಮ ಭಾಷೆಗೆ ನವಚೈತನ್ಯವನ್ನು ತುಂಬಿದ್ದಾರೆ. ಅವರ ಕಥೆಗಳು

ನಮ್ಮ ಗಮನ ಸೆಳೆಯುತ್ತದೆ. ನಾವು ತಾರಾಶಂಕರರ ಕಾದಂಬರಿಗಳನ್ನು ಇಲ್ಲಿ ಏನು ಉಲ್ಲೇಖ ಮಾಡಿದ್ದೇವೋ ಅದಕ್ಕೂ ಮಿಗಿಲಾಗಿ ಉಲ್ಲೇಖಿಸಬಹುದು. ಅವರು ಯಾವುದೇ ನಗರದ ವಿಷಯ ಅಥವಾ ಹೆಸರುವಾಸಿ ನಗರದ ವ್ಯಾಪ್ತಿಗೆ ಸೇರಿದವರಲ್ಲ. ಕಲ್ಕತ್ತೆಯನ್ನು ಚಿತ್ರಣ ಭೂಮಿಯನ್ನಾಗಿಸಿಕೊಂಡು ನಾಗರಿಕ ಮಧ್ಯಮ ವರ್ಗದವರ ಬಗ್ಗೆ ಕಾದಂಬರಿಯನ್ನು ತಾರಾಶಂಕರರು ಬರೆಯಲಿಲ್ಲವೆಂದೇನಲ್ಲ. ಆದರೆ ಅವರು ಬರೆಯ ಹೋಗಿ ಸ್ವಲ್ಪ ಎಡವಿದ್ದಾರೆ ಎಂಬುದು ಚೆನ್ನಾಗಿ ಅರ್ಥವಾಗುತ್ತೆ. ತಾರಾಶಂಕರರ ಸಮರ್ಥ ಉತ್ತರಾಧಿಕಾರಿ ಸತೀನಾಥರ ವಿಷಯದಲ್ಲೂ ಇದೇ ರೀತಿಯಾಗಿದೆ. ಅವರ ಯಾವೊಂದು ಕಾದಂಬರಿಯೂ ಕಲ್ಕತ್ತ ಅಷ್ಟೇ ಏಕೆ, ಯಾವೊಂದು ದೊಡ್ಡ ಪಟ್ಟಣದ ಹಿನ್ನೆಲೆಯಲ್ಲೂ ಬರೆಯಲ್ಪಟ್ಟಿಲ್ಲ. ಅವರು ಮಧ್ಯಮ ವರ್ಗದ ಗ್ರಾಮೀಣ ಪರಿವಾರದ ಅವಲಂಬನೆಯ ಬಗ್ಗೆ ಒಂದು ಅಸಾಮಾನ್ಯ ಕಾದಂಬರಿ *ದಿಗ್ ಭ್ರಾಂತ್* ಬರೆದಿದ್ದಾರೆ (1966). *ತೊಂಡಾಯಿ ಚರಿತಮಾನಸ* (1949) ಅಥವಾ *ಜಾಗರಿ* (1946)ಯ ಪಾರಿವಾರಿಕ ಸಂಕಟದ ವಿಷಯದ ಮುಂದೆ *ದಿಗ್ ಭ್ರಾಂತ್*ದ ಸಾಫಲ್ಯ ಮ್ಲಾನವಾಗಿ ಬಿಡುತ್ತದೆ. ಗಮನೀಯವಾದ ಅಂಶವೆಂದರೆ ಇದೇ ಸಮಯದ ಇನ್ನೊಬ್ಬ ಪ್ರಧಾನ ಕಾದಂಬರಿಕಾರ ಅಮಿಯಭೂಷಣ ಮಜೂಮ್‌ದಾರರೂ ಕಲ್ಕತ್ತೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಅಥವಾ ನಾಗರಿಕ ಸಮಾಜವನ್ನು ಹಿನ್ನಲೆಯಾಗಿಟ್ಟುಕೊಂಡು ಯಾವ ಕಾದಂಬರಿಯನ್ನೂ ಬರೆಯಲಿಲ್ಲ. ಈ ವಿಷಯವನ್ನು ನಾವು ಪ್ರತ್ಯೇಕವಾಗಿ ಯೋಚಿಸಬೇಕು. ಬಂಗಾಳಿ ಕಾದಂಬರಿಕಾರರ ನಡುವೆ ಯಾರ್‍ಯಾರು ಪ್ರಮುಖರಾಗಿದ್ದಾರೆಯೋ ಅವರ ನಡುವೆ ಕೇವಲ ರವೀಂದ್ರನಾಥರ ಕಾದಂಬರಿಯ ಧಾಟಿಯೇ ಮೂಲತಃ ನಗರ ಹಿನ್ನೆಲೆಯಿಂದ ಕೂಡಿದ್ದು. ಬಂಕಿಮ್‌ಚಂದ್ರರ 5 ಸಾಮಾಜಿಕ ಪಾರಿವಾರಿಕ ಕಾದಂಬರಿಗಳಲ್ಲಿ ಕೇವಲ *ರಜನಿ* ಮಾತ್ರ ಕಲ್ಕತ್ತೆಯ ಹಿನ್ನೆಲೆಯುಳ್ಳಂಥದ್ದು, ಇನ್ನುಳಿದವುಗಳೆಲ್ಲ ಗ್ರಾಮೀಣ ಪರಿಸರದಲ್ಲಿ ಕಲ್ಪಿತ. *ಕಲ್ಲೋಲ*ದ ಕಥೆಗಾರರು ವಿದೇಶಿ ಹವೆ ತಗಲಿ ವ್ಯಗ್ರರಾಗತೊಡಗಿದ್ದರು. ಅವರುಗಳು ಕಲ್ಕತ್ತೆಯ ಮನಸ್ಸು, ಹವೆ, ಬಿಟ್ಟು ಬಿಡದೆ ಬೇರೆ ಉಪಾಯವೇ ಇರಲಿಲ್ಲ. ಅವರಲ್ಲಿ ಯಾರು, ತಮ್ಮ ಮನದಾಸೆಯನ್ನು ಪೂರ್ಣಗೊಳಿಸಿಕೊಳ್ಳಲು, ಗ್ರಾಮ ಬಿಟ್ಟು ಕಲ್ಕತ್ತೆಯಲ್ಲಿ ಬದುಕುಳಿಯಬೇಕಾಯಿತೋ ಅವರೇ ಮಾಣಿಕ್ ಬಂಧೋಪಾಧ್ಯಾಯರು. ಅವರ ಕಾದಂಬರಿಗಳಲ್ಲಿ ಪಾತ್ರದ ಜಟಿಲತೆಗಿಂತ ಕಲ್ಕತ್ತೆಯ ಅಂತರ್ಗತ ಮಾನಸಿಕ ತುಮುಲವೇ ಹೆಚ್ಚಾಗಿ ಮಾರ್ಮಿಕವಾಗಿತ್ತು. *ಶಹರ್‌ತಲಿ* ಕಾದಂಬರಿ ಇದಕ್ಕೆ ಸಾಕ್ಷಿ.

ದ್ವಿತೀಯ ಮಹಾಯುದ್ಧದ ನಂತರ ಕಲ್ಕತ್ತೆಯ ಮಧ್ಯಮ ವರ್ಗದ ಜೀವನದಲ್ಲಿ ಅನೇಕ ಏರಿಳಿತ ಕಂಡುಬಂದವು. ಅವರು ಮನೆ ಹಾಗೂ ಹೊರಗೂ ಜತನದಿಂದ ಜೋಪಾನ ಮಾಡಲ್ಪಟ್ಟ ಕನಸುಗಳು ಮಣ್ಣು ಪಾಲಾದವು. ಒಡೆದ ಸ್ವಪ್ನಗಳು ಗಾಜಿನ ಚೂರುಗಳಂತೆ, ಕೇವಲ ಅವರ ವೇದನೆಯನ್ನು ಇನ್ನೂ ಹೆಚ್ಚುಗೊಳಿಸಿದ್ದವು. ಇದಕ್ಕಾಗಿ ರೂಢಿಯಾದ ವಾಸ್ತವದ ದಿಕ್ಕಿನಿಂದ ದೂರದ ಹಾಗೂ ಹತ್ತಿರದ ಅತೀತದ ಕಡೆಗೆ ಹೊರಳಿಸಲಾಯಿತು. ಐತಿಹಾಸಿಕ ರೊಮಾನ್ಸ್‌ಗೆ ಆಧುನಿಕತೆಯ ರಂಗು

ಫೆಬ್ರವರಿ ಅಂಕಣದಲ್ಲಿ ಮಧ್ಯಮ ವರ್ಗದ ಯಾವ ಚಿತ್ರಣ ಲಭ್ಯವಿದೆಯೋ ಅದರಿಂದ ಬಂಕಿಮರ ಹರ್ಷದ ಕಾರಣ ಈ ಮೊದಲೇ ನಶಿಸಿಹೋಗಿದೆ ಎಂಬುದು ಸ್ಪಷ್ಟವಾಗುತ್ತದೆ. ಮಧ್ಯಮ ವರ್ಗ ಕುಸಿದು ಬೀಳುತ್ತಿರುವುದು ಹಾಗೂ ರೂಪಾಂತರಗೊಳ್ಳುತ್ತಿರುವುದು, ಸಮಾನಾಂತರದಲ್ಲಿ ಜರುಗುತ್ತಿರುವ ಸ್ಪಷ್ಟ ಚಿತ್ರಗಳಂತೆ ಕಂಡುಬರುತ್ತದೆ. ವಿಧಿಯ ಸವಾಲನ್ನು ಎದುರಿಸಬಲ್ಲನೆಂಬ ನಾಯಕರುಗಳು ಆಗ ದುರ್ಲಭ್ಯವಾದರೂ, ಕೆಲವೊಂದು ಲೇಖಕರನ್ನು ನ್ಯೂಟ್ ಹ್ಯಾಮಸನ್ ಹಾಗೂ ಮ್ಯಾಕ್ಸಿಮ್ ಗೋರ್ಕಿ ಪ್ರಭಾವಿತಗೊಳಿಸಿದ್ದರು. ಆ ಪ್ರಭಾವ ಕೇವಲ ಫ್ಯಾಷನ್ ಬದಲಿಸುವ ಪ್ರಯತ್ನ ಮಾತ್ರವಾಗಿತ್ತು. ಪ್ರೇಮೇಂದ್ರ ಮಿತ್ರರ (1904-88) ಚಿಕ್ಕ ಕಥೆಗಳಲ್ಲಿ ಮಧ್ಯಮ ವರ್ಗದವರು ಭವಿಷ್ಯಹೀನ ಅಂಧಕಾರವನ್ನು ಸ್ವೀಕಾರ ಮಾಡಿರುವ ಬಗ್ಗೆ ಅಥವಾ ಒಪ್ಪಿಕೊಂಡಿರುವ ಬಗ್ಗೆ ಸೂಚನೆ ದೊರಕುತ್ತದೆ.

ಮಾಣಿಕ್ ಬಂಧೋಪಾಧ್ಯಾಯರ (1906–1985) *ಪುತುಲ್ ನಾಚೇರ್ ಇತಿಕಥಾ* (1936) ಕಾದಂಬರಿಯೂ ಇದೇ ವಿಶಿಷ್ಟ ಕಾಲದ ಪ್ರತಿನಿಧಿಯಾಗಿದೆ. ಶಶಿ ಏನೇ ಮಾಡಿದರೂ ಈ ಪ್ರೇಮವನ್ನು ಹಾಗೂ ಸಮಗ್ರ ಅಸ್ತಿತ್ವವನ್ನು ಸಾಂದರ್ಭಿಕ ಹಾಗೂ ವೈಯಕ್ತಿಕ ವಿಧಿಯ ನಾಗಪಾಶದಿಂದ ಹೊರತರಲು ಸಾಧ್ಯವಾಗುವುದಿಲ್ಲ. ಆಕಾಂಕ್ಷೆಯ ಬೆಂಕಿ ಹೊತ್ತಿಸಿದರೂ ಅವನಿಂದ ಯಾರನ್ನೂ ಸುಡಲಾಗುವುದಿಲ್ಲ, ತನ್ನಲ್ಲಿಯ ಶೀತಲವನ್ನು ಅದರ ಕಿಡಿಯಲ್ಲಿ ಕರಗಿಸಲು ಸಾಧ್ಯವಾಗುವುದಿಲ್ಲ. ಶಶಿ ಯುವಕರ ಪ್ರತಿನಿಧಿ. ಎಲ್ಲಿ ವ್ಯಕ್ತಿ ಭವಿಷ್ಯದ ಸೃಷ್ಟಿಕರ್ತನೋ, ಈ ಹೋಲಿಕೆ ರಾಜನೈತಿಕ ಕ್ಷೇತ್ರದಲ್ಲಿ ಹಾಗೂ ಅಸಾಮಾಜಿಕ ಕ್ಷೇತ್ರದಲ್ಲಿ ಮತ್ತು ವಿವಿಧ ರೀತಿಯಲ್ಲಿ ಯಾರಿಗೆ ಗೋಚರಿಸುತ್ತದೋ, ಶಶಿ ಅದೇ ಸಮಯದ ಪ್ರತಿನಿಧಿ. ಇದೇ ಸಮಯದಲ್ಲಿ ಬರೆಯಲ್ಪಟ್ಟಿದ್ದು ವಿಭೂತಿಭೂಷಣ ಬಂಧೋಪಾಧ್ಯಾಯರ *ಪಥೇರ್ ಪಾಂಚಾಲಿ* (1923). ಆಶ್ಚರ್ಯದ ವಿಷಯವೆಂದರೆ, ಯಾವ ರೀತಿ ಯುವಕ ಶಶಿ ಜೀವನದ ಜಟಿಲತೆಯ ಇತಿಹಾಸವನ್ನು ಅರ್ಥ ಮಾಡಿಕೊಂಡಿದ್ದನೆಂಬುದನ್ನು ಅರ್ಥ ಮಾಡಿಕೊಳ್ಳುತ್ತಲೇ ಕಾಲ ಕ್ರಮದಲ್ಲಿ ತನ್ನ ಎಲ್ಲ ಸಂಕಲ್ಪಗಳನ್ನು ಅವನು ತೇಲಿ ಬಿಡಬೇಕಾಗಿ ಬಂದಿದ್ದು. *ಪಥೇರ್ ಪಾಂಚಾಲಿ*ಯ ನಾಯಕ ಅಪು ಹಾಗೆ ನೋಡಿದರೆ ಮಣ್ಣಿನ ಮಾಯೆ ಹೇಗಿರುತ್ತೆ, ಮನುಷ್ಯ ಅದಕ್ಕೆ ಹೇಗೆ ಮೋಹಗೊಳ್ಳುತ್ತಾನೆ ಎಂಬುದನ್ನು ಅರ್ಥ ಮಾಡಿಕೊಂಡಿದ್ದ. ಅಲ್ಲಿಯೇ ಅನಂತತೆಯ ಇಂಗಿತ ಅಡಗಿದೆ. ಮಾಣಿಕರು ವೈಜ್ಞಾನಿಕರು; ವಿಭೂತಿ ಭೂಷಣರು ದಾರ್ಶನಿಕರು. ಇನ್ನೊಂದು ಕಡೆ ತಾರಾ ಶಂಕರರು (1898–1917) ಸಮಾಜ ಹಾಗೂ ವ್ಯಕ್ತಿ ಜೀವನದ ಸಂಬಂಧದ ಬಗ್ಗೆ ಅರ್ಥ ಮಾಡಿಕೊಳ್ಳಲು ಬಯಸಿದ್ದರು. ಈ ಮಾತು ಸತ್ಯ ಎಂಬುದನ್ನು ಅವರ ಅಸಾಧಾರಣವಾಗಿ ಚಿಂತಿಸಲು ಪ್ರೇರೇಪಿಸುವ ಸಾಮಾಜಿಕ ಕಾದಂಬರಿ *ಗಣದೇವತ* (1942) ಹಾಗೂ *ಪಂಚಗ್ರಾಮ* (1943) ದಲ್ಲಿ ಕಾಣಬಹುದಾಗಿದೆ. ಅವರ ಇನ್ನೊಂದು ಕಾದಂಬರಿ *ಹಾಂಸೂಲಿ ಬಾಂಕೇರ್ ಉಪಕಥಾ* (1947) ಕೂಡಾ ಇದಕ್ಕೆ ಒತ್ತು ನೀಡುತ್ತದೆ. ಅವರ *ಕವಿ* (1942) ಕಾದಂಬರಿಯಲ್ಲಿ ವ್ಯಕ್ತಿಯ ಜೀವನದಲ್ಲಿ ತನ್ನತನವನ್ನುಳಿಸುವ ಭಾವ ಸಾರ್ಥಕವಾಗಿ ಮೂಡಿ ಬಂದಿದೆ. ಇಲ್ಲಿ ಒಂದು ವಿಷಯ

ಬಂಗಾಳದ ಪರಿಚಿತ ವಲಯಗಳ ಮೇಲೆ ಹೊಸ ದೃಷ್ಟಿಯ ಬೆಳಕನ್ನು ಚೆಲ್ಲಿವೆ. ಇದರಿಂದಾಗಿ ಜನರ ವ್ಯಕ್ತಿತ್ವದ ಘರ್ಷಣೆಯ ಮಹತ್ವವನ್ನು ಎತ್ತಿ ತೋರಿವೆ.''

ಅವರು ಸೃಷ್ಟಿಸಿದ ಶ್ರೀಕಾಂತ, ಇಂದ್ರನಾಥ, ಜೀವಾನಂದ ಹಾಗೂ ರಾಜಲಕ್ಷ್ಮಿ, ಅನ್ನದಾ, ಕಿರಣಮಯಿ ಮುಂತಾದ ಪಾತ್ರಗಳು ಬಂಗಾಳಿ ಕಾಲಮಾನದ ಅಂತಃಪುರದಲ್ಲಿ ಸ್ಥಿರಸ್ಥಾನವನ್ನು ಗಳಿಸಿಕೊಂಡು ಬಿಟ್ಟಿವೆ. 'ಪ್ರೇಮವೇ ಮಾನವೀಯ ಅಸ್ತಿತ್ವದ ಸಾರ' – ಈ ಮಾತುಗಳನ್ನು ಹೇಳಲೆಂದೇ ಅವರು ಬಂದಿದ್ದರು ಮತ್ತು ಈ ಮಾತನ್ನು ಅವರು ಬಹಳ ಹೃದಯಂಗಮವಾದ ಭಾಷೆಯಲ್ಲಿ ಹೇಳಿ ಹೋಗಿದ್ದಾರೆ.

ಪ್ರಥಮ ಮಹಾಯುದ್ಧದ ನಂತರ ರಚಿತವಾದ ಶರಶ್ಚಂದ್ರರ *ಶ್ರೀಕಾಂತ* ಮತ್ತು ರವೀಂದ್ರನಾಥರ *ಶೇಷೇರ್ ಕವಿತಾ* ಇವೆರಡೂ ಒಂದೇ ತತ್ವದ ಕಡೆ ನಮ್ಮ ಗಮನವನ್ನು ಸೆಳೆಯುತ್ತವೆ. *ಶ್ರೀಕಾಂತ*ದ ನಾಯಕ ಶ್ರೀಕಾಂತ ಅಥವಾ *ಶೇಷೇರ್ ಕವಿತಾ*ದ ನಾಯಕ ಅಮಿತ ಇವರಿಬ್ಬರಲ್ಲಿ ಯಾರೊಬ್ಬರೂ ಗೋರಾನ ಹತ್ತಿರ ತಲುಪಲು ಸಮರ್ಥರಾಗುವುದಿಲ್ಲ. ಇವರಿಬ್ಬರಲ್ಲೂ ಯಾರೊಬ್ಬರಿಗೂ ನಿಶ್ಚಿತ ಹಿನ್ನೆಲೆ ಇಲ್ಲ. ಅಮಿತನ ಹಿನ್ನೆಲೆ ಶಿಲ್ಲಾಂಗದ ಬೆಟ್ಟವಾಗಿದ್ದು, ರವೀಂದ್ರರಿಗೆ ಪ್ರಿಯವಾದ ಯಾವೊಂದು ಸಮತಲ ಕ್ಷೇತ್ರವೂ ಕಂಡುಬರುವುದಿಲ್ಲ – ಅದರಲ್ಲೂ ವಂಗಭೂಮಿಯಂತು ಅಲ್ಲವೇ ಅಲ್ಲ. ಶ್ರೀಕಾಂತ ಸದಾ ಸುತ್ತುತ್ತಲೇ ಇರುತ್ತಾನೆ. ಅವನಿಗೆ ಯಾವೊಂದು ನಿಶ್ಚಿತ ತಾಣವೂ ಇರುವುದಿಲ್ಲ. ಮಾಡಲು ನಿರ್ದಿಷ್ಟ ಗುರಿ ಎಂಬುದಿಲ್ಲ. ಅವನ ಬಳಿ ಯಾವುದೇ ಜಯದ ಗೌರವವಾಗಲಿ, ಅಪಜಯದ ಟ್ರಾಜಿಕ್ ಮಹಿಮೆಯಾಗಲಿ ಕಂಡುಬರುವುದಿಲ್ಲ. *ಶೇಷೇರ್ ಕವಿತಾ*ದ ಅಮಿತನೂ ಹೆಚ್ಚು ಕಡಿಮೆ ಇವನಂತೆಯೇ ಕಂಡುಬರುವುದಿಲ್ಲವೇ! ಅಮಿತನ ಅಸಂಗತ ನಾಗರೀಕ ಜೀವನದ ದೃಷ್ಟಿಯಲ್ಲಿ ಒಂದು ರೀತಿಯ ಶೂನ್ಯ, ಉದ್ದೇಶಹೀನತೆ ಕಂಡುಬರುತ್ತದೆ. ಅವನು ತನ್ನ ಮಾತಿನ ಮೋಡಿಯಲ್ಲೇ ಮುಳುಗಿರುತ್ತಾನೆ. ಅವನ ಮಾತುಗಳು ಟಂಕಸಾಲೆಯಿಂದ ಹೊರಬಂದ ನಾಣ್ಯಗಳಂತೆ ಕಂಡುಬಂದರೂ ಅವು ತುಂಬಾ ಶಬ್ದವನ್ನೇನೋ ಮಾಡುತ್ತವೆ. ಈ ಕಾರಣಕ್ಕಾಗಿಯೇ ಅವುಗಳ ಮೇಲೆ ಸಂದೇಹವುಂಟಾಗುವುದು. ಎಲ್ಲಿ ಆದರ್ಶವಾದಿ ಗೋರಾ? ಹಾಗೂ ಎಲ್ಲಿ ವಾಕ್‌ನಿಷ್ಠ ಅಮಿತ!

ಇದರ ನಡುವೆಯೇ ಪ್ರಥಮ ಯುದ್ಧದ ನಂತರ ವಿಶ್ವವ್ಯಾಪಿ ಬೀಸಿದ ಅಲೆಯಲ್ಲಿ ಬಂಗಾಳಿ ಸಂಭಾವಿತ ವರ್ಗದ ಕನಸುಗಳು ಕೊಚ್ಚಿ ಹೋದವು. *ಕಲ್ಲೋಲ* ಪತ್ರಿಕೆ ಪ್ರತಿಯೊಂದು ಅಂಶದಲ್ಲೂ ಈ ಮಾನಸಿಕತೆಯ ಪ್ರತೀಕವಾಗಿದೆ. ಅದರ ಬಂಡಾಯದ ದನಿ ಎಷ್ಟೇ ನಿಸ್ಸಾರವಾಗಿದ್ದರೂ ಆದರ ಪ್ರಮುಖ ಲೇಖಕರುಗಳು, ಮಧ್ಯಮ ವರ್ಗದ ಅಸಹಾಯಕತೆ ಹಾಗೂ ಗೋಳಿನ ಬಗ್ಗೆ ಸಚೇತರಾಗಿದ್ದರು. 1884 ರಲ್ಲಿ ಬಂಕಿಮ್‌ಚಂದ್ರರು *ಪ್ರಚಾರ* ಪತ್ರಿಕೆಯಲ್ಲಿ ಮಧ್ಯಮ ವರ್ಗದವರ ಕೈಗೆ ನೇತೃತ್ವ ಬಂದಿರುವುದರ ಬಗ್ಗೆ ತಮ್ಮ ಹರ್ಷ ವ್ಯಕ್ತಪಡಿಸಿದ್ದರು. ಇದಾಗಿ 43 ವರ್ಷ ಕಳೆದು ಹೋಗಿದೆ. ಪ್ರಥಮ ಮಹಾಯುದ್ಧ ಮುಗಿದು ಹೋಗಿದೆ. *ಕಲ್ಲೋಲ*ದ 1927ರ

ಬಳಿದರೆ ಕಾಲವನ್ನು ಹಿಂತಿರುಗಿ ತರಬಹುದು. ಅದರಲ್ಲಿ ತಪ್ಪೇನಿದೆ ? ಈ ಕಾಲದಲ್ಲಿ ಬಹಳಷ್ಟು ಸಮರ್ಥ ಕಾದಂಬರಿಕಾರರು ಇಂಥ ಕಾದಂಬರಿಯನ್ನು ಬರೆದಿದ್ದಾರೆ. ತಾರಾಶಂಕರರು *ರಾಧಾ* ಹಾಗೂ *ಗನ್ನಾ ಬೇಗವ್* ಬರೆದರು. ವಿಭೂತಿ ಭೂಷಣರು *ಇಚ್ಛಾಮತಿ*, ಪ್ರಮಥನಾಥ ಬಿಷಿಯವರು (1901–1965) *ಕೇರೀ ಸಾಹಬೇರ್ ಮುನ್ಷಿ* ವಿಮಲ ಮಿತ್ರರು *ಬೇಗವ್ ಮೇರಿ ಬಿಶ್ವಾಸ* ಬರೆದರು. ಹಾಗಾದರೂ ಕಲ್ಕತ್ತೆಯ ಮಣ್ಣಿನಲ್ಲಿ ಕಾದಂಬರಿಕಾರರು ಯಾವ ರೀತಿ ಸವಾಲನ್ನು ಎದುರಿಸುವರೋ ಅದನ್ನು ಅವರು ಚಿತ್ರಿಸಲು ಸಾಧ್ಯವಾಗಲಿಲ್ಲ. 1946 ರ ಕಲ್ಕತ್ತೆಯ ಹಿನ್ನೆಲೆಯಲ್ಲಿ ತಾರಾ ಶಂಕರರ *ಜಡ ಓ ಜರಾ ಪಾತಾ* ಬರೆಯಲ್ಪಟ್ಟಿತು. ಹಾಗೆಯೇ ಮಾಣಿಕ್ ಬಂಧೋಪಾಧ್ಯಾಯರ *ಚಿನ್ಹ* ಬರೆಯಲ್ಪಟ್ಟಿತು. ಆದರೆ ಈ ಅಗ್ನಿಕಾಂಡ ತನ್ನೆಲ್ಲ ಶಕ್ತಿಯನ್ನು ಆಗಸ್ಟಿನಲ್ಲಿ ಛಿದ್ರವಾದ ಕಲ್ಕತ್ತೆಯ ಕಪ್ಪು ಭೀಭತ್ಸ ಹೊಗೆಯಲ್ಲಿ ಕಳೆದುಕೊಂಡುಬಿಟ್ಟಿತು. ಎಲ್ಲವನ್ನು ಕಳೆದುಕೊಂಡಾಗಲೂ, ಎಲ್ಲಕ್ಕಿಂತ ನೋವುಂಟು ಮಾಡಿದ್ದು ಕನಸುಗಳನ್ನು ಕಳೆದುಕೊಂಡದ್ದು. ಈ ಶತಮಾನದ ನಾಲ್ಕು ಹಾಗೂ ಐದರ ದಶಕದಲ್ಲಿ ಯಾರೆಲ್ಲ ಕಾದಂಬರಿ ಬರೆದಿದ್ದಾರೋ ಅವರೆಲ್ಲ ಮಧ್ಯಮ ವರ್ಗದ ಮನೋಕಾಂಕ್ಷೆಯನ್ನು ಅರಿತು ಒಂದಿಷ್ಟು ಸಂಧಾನ ಮಾಡಿದ್ದಾರೆ. ಇವರಲ್ಲಿ ಪ್ರತಿಯೊಬ್ಬರೂ ಪ್ರತಿಭಾಶಾಲಿ ಗದ್ಯ ಲೇಖಕರು. ಮುಖ್ಯವಾಗಿ ಇವರುಗಳು ದ್ವಿತೀಯ ಮಹಾಯುದ್ಧ ಅಥವಾ ಅದರ ನಂತರ ಕಲ್ಕತ್ತೆಯಲ್ಲಿ ಅನುಭವ ಪಡೆದವರು. ವಿಮಲ್ ಕರ್ ಅವರ *ದೇವಾಲ*, ಅಸೀಮ್‌ರಾಯರ *ಏಕಾಲೇರ್ ಕಥಾ*, ನರೇಂದ್ರನಾಥ ಮಿತ್ರರ *ಚೇನಾಮಹಲ್*, ಸಂತೋಷ್ ಕುಮಾರ್ ಘೋಷರ *ಕಿನೂ ಗೋಲಾರ್ ಗಲಿ*, ಜ್ಯೋತೀಂದ್ರ ನಂದಿಯವರ *ಬಾರೋ ಘರ್ ಏಕ್ ಉಠಾನ್* ಈ ಕಾದಂಬರಿಗಳ ಪಾತ್ರಗಳು ಎಲ್ಲವೂ ವಿಶಿಷ್ಟವಾಗಿವೆ. ಕೇವಲ ಒಂದೇ ಒಂದು ಆಕ್ಷೇಪಣೆ ಏನೆಂದರೆ 21ರ ಶತಕದ ಮಧ್ಯಮ ವರ್ಗದವರ ಉತ್ತರಾಧಿಕಾರಿಗಳ ಬಗ್ಗೆ ಅವರು ಅಷ್ಟೊಂದು ಕಾತುರರಾಗಿರಲಿಲ್ಲ. ಕಾತುರರಾಗುವ ಕಾರಣವೂ ಇರಲಿಲ್ಲ.

*ಆತ್ಮಪ್ರಕಾಶ* (ನವೆಂಬರ್, 1966) ಸುನೀಲ್ ಗಂಗೋಪಾಧ್ಯಾಯರ ಮೊದಲ ಪ್ರಕಟಿತ ಕಾದಂಬರಿ. ಆದರೆ *ಯುವಕ್ ಯುವತೀಯ* ಎಂಬ ಹೆಸರಿನ ಕಾದಂಬರಿಯನ್ನು ಅವರು 1959ರಲ್ಲಿ ಬರೆಯತೊಡಗಿದ್ದರು. ಅವರ ಪ್ರಥಮ ಪ್ರಕಾಶಿತ ಕಾದಂಬರಿಯೇ ಹೊರತು, *ಆತ್ಮಪ್ರಕಾಶ* ಅವರು ಮೊದಲು ಬರೆದ ಕಾದಂಬರಿಯಲ್ಲ. 1965ರಲ್ಲಿ ಸಮರೇಶ ಬಸುಗಳ *ವಿವರ* ಕಾದಂಬರಿ ಪ್ರಕಟಿತವಾಯಿತು. ಬಾಂಗ್ಲಾ ಕಾದಂಬರಿ ಜಗತ್ತಿನಲ್ಲಿ ಆಗ *ವಿವರ*ದ ಬಗ್ಗೆ ದೊಡ್ಡ ಚರ್ಚೆಯೇ ನಡೆದಿತ್ತು *ವಿವರ* ಹಾಗೂ *ಆತ್ಮಪ್ರಕಾಶ*ಗಳ ನಡುವೆ ಬಹಳ ವ್ಯತ್ಯಾಸವಿದೆ. ಆದರೂ ಎರಡೂ ಕಾದಂಬರಿಯ ನಾಯಕರುಗಳು ಅಸ್ತಿತ್ವದಲ್ಲಿ ವ್ಯರ್ಥ ತಾರ್ಕಿಕತೆಯಿಂದ ಪೀಡಿತರಾದವರೆಂಬುದು ಅರಿವಾಗುತ್ತದೆ. *ವಿವರ*ದ ನಾಯಕ, ಸುತ್ತಲಿನ ಕ್ಷೋಭೆಯಿಂದ ಆಘಾತ ಮಾಡಿಕೊಳ್ಳುತ್ತಾನೆ. ಈ ಸಮಾಜದಲ್ಲಿ ಯಾವುದೂ ವಿಶ್ವಾಸಾರ್ಹವಲ್ಲವೆನ್ನುವುದು ಈ ಕ್ಷೋಭೆಗೆ ಮೂಲ ಕಾರಣ. ಬಹಳ ಸಿಟ್ಟಿನಿಂದ ಅವನು ಸಮಸ್ತ ಸಂಪ್ರದಾಯವನ್ನು ಮುರಿದುಹಾಕಬಯಸುತ್ತಾನೆ. ಈ

ರೀತಿ ಆಘಾತ ಮಾಡುವಾಗ ಪರಾವಲಂಬನೆಯನ್ನೇ ಸ್ವಾಧೀನತೆ ಎಂದು ತಪ್ಪಾಗಿ ಭಾವಿಸುತ್ತಾನೆ. ಅದಕ್ಕೆ ತದ್ವಿರುದ್ಧವಾಗಿ ಆತ್ಮಪ್ರಕಾಶದ ನಾಯಕ ವಿವರದ ನಾಯಕನ ತರಹ ತನ್ನ ಹಿನ್ನೆಲೆಯ ಬಗ್ಗೆ ವಿಮುಖವಾಗಿಲ್ಲ. ಸುನೀಲ್, ಶೇಖರ, ಅವಿನಾಶ, ಸುವಿಮಲ, ಹಾಗೂ ಪಾರಿತೋಷ ಸುಖದುಃಖದಲ್ಲೂ, ಪರಸ್ಪರರನ್ನು ಕೊಂಡಿಯಂತೆ ಹಿಡಿದುಕೊಳ್ಳುತ್ತಾರೆ. ಕಲ್ಕತ್ತೆಯ ಹಿನ್ನೆಲೆಯಲ್ಲಿ ಕಿಶೋರಾವಸ್ಥೆಯನ್ನು ಕಳೆದು ಒಬ್ಬ ಯುವಕ ಇಲ್ಲಿಯೇ ನೆಲೆಸುತ್ತಾನೆ. ಸ್ವಾಭಾವಿಕವಾಗಿಯೇ ಆತ ಈಗಿನ್ನೂ ಮೂವತ್ತರ ಹೊಸ್ತಿಲಲ್ಲಿರುವ ಯುವಕ.

ಆ ಯುವಕ ಜೊತೆಗಾರರಿಲ್ಲದ ಒಂಟಿ, ಅಪ್ಪ–ಅಮ್ಮಂದಿರ ಪ್ರೀತಿಯನ್ನು ಬಿಟ್ಟು ಬಂದಿದ್ದ. ಜೊತೆಗೇ ಅಕ್ಕಂದಿರ ಉಪೇಕ್ಷೆಯನ್ನು ಹೊತ್ತು ತಂದಿದ್ದ. ಕಲ್ಕತ್ತೆಗೆ ಬಂದ ನಂತರ ಆ ಹುಡುಗನಿಗೆ ಸಹೃದಯ ಆತ್ಮೀಯರ ಸ್ನೇಹ ದೊರಕಿತ್ತು. ಆದರೆ ಆಕಸ್ಮಿಕ ಸಾವುಗಳು ಅವನನ್ನು ಈ ಸ್ಥಿತಾವಸ್ಥೆಯಲ್ಲೇ ನೆಲೆಸಲು ಬಿಡಲಿಲ್ಲ.

ಈ ಸಂದರ್ಭದಲ್ಲೇ ಆ ಹುಡುಗನಿಗೆ ನಿಜವಾದ ಕಲ್ಕತ್ತೆಯ ಪರಿಚಯವಾಗಲಾರಂಭಿಸುತ್ತದೆ. ನಾನಾ ರೀತಿಯ ಆಕರ್ಷಣೀಯ ಗುಪ್ತ ಜಗತ್ತಿನೊಂದಿಗೆ ಆ ಹುಡುಗ ಪರಿಚಯ ಬೆಳೆಸಿಕೊಳ್ಳುತ್ತಾನೆ. ಕೇವಲ ಅದರ ಬೆಳಕಿನ ಪ್ರಭೆಯಲ್ಲೇ ಉಳಿಯದೆ, ಕತ್ತಲಿನ ಕಡೆಯೂ ಅವನು ದಿಟ್ಟಿಸಬೇಕಾಗುತ್ತದೆ. ಇದೇ ಆ ಹುಡುಗನ ಜೀವನದರ್ಶನ. ಇದೇ ರೀತಿ ಅವನ ಜೀವನದಲ್ಲಿ ಬರುತ್ತಾರೆ ಬ್ರಜೇಶ್ವರದಾ, ಪರೀಕ್ಷಿತ, ಶೇಖರ, ಅವಿನಾಶ, ನೂರೂಲನಂತಹ ಪುರುಷರು ಹಾಗೂ ಮನೀಷ, ಛಾಯಾ, ಜಮುನಾ, ನೂರ್‌ಜಹಾನ್ ಮುಂತಾದ ಹೆಂಗಸರು. ಟ್ಯೂಬ್‌ಲೈಟ್ ಆಚೆ ಬದಿಯಲ್ಲೇ ಕಳ್ಳಬಟ್ಟಿ ಸಾರಾಯಿ ಮಾರಲ್ಪಡುತ್ತದೆಂಬುದನ್ನು ಆ ಹುಡುಗ ತಿಳಿದುಕೊಳ್ಳುತ್ತಾನೆ. ಅಲ್ಲಿಗೆ ಹೋದಾಗಲೇ ಅವನಿಗೆ ಹೌರಾ ಬ್ರಿಡ್ಜಿನ ಪಕ್ಕದಲ್ಲಿ ನಡೆಯುವ ಹಿಜಡಾ ನೃತ್ಯದ ಅಡ್ಡಾ ಇದೆ ಎನ್ನುವುದು ತಿಳಿದುಬರುತ್ತದೆ. ಆಫೀಸಿನಲ್ಲಿ, ಆಫೀಸಿನ ಹೊರಗೆ, ಸ್ನೇಹಿತರ ಗುಂಪಿನಲ್ಲಿ, ಸ್ನೇಹಿತೆಯರ ಸಾನ್ನಿಧ್ಯದಲ್ಲಿ ನಾನಾ ರೀತಿಯಲ್ಲಿ ಈ ತಪ್ಪುಗಳ ಬಗ್ಗೆ ಅರಿಯುತ್ತಾನೆ. ಇದೆಲ್ಲವೂ ಮನದ ಕಣ್ಣನ್ನು ತೆರೆಯಿಸುತ್ತದೆ. ಒಂದು ಪಾಪದಿಂದ ಮತ್ತೊಂದು ಪಾಪವನ್ನು ಕಟ್ಟಿಕೊಳ್ಳುವ ಪ್ರಯತ್ನ. ಹುಡುಗ ಒಂದೆರಡು ಬಾರಿ ಪ್ರೇಮಿಸುವ ಪ್ರಯತ್ನ ಮಾಡಿ ಇವೆಲ್ಲದರಿಂದ ಮುಕ್ತಿ ಪಡೆಯಬಯಸುತ್ತಾನೆ. ಆದರೆ ಒಂಟಿಯಾಗಿದ್ದಾಗ ಅವನೆದೆಯಲ್ಲಿ ದೂರದ ಖಾನ್ ನದಿಯ ಮೊರೆತ ಭೋರ್ಗರೆಯುತ್ತದೆ. ಅದು ಬೆಲೆ ಕಟ್ಟಲಾಗದ ವೇದನೆ. ಶೈಶವದಲ್ಲಿ ಹೊಲ ಗದ್ದೆಗಳ ನಡುವೆ ಅಡ್ಡಾಡಿದ ಇವನು, ಪೂರ್ವ ಬಂಗಾಳ ಬಿಟ್ಟು ಬರುವುದು ಅಪ್ಪ-ಅಮ್ಮಂದಿರನ್ನು ಬಿಟ್ಟು ಬರುವುದಕ್ಕಿಂತ ಹೆಚ್ಚಿನ ದುಃಖ ಎನ್ನುವುದನ್ನು ಅರಿಯುತ್ತಾನೆ. ಜೀವನದ ಸಂದಿಗ್ಧತೆ ಹುಡುಗನನ್ನು ಬೇರೊಂದು ಜಗತ್ತಿನ ಕಡೆ ಕರೆದೊಯ್ಯುತ್ತದೆ. ಅಲ್ಲಿ ಅವನಿಗೆ ಮನುಷ್ಯರ ಮೇಲಿನ ವಿಶ್ವಾಸ ಕಳೆದುಕೊಂಡುದರ ಬಗ್ಗೆ ಅರಿವಾಗುತ್ತದೆ.

ಇಷ್ಟೊಂದು ಸಂಶಯದ ನಡುವೆಯೂ ಅದೇ ಹುಡುಗ ಪ್ರಪಂಚದ ಬಗ್ಗೆ ಕರುಣಾವಶನಾಗಿ ಎಚ್ಚರಿಕೆಯಿಂದ ಹೆಜ್ಜೆ ಇಡುತ್ತಾನೆ. ಒಂದು ಹಣ್ಣನ್ನು ತಿನ್ನುವಾಗಲೂ

ಆ ಹಣ್ಣು ತನ್ನ ಜೀವ ತೆತ್ತು ತನ್ನನ್ನು ಬದುಕಿಸುತ್ತಿದೆಯೋ ಏನೋ ಎಂದೆನಿಸುತ್ತದೆ – ಅದು ಅವನಿಗೆ ಕೃತಘ್ನನಾಗಬೇಡವೆಂದು ಹೇಳುತ್ತಿದೆಯೋ ಎನ್ನುವಂತೆ. ಇಲ್ಲಿ ಹುಡುಗ ಕೃತಘ್ನನಾಗುವುದಿಲ್ಲ. ಪ್ರಪಂಚದ ಸಮಸ್ಯೆಗಳಿಗೆ ಎದುರಾಗಿ ನಿಂತು ಏನೂ ಭಯವಿಲ್ಲ, ಎಲ್ಲ ಸರಿಯಾಗಿ ಬಿಡುತ್ತೆ ಎಂದು ಹೇಳಬಲ್ಲವನಾಗುತ್ತಾನೆ.

ಕಾದಂಬರಿಯ ಕೇಂದ್ರ ಪಾತ್ರವಾದ ಈ ಹುಡುಗನ ಹೆಸರನ್ನು ಕಾದಂಬರಿಕಾರ ಸುನೀಲ್ ಗಂಗೋಪಾಧ್ಯಾಯ 'ಸುನೀಲ್' ಎಂದು ಕರೆದಿದ್ದಾರೆ. ನಿಯಮವನ್ನು ನಂಬುವುದಿಲ್ಲ ಎನ್ನುವ ಸ್ವೀಕಾರೋಕ್ತಿಯ ಮೂಲಕ ಈ ಸುನೀಲನ ಪಾತ್ರವನ್ನು ಅವರು ತಮ್ಮ ಕಾದಂಬರಿ ***ಆತ್ಮಪ್ರಕಾಶ***ದಲ್ಲಿ ಬೇರೆಯೇ ರೀತಿಯಲ್ಲಿ ಜೀವಂತಗೊಳಿಸಿದ್ದಾರೆ. ಕಥೆಯ ಘಟನೆಗಳಿಗಿಂತ ಘಟನಾವಳಿಯ ಆಂತರಿಕ ಇಂಗಿತ ಬಹಳ ಅರ್ಥಪೂರ್ಣವಾಗಿದೆ. ***ಆತ್ಮಪ್ರಕಾಶ***ದ ನಾಯಕ ಪ್ರೀತಿಸಬಯಸುತ್ತಾನೆ. ಪ್ರೀತಿಯಲ್ಲಿ ಅವನಿಗೆ ನಂಬಿಕೆ ಇದೆ. ಆಘಾತ ಮಾಡಬೇಕೆಂಬ ಪ್ರಬಲ ಇಚ್ಛೆ ಏನೂ ಅವನಿಗಿಲ್ಲ. ಪ್ರೀತಿ ಅವನಿಗೆ ಲಭಿಸುವುದಿಲ್ಲ. ಅದರಿಂದ ವಂಚಿತನಾದರೂ ಅವನು ಪ್ರೀತಿಸಬಯಸುತ್ತಾನೆ. ಇದೇ ಅವನ ವಿಶೇಷತೆ.

ಸಮರೇಶರ ***ವಿವರ***ದ ನಾಯಕ ಬಹಳ ಹಿಂದೆಯೇ ತನ್ನ ಆವೇಗವನ್ನು ಕಳೆದುಕೊಂಡು ಬಿಟ್ಟಿದ್ದಾನೆ. ತಿಳುವಳಿಕೆ ಹಾಗೂ ವಯಸ್ಸಿನಲ್ಲಿ ಅವನು ಬುದ್ಧಿವಂತ. ***ಆತ್ಮಪ್ರಕಾಶ***ದ ನಾಯಕ ಇನ್ನೂ ಯುವಕ. ನಾನಾ ರೀತಿಯ ಪ್ರತೀಕೂಲದ ನಡುವೆಯೂ ಅವನ ಆವೇಗ ತಲೆ ಎತ್ತುತ್ತದೆ. ***ವಿವರ***ದ ನಾಯಕ ಗದ್ಯ ಲೇಖಕರ ಸೃಷ್ಟಿ. ಸುನೀಲ್ ಗಂಗೋಪಾಧ್ಯಾಯ ಮೂಲತಃ ಕವಿ. ಅವರು ಪ್ರಕೃತಿಯ ವೈಶಿಷ್ಟ್ಯಕ್ಕೆ ಮರುಳಾದವರು. ಅವರ ಕಾದಂಬರಿಯಲ್ಲಿ ನಾವು ಅದನ್ನು ಕಾಣಬಹುದು. ***ಆತ್ಮಪ್ರಕಾಶ***ದ ನಾಯಕ ಕವಿಯ ಸೃಷ್ಟಿ. ***ಆತ್ಮ ಪ್ರಕಾಶ***ದ ನಾಯಕನ ಹೆಸರೂ ಸುನೀಲ್ ಗಂಗೋಪಾಧ್ಯಾಯ. ಇದು ಲೇಖಕರ ಹೆಸರೂ ಹೌದು. ಬಿಚ್ಚು ಮನಸ್ಸಿನ ಧಾರಾಳತನವನ್ನು ಕೇಂದ್ರವನ್ನಾಗಿಟ್ಟುಕೊಂಡು, ತನ್ನ ವೇದನಾಮಯ ಅಹಂ ಅನ್ನು ಓದುತ್ತಿರುವಂತೇ ನಮ್ಮ ಮನಸ್ಸಿಗನಿಸುತ್ತದೆ.

ಈ ಕಾದಂಬರಿಯಲ್ಲಿ ಯಾವ ಹುಡುಗರ ಬಗೆಗೆ ಹೇಳಲಾಗಿದೆಯೋ ಅವರು ಖಂಡಿತವಾಗಿಯೂ ನಿರಾವೇಗ, ನಿರಾಸಕ್ತರಲ್ಲ. ಅವರು ಅರ್ಚನೆಯ ಪ್ರತಿಮೆಯನ್ನು ಹುಡುಕಲಾಗದ ವೇದಹೀನ ಪುರೋಹಿತರುಗಳು, ಶಸ್ತ್ರಾಸ್ತ್ರವಿಲ್ಲದ ಬಂಡಾಯಗಾರರು. ಅದಕ್ಕೆಂದೇ ಅವರು ಸ್ಮಶಾನದಲ್ಲಿ ಅಡ್ಡಾಡುವುದು, ಗುಂಡು ಹಾಕುವುದು, ಗಾಂಜಾ ಸೇವಿಸುವುದು, ಹೊಡೆದಾಡುವುದು. ಇವೆಲ್ಲವನ್ನು ಅವರು ತಮ್ಮ ಆಂತರಿಕ ರಿಕ್ತತೆಯನ್ನು ಮುಚ್ಚಿಕೊಳ್ಳುವ ಸಲುವಾಗಿ ಮಾಡುತ್ತಾರೆ. ನಾಯಕ ತನ್ನ ಆವೇಗದ ಮೂಲವನ್ನು ಹುಡುಕುತ್ತಾನೆ. ಆದರೆ ಅದು ಅವನಿಗೆ ದೊರಕುವುದಿಲ್ಲ. ಪರಸ್ಪರ ಒಂದಾಗಿ ಬಿಡುವ ಅಭ್ಯಾಸ, ಮಧ್ಯಮ ಹಾಗೂ ನಿಮ್ನ ಮಧ್ಯಮ ವರ್ಗದವರ ಸ್ವಭಾವ, ಅದನ್ನು ಈ ಯುವಕರಿಂದ ತ್ಯಜಿಸಲಾಗುವುದಿಲ್ಲ. ಪಾರಿವಾರಿಕ ಹಿನ್ನೆಲೆಯಲ್ಲಿ ಯಾವ ಕಾರಣಕ್ಕಾಗಿ ಎಷ್ಟೊಂದು ಯುವಕರುಗಳನ್ನು ಮನೆಯಿಂದ ಹೊರಹಾಕಬಹುದೋ, ಈ ಕಾದಂಬರಿಯಲ್ಲಿ ಅವೆಲ್ಲವನ್ನು ಚಿತ್ರಿಸಲಾಗಿದೆ. ಇವರುಗಳು ಸ್ವಾತಂತ್ರ್ಯೋತ್ತರದ

ಯುವಕರು. ಇವರ ಕಣ್ಣಿಗೆ ಮೆರವಣಿಗೆ ಬರೀ ಬಹುಸಂಖ್ಯೆಯಲ್ಲಿ ನೆರೆದ ನಾಮಹೀನ ಜನರ ಗುಂಪು ಮಾತ್ರ. ಇವರ ಮನಸ್ಸಿಗೆ ಮೆರವಣಿಗೆಯೂ ವಿಷಾದವನ್ನುಂಟು ಮಾಡುತ್ತದೆ. ಮೆರವಣಿಗೆಯಲ್ಲಿ ಹೋಗುವ ಜನರು ಬಹಳ ಸುಖಿಗಳು, ಇವರಿಗೆ ಯಾವೊಂದು ಜವಾಬ್ದಾರಿಯೂ ಇರುವುದಿಲ್ಲ. ಇವರ ಪೈಕಿಯೇ ಒಬ್ಬಾತ ದೊಡ್ಡ ಮೆರವಣಿಗೆಯ ನಡುವಿನಿಂದ ಒಬ್ಬ ಅಂಧನನ್ನು ರಸ್ತೆ ಪಾರು ಮಾಡಿಸುತ್ತಾನೆ. ಇದರಲ್ಲಿ ಯಾವುದು ಹೆಚ್ಚು ಸತ್ಯ ? ಗಾಯತ್ರಿ, ಮನೀಷ, ಜಮುನಾ ನಾಯಕನ ಜೀವನದಲ್ಲಿ ಬರುವ ಮೂರು ಹೆಣ್ಣುಗಳು. ಈ ಮೂರೂ ಹೆಣ್ಣುಗಳ ಪ್ರಕರಣ ನಾಯಕನ ಹೃದಯವನ್ನು ಕಲುಕಿದರೂ ಕೂಡಾ, ಅವನ ಜೀವನದ ಮೂಲ ವೃತ್ತವನ್ನು ಅದರಿಂದ ಸ್ಪರ್ಶ ಮಾಡಲಾಗುವುದಿಲ್ಲ. ಅವರುಗಳು ಕೇವಲ ಕನಸುಗಳನ್ನು ತೋರಿಸುತ್ತಾರೆಯೇ ವಿನಹ ಕೈ ಹಿಡಿಯುವುದಿಲ್ಲ. ಈ ನಾಯಕನ ಪ್ರಾಪ್ತಿ ಹಾಗೂ ಅಪ್ರಾಪ್ತಿಗಳು ಬಹಳ ವಿಚಿತ್ರ. ಅವನು ಮಾಡುವ ನೌಕರಿ, ಸಾಧಾರಣ ಮಧ್ಯಮ ವರ್ಗದವರ ಪಾಲಿಗೆ ಬಹಳ ಅಪರೂಪ. ತನ್ನ ನೌಕರಿ ಬಗ್ಗೆ ಮಾತನಾಡುವಾಗಲೆಲ್ಲ ಅವನು ತನ್ನ ದೊಡ್ಡ ಭಾವನವರ ವಿಷಯ ಎತ್ತುತ್ತಾನೆ. 'ಅವರ ಶ್ರೀಮಂತಿಕೆಯ ದಯೆಯಿಂದಲೇ ಹೆಚ್ಚು ಸಂಬಳಗಿಟ್ಟಿಸುವ, ಇತರರ ಮೇಲೆ ಅಧಿಕಾರ ಚಲಾಯಿಸಬಲ್ಲ ನೌಕರಿಯನ್ನು ಗಿಟ್ಟಿಸಿದ್ದೇನೆ' ಇದು ಮುಚ್ಚುಮರೆ ಇಲ್ಲದ ಮಾತು. ಮನೀಷಳ ಪ್ರಸಂಗದಲ್ಲಿ ಕೂಡಾ ಇದೇ ಬಿಚ್ಚು ಮನಸ್ಸು. ಆದರೆ ಅದು ವ್ಯರ್ಥ ಪ್ರೇಮವಲ್ಲ. 'ಮನೀಷಳನ್ನು ನಾನು ಪ್ರೇಮಿಸಲು ಸಾಧ್ಯವಾಗಲೇ ಇಲ್ಲ' ಎಂದೆನ್ನುತ್ತಾನೆ.

ಇದರಿಂದಲೇ ಅವನ ಕಥೆಯ ವಿವರ ಸಿಕ್ಕಿಬಿಡುತ್ತದೆ: "ಕಲ್ಕತ್ತೆಗೆ ಬಂದೊಡನೆ ನನಗೆ, ಜನ್ಮ ಭೂಮಿಯಾದ ಹಳ್ಳಿಯ ವಿಷಯ ಜ್ಞಾಪಕಕ್ಕೆ ಬರುತ್ತಿತ್ತು. ಕಬ್ಬಿನ ರಸದ ವಾಸನೆ ಹಾಗೂ ನೀರಿನ ಹರಿವ ಶಬ್ದ ಅವನ್ನೆಲ್ಲ ಕಳೆದುಕೊಳ್ಳುವ ದುಃಖದಿಂದಲೇ ನಾನು ಅಶಕ್ತನಾಗಿ ಬಿಟ್ಟಿದ್ದೆ. ಹಲವರನ್ನು ಕಳೆದುಕೊಳ್ಳುತ್ತ, ಮನುಷ್ಯ ಒಂದು ಸ್ಥಿತಿಗೆ ಬಂದು ಮುಟ್ಟುತ್ತಾನೆ. ಆಗ ಅವನಿಗೆ ಕಳೆದುಕೊಳ್ಳುವುದು ಅಭ್ಯಾಸವಾಗಿ ಬಿಟ್ಟಿರುತ್ತೆ. ನಾನೂ ಕೂಡ ಎಲ್ಲವನ್ನು – ಧರ್ಮ, ಅಧರ್ಮ, ನ್ಯಾಯ, ಅನ್ಯಾಯ, ಪಾಪ, ಪುಣ್ಯ, ನಂಬಿಕೆ, ವಿಶ್ವಾಸ, ಎಲ್ಲವನ್ನು ಕಳೆದುಕೊಳ್ಳಬೇಕೆಂದು ನಿರ್ಧರಿಸಿಬಿಟ್ಟಿದ್ದೆ." ಈ ಪೀಳಿಗೆಯ ಮತ್ತೊಬ್ಬ ಲೇಖಕ ಶೀರ್ಷೆಂದು ಮುಖ್ಯೋಪಾಧ್ಯಾಯರ ಆತ್ಮಕಥನ ನಮಗೆ ನೆನಪಿಗೆ ಬರುತ್ತದೆ: "ಮೈಮನ್ ಸಿಂಹ ಮೂಲಕ ಬ್ರಹ್ಮಪುತ್ರ ಬಿಟ್ಟು ಯುಗಗಳೇ ಸರಿದಿವೆ. ಆದರೂ ಆ ನದಿ ಭೌಗೋಳಿಕ ಸೀಮೆಯನ್ನು ದಾಟಿ ನನ್ನ ಬಳಿ ಹರಿದು ಬರುತ್ತದೆ." ಶ್ಯಾಮಲ ಗಂಗೋಪಾಧ್ಯಾಯರ ಮಾತುಗಳು ಕೂಡ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತವೆ: "ಆ ಸಮಯದಲ್ಲಿ ನನಗೊಂದು ವಿಷಯ ನೆರವಾದದ್ದು ಯಾವುದೆಂದರೆ, ಎಲ್ಲ ಕಡೆಗಳಿಂದಲೂ ಪ್ರಹಾರವಾಗುತ್ತಿದ್ದ ಅಪಮಾನದ ಏಟುಗಳು."

ಆದರೂ ಇವು ಯಾವುವೂ, ಆ ಎಲ್ಲ ಯುವಕರ ಅಂತರ್ಗತ ಕೃತ್ರಿಮತೆಯನ್ನು ಧ್ವಂಸ ಮಾಡಲು ಸಾಧ್ಯವಾಗುವುದಿಲ್ಲ. ಅನೇಕ ಅಪಮಾನ, ತುಳಿತ, ಬೈಗಳು, ಇವುಗಳನ್ನು ಸಹಿಸಿದ ನಂತರ **ಆತ್ಮಪ್ರಕಾಶ** ದ ಯುವಕ ಹೇಳುತ್ತಾನೆ: "ದಿನಗಳು

ಸರಿದು ಹೋಗುತ್ತವೆ. ನಗುಮುಖದವರ್ಯಾರಾದರೊಬ್ಬರನ್ನು ಕಾಣಬೇಕೆಂಬ ಅಪೇಕ್ಷೆಯುಂಟಾದರೂ, ನಮ್ಮೆದುರಿಗೆ ಕಾಣುವ ಮುಖ ಮಾತ್ರ ಭಾವಶೂನ್ಯವಾಗಿರುತ್ತದೆ.'' ಇದರಿಂದಲೇ ಆತನ ವೇದನೆ ಎಷ್ಟು ತೀವ್ರವಾಗಿದೆ ಎಂಬುದು ಅರಿವಾಗುವುದು. ಈ ಸಹಾನುಭೂತಿಹೀನ ಜಗತ್ತಿನಲ್ಲಿಯೇ ಅವನು ಅಡ್ಡಾಡುತ್ತಾನೆ. ''ಇಲ್ಲಿಯವರೆಗೂ ಎಷ್ಟೋ ಜನ ನನ್ನನ್ನು ಪ್ರಶ್ನಿಸಿದ್ದಾರೆ – ಹೇಗಿದ್ದೀರಾ ಎಂದು. ಆದರೆ ಯಾರೊಬ್ಬರೂ ಉತ್ತರ ಕೇಳಿಸಿಕೊಳ್ಳುವ ಸಲುವಾಗಿ ಒಂದು ಕ್ಷಣವೂ ನಿಂತಿಲ್ಲ.'' ಆದರೂ ಅವನೆನ್ನುತ್ತಾನೆ: ''ಬದುಕುಳಿಯುವುದರಲ್ಲಿ ಬಹಳ ಸುಖವಿದೆ.'' ಆದಕ್ಕಾಗಿ ಒಂದು ಕಿತ್ತಳೆಹಣ್ಣು ಅಥವಾ ಕಡ್ಲೆಕಾಯಿಗೂ ಅವನು ಕೃತಜ್ಞ. ತಾನು ಹೆಜ್ಜೆ ಊರುವ, ಭೂಮಿಗೆ ಒಂದಿನಿತೂ ಘಾಸಿಯಾಗಬಾರದೆಂದೇ ಮೃದುವಾಗಿ ಪಾದ ಊರುತ್ತಿದ್ದೇನೆ ಎಂದೆನ್ನುತ್ತಾನೆ. ಇಲ್ಲಿ ಅವನ ಆತ್ಮಪ್ರಕಾಶ ಪ್ರಕಟವಾಗುತ್ತದೆ. ಈ ಕಾದಂಬರಿಯಲ್ಲಿ ಪಾತ್ರಗಳ ಆತ್ಮವಿಮೋಚನೆ ಕಥೆಯ ವಿಷಯಕ್ಕಿಂತ ಹೆಚ್ಚು ಅವಶ್ಯಕವಾಗಿತ್ತು. ಯಾವ ರೀತಿ ಸುನೀಲ್ ನೋಡುತ್ತಾನೋ ಅದೇ ರೀತಿ ಈ ಕಾದಂಬರಿಯಲ್ಲಿ ಹೇಳಲಾಗಿದೆ ಎಂದು ಹೇಳಿದರೆ ಅದು ಅಪೂರ್ಣವಾಗುತ್ತದೆ. ನೋಡ ನೋಡುತ್ತ ಸುನೀಲ್ ತನ್ನನ್ನರಿಯುವುದೇ ಇಲ್ಲಿನ ನಿಜವಾದ ಕಥೆ. ಮತ್ತು ಓದುಗರು ಈ ಕಾದಂಬರಿಯ ಕಥೆಯಲ್ಲಿ ಒಂದು ರೀತಿಯ ಆಂತರಿಕ ಬಂಧನವಿದೆ ಅದು ಹೊರಗಿನ ಬಂಧನಕ್ಕಿಂತ ಬಹಳ ಬಲಿಷ್ಠವಾದುದು ಎಂಬುದನ್ನು ಅರಿಯುತ್ತಾರೆ. ನೂರ್‌ಜಹಾನ್ ಪ್ರಸಂಗ, ಸುನೀಲನು ಕೇಳಿದ್ದ ಕಥೆ –ಲೇಖಕ ಸುನೀಲ್ ಗಂಗೋಪಾಧ್ಯಾಯ ಬೇರೊಂದು ಗದ್ಯ ಲೇಖನದಲ್ಲಿ ಈ ವಿಷಯವನ್ನು ಹೇಳಿದ್ದಾರೆಂಬುದು ನಮಗೆ ತಿಳಿದ ವಿಷಯ. ಇದರಿಂದಾಗಿ ಹೇಳಿಕೊಳ್ಳುವಂಥಾ ವ್ಯತ್ಯಯವೇನು ಕಂಡುಬರುವುದಿಲ್ಲ. ವಿಷಯ ಏನೇ ಆಗಿರಲಿ, ಅದು ಕಂಡದ್ದೇ ಆಗಿರಲಿ, ಕೇಳಿದ್ದೇ ಆಗಿರಲಿ, ಅವುಗಳೆಲ್ಲವೂ ಸುನೀಲನ ಅನುಭವದ ಭಾಗವಾಗಿಯೇ ಪ್ರಕಟಗೊಂಡಿವೆ ಎನ್ನುವುದೇ ಮುಖ್ಯ. ಈ ಅಂಶವನ್ನೇನಾದರೂ ನಾವು ಕಡೆಗಣಿಸಿದರೆ, ಕಾಲದ ಪದಚ್ಯುತಿಯೊಂದಿಗೆ, ಕಾದಂಬರಿಯ ಸಮಗ್ರತೆಯೂ ಶಿಥಿಲವಾಗಿಬಿಡುತ್ತದೆ.

ಸರೋಜ ಬಂದ್ಯೋಪಾಧ್ಯಾಯ

ಬೆಳಗಾಗೆದ್ದು ಪಾರಿತೋಷ ಬಂದು ಹೇಳಿದ, ನೀವುಗಳು ಇದೆಲ್ಲ ಏನು ಪ್ರಾರಂಭ ಮಾಡಿಕೊಂಡಿದ್ದೀರಾ ? ಎಲ್ಲದಕ್ಕೂ ಒಂದು ಮಿತಿ ಇರಬೇಕು.

ನಾನಿನ್ನು ಆಗ ಎರಡನೇ ಕಪ್ ಚಹಾ ಕುಡಿದಾಗಿರಲಿಲ್ಲ. ವೃತ್ತಪತ್ರಿಕೆಗಳಲ್ಲಿ ನನ್ನ ಕಣ್ಣುಗಳಿನ್ನೂ ಅಂಟಿಕೊಂಡೇ ಇದ್ದವು. ಪ್ರತಿದಿನ ಇದೇ ತರಹಾನೇ ಆಗೋದು. ಬೆಳಗಾಗೆದ್ದು ಕಣ್ಣು ತೆರೆಯುತ್ತಿರುವಂತೆಯೇ ನನ್ನ ಮನಸ್ಸಿನಲ್ಲಿ ಎರಡು ಆಸೆಗಳು ಮೂಡುತ್ತವೆ. ಮಂಚದ ಕೆಳಗಿನ ನೀರಿನ ಲೋಟವನ್ನೆತ್ತಿ ಗಟಗಟ ಒಂದೇ ಉಸಿರಿಗೆ ಎಲ್ಲಾ ಕುಡಿದಿಡಬೇಕು. ಪ್ರತಿ ಸಲ ನೀರು ಕುಡಿಯುವಾಗ ನೀರೇ ಜೀವನ ಅಂತ ನನ್ನ ಮನಸ್ಸಿಗನಿಸುತ್ತೆ. ಎಷ್ಟೋ ತರಹದ ಪಾನೀಯಗಳ ರುಚಿ ನೋಡಿದ್ದರೂ ಬೆಳಗಿನ ವೇಳೆಯ ನೀರಿನ ಸ್ವಾದಿಷ್ಟ ರುಚಿ ಇನ್ನ್ಯಾವುದರಲ್ಲೂ ಕಂಡಿಲ್ಲ. ಅನಂತರವೇ ವೃತ್ತಪತ್ರಿಕೆಗಾಗಿ ನನ್ನ ಮನಸ್ಸು ಚಡಪಡಿಸೋದು. ಆದರೆ ಆಗಲೂ ಮುಖದಲ್ಲಿ ನಿದ್ದೆಯ ಮಬ್ಬು ಕವಿದಿರುತ್ತೆ. ಕಣ್ಣು ತೆರೆಯೋಕಾಗೊಲ್ಲ. ತಲೆ ಜುಂ ಅನ್ನುತ್ತಿರುತ್ತೆ. ಮೊದಲ ಹಾಳೆ ಮುಗಿಸಿ, ಎರಡನೇ ಪುಟಕ್ಕೆ ತಿರುಗಿದಾಗ ಪುನಃ ಮೊದಲ ಹಾಳೆ ಮರೆತೇ ಹೋಗಿರುತ್ತೆ. ಇವತ್ತಿನ ವಿಶೇಷ ಸುದ್ದಿಯಾದರೂ ಏನು ? ಅಂತ ಮನಸ್ಸಿಗನಿಸುತ್ತೆ. ವಿಶೇಷ ಸುದ್ದಿ ತಿಳಿಯಲು ಪುನಃ ಮೊದಲ ಪುಟಕ್ಕೆ ತಿರುಗಿ ನೋಡೋದರಲ್ಲೇ ಪುನಃ ತೂಕಡಿಕೆ ಬಂದುಬಿಟ್ಟಿರುತ್ತೆ.

ವರಾಂಡದಿಂದಲೇ ಪಾರಿತೋಷ ಬರುತ್ತಿರುವುದನ್ನು ಕಂಡಿದ್ದೆ. ಸ್ವಲ್ಪ ಮಳೆ ಬೀಳ್ತಾ ಇದೆ. ತಲೆ ಮೇಲೆ ಕೊಡೆ ಹಿಡಿದು ಪಾರಿತೋಷ ಕೊಕ್ಕರೆಯ ತರಹ ಕಾಲೆಳೆದುಕೊಂಡು ಬರುತ್ತಿದ್ದಾನೆ.

ನಾನು ಬಲವಂತವಾಗಿ ಕಣ್ಣುಗಳನ್ನು ತೆರೆದಿಟ್ಟುಕೊಂಡು ಕೇಳಿದೆ, ವಿಷಯ ಏನು ?

ನಿನ್ನೆ ರಾತ್ರಿ ನೀವುಗಳೆಲ್ಲ ಎಲ್ಲಿದ್ದಿರಿ ?

ಪಾರಿತೋಷನನ್ನು ಕಂಡರೆ ನನಗೆ ಅಷ್ಟಕ್ಕಷ್ಟೆ. ಸ್ನೇಹಿತರುಗಳ ಚಿಕ್ಕ ತಮ್ಮಂದಿರು ಸಾಧಾರಣವಾಗಿ ಇದೇ ರೀತಿ ಇರುತ್ತಾರೆ, ನಮ್ರ ಹಾಗೂ ವಿನೀತ, ಎಳೆ ಮಗುವಿನಂತೆ. ಪಾರಿತೋಷ ಅವರಿಗಿಂತ ಬೇರೆ ಏನಲ್ಲ. ಆದರೆ ಅವರುಗಳ ನಡುವೆ ಒಂದು ವೇಳೆ ಯಾರಾದರೂ ಎಕನಾಮಿಕ್ಸ್ ಎಂ.ಎ. ಓದುತ್ತಿದ್ದರೆ ಮತ್ತು ಒಳ್ಳೆಯ ವಿದ್ಯಾರ್ಥಿಯಾಗಿದ್ದರೆ ಆಗ ಅವರುಗಳು ಅವರ ಅಣ್ಣನ ಸ್ನೇಹಿತರ ಹತ್ತಿರ ಬಂದು ಥಟ್ಟನೆ ಅಹಂಕಾರಿಗಳಾಗಿ ಬಿಡುತ್ತಾರೆ. ಇದೇನೋ ಸಹಜವಾದದ್ದು. ಪಾರಿತೋಷನ ಅಭಿಪ್ರಾಯದಲ್ಲಿ ಅವನ ಅಸ್ತಿತ್ವವೇ ಭೂಮಿಗೊಂದು ರೀತಿಯ ಉಪಕಾರ; ಮತ್ತು ನಾವುಗಳು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ ನಷ್ಟವೇನಿಲ್ಲ ಅಂತ. ಆದರೆ

ಬೆಳಗಿನ ಹೊತ್ತು ಎಲ್ಲರನ್ನೂ ಕ್ಷಮಿಸಿ ಬಿಡುವ ಮನಸ್ಸಾಗುತ್ತೆ. ಮನದೊಳಗೆ ಅವನನ್ನು ಮುದ್ದಾಡಬೇಕು ಎಂದೆನಿಸುತ್ತೆ.

ನಾನೆಂದೆ, ನಿನ್ನೆ ರಾತ್ರೀನೇ ? ನಿನ್ನೆ ರಾತ್ರಿ ಒಂದೂವರೆವರೆಗೂ ನಾನಾ ಜಾಗಗಳಲ್ಲಿದ್ದೆ. ನೀನು ಎಷ್ಟು ಹೊತ್ತಿನ ವಿಷಯ ಹೇಳ್ತಾ ಇದೀಯ ?

ಪಾರಿತೋಷ ಸ್ಥಿರ ದೃಷ್ಟಿಯಿಂದ ನನ್ನ ಕಡೆ ನೋಡಿ ಶಾಂತ ಸ್ವರದಲ್ಲಿ ಹೇಳಿದ, ಅಣ್ಣ ನಿನ್ನೆ ರಾತ್ರಿ ಮನೆಗೆ ಹಿಂತಿರುಗಿಲ್ಲ.

ವಿಷಯ ಕೇಳಿ ನನಗೆ ತುಂಬಾ ಕಸಿವಿಸಿಯಾಯಿತು. ಬೆಳಗಿನ ಹೊತ್ತು ಮಾತ್ರ ನನಗೆ ಬಿಡುವು ಸಿಗೋದು, ಅದೂ ಏಳರಿಂದ ಒಂಬತ್ತರವರೆಗೆ ಮಾತ್ರ. ಇನ್ನೊಬ್ಬರ ಸಮಸ್ಯೆಗಳು ನನ್ನ ಬಳಿ ಏಕೆ ಬರುತ್ತವೆ ? ಈ ವೇಳೆಯಲ್ಲಿ ಬೆಚ್ಚಗೆ ಹೊದ್ದು ಕೂತಿರುವ ಬಯಕೆಯಾಗುತ್ತೆ. ಕುರ್ಚಿ, ಮಂಚ, ಪುಸ್ತಕದ ಬೀರು ಹಾಗೂ ಸುತ್ತುತ್ತಿರುವ ಫ್ಯಾನ್ ಸಮೇತ ನನ್ನನ್ನು ನಾನು ಪ್ರೀತಿಸುವ ಆಸೆಯಾಗುತ್ತೆ. ನೀರಿನ ಇನ್ನೊಂದು ಹೆಸರೇ ಜೀವನ. ಮನುಷ್ಯ ಪೃಥ್ವಿಯಲ್ಲಿ ತುಂಬಾ ಸುಖಿ ಅನ್ನೋದನ್ನ ಅರ್ಥ ಮಾಡಿಕೊಂಡಿದ್ದೀನಿ. ಪಾರಿತೋಷ ಏನೇ ಮಾತನಾಡಲಿ, ನಾನು ಮಾತ್ರ ಸುಮ್ಮನೆ ಅನ್ಯ ಮನಸ್ಕನಾಗಿ ಇದ್ದು ಅವನು ಹೇಳೋದನ್ನ ಕೇಳಿಸಿಕೊಳ್ಳಬಾರದು ಅಂತ ಅಂದುಕೊಳ್ತೀನಿ. ಆದರೆ ಪಾರಿತೋಷನ ದನಿಯಲ್ಲಿ ಅಡಗಿರುವ ಅಭಿಮಾನ ಕೊಳಲಿನ ಸ್ವರದಂತೆ ನಿಖರ. ಉಪೇಕ್ಷೆ ಮಾಡಲಾಗುವುದಿಲ್ಲ. ನಾನೆಂದೆ, ಶೇಖರ ನಿನ್ನೆ ಹಿಂತಿರುಗಿಲ್ಲವೇ ? ಏಕೆ ?

ನಿಮಗೆ ಗೊತ್ತಿಲ್ಲವೇ ?

ಇಲ್ಲಾ ! ಶೇಖರನನ್ನು ನಾನು ಎರಡು ದಿನದಿಂದ ಕಂಡೇ ಇಲ್ಲ.

ಹಾಗಾದ್ರೆ ಅವನು ಎಲ್ಲಿಗೆ ಹೋಗಿರಬಹುದು ಅಂತ ಊಹಿಸಬಲ್ಲಿರಾ ?

ನೀನು ಇಷ್ಟು ಬೆಳ ಬೆಳಗ್ಗೇನೇ ಏಕೆ ಹೊರಟು ಬಂದೆ ? ಸ್ವಲ್ಪ ಹೊತ್ತಿನ ಮೇಲೆ ಅವನು ಹಿಂತಿರುಗಬಹುದು. ಎಲ್ಲೋ ಸಿಕ್ಕಿ ಹಾಕಿಕೊಂಡಿರಬೇಕು ಅಂತ ಅನ್ನಿಸುತ್ತೆ.

ಅಮ್ಮ ನಿನ್ನೆ ಇಡೀ ರಾತ್ರಿ ನಿದ್ದೆ ಮಾಡಿಲ್ಲ. ಮುಂಜಾನೆಯಿಂದಲೂ ನನ್ನನ್ನು ಹುಡುಕ್ಕೊಂಡು ಬಾ ಅಂತ ಪೀಡಿಸ್ತಾನೇ ಇದ್ದರು.

ಶೇಖರ ಹಿಂದೆಯೂ ಒಂದೆರಡು ಸಲ ಮನೆಗೆ ಹಿಂತಿರುಗಿಲ್ಲ. ಇಸ್ಪೀಟಾಟದಲ್ಲಿ ಮಗ್ನನಾಗಿ ಬಿಟ್ಟಿದ್ದ.... ಯೋಚ್ನೆ ಮಾಡೋದೇನು ಬೇಡ.

ನೀವು ತಪ್ಪಾಗಿ ಭಾವಿಸಿದ್ದೀರಿ. ಮನೆಗೆ ಹಿಂತಿರುಗದೇ ಇರೋದು ಅಣ್ಣನ ಪಾಲಿಗೆ ಸ್ವಾಭಾವಿಕವಾಗಿರಬಹುದು. ಆದರೆ ಅದನ್ನ ಸಹಿಸೋದು ಅಮ್ಮನಿಗೆ ಸ್ವಾಭಾವಿಕವಾಗಿರೋದು ಹೇಗೆ ತಾನೇ ಸಾಧ್ಯ ? ಅಮ್ಮ ಪ್ರತಿ ಸಲವೂ ಕೆಟ್ಟ ಯೋಚನೆಯನ್ನೆ ಮಾಡುತ್ತಾಳೆ.

ನನಗೆ ನಗು ಬಂತು. ನಾನೇ ರಾತ್ರಿ ಮನೆಗೆ ಹಿಂತಿರುಗಿಲ್ಲವೇನೋ ಎಂಬಂತೆ, ನಾನೇ ಅಮ್ಮನಿಗೆ ಕಷ್ಟಕೊಟ್ಟಂತೆ ಅಥವಾ ಶೇಖರ ರಾತ್ರಿ ಮನೆಗೆ ಹಿಂತಿರುಗದೇ ಇರುವುದಕ್ಕೆ ನಾನೇ ಕಾರಣ ಅನ್ನೋ ರೀತಿಯಲ್ಲಿ ಪಾರಿತೋಷ ಹೇಳುತ್ತಿದ್ದ. ಬೆಳಗಿನಿಂದಲೇ ಇವನು ಈ ರೀತಿ ಮಾತನಾಡೋದಾದ್ರೂ ಏಕೆ ? ಎಕನಾಮಿಕ್ಸ್ ಓದಿ ಬಿಟ್ಟರೆ ಎಲ್ಲ ಸಾಧ್ಯ ಅಂತ

ಅನ್ನಿಸುತ್ತೋ ಏನೋ. ಅವನ ದನಿಯಲ್ಲಿ ಅದೇ ಎಕನಾಮಿಕ್ಸ್ ವಿದ್ಯಾರ್ಥಿಯ ಗಾಂಭೀರ್ಯ. ಪೃಥ್ವಿಯ ಉಪಕಾರಕ್ಕೆಂದೇ ಜನಿಸಿದಂತೆ; ನಾವುಗಳು ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ, ತೊಂದ್ರೆ ಇಲ್ಲ ಅನ್ನೋ ತರಹದ ಭಾವ. ಶೇಖರನ ವಿಷಯದಲ್ಲಿ ಸಾಕಷ್ಟು ಗಮನ ಹರಿಸಬೇಕೋ ಬೇಡವೋ ಅನ್ನುವುದು ಅರ್ಥವಾಗಲಿಲ್ಲ. ಶೇಖರ ರಾತ್ರಿ ಮನೆಗೆ ಹಿಂತಿರುಗದೇ ಇರೋದು ಅಷ್ಟೊಂದು ಮಹತ್ವಪೂರ್ಣವಾದ ವಿಷಯವೇ ? ಶೇಖರ ಒಬ್ಬ ದಷ್ಟಪುಷ್ಟವಾದ ಯುವಕ. ಜೇಬಿನಲ್ಲಿ ದುಡ್ಡು ಇರುತ್ತೆ. ಬಹುಶಃ ಅವನ ಬುದ್ಧಿ ಯಾವ ತರಹಾ ಅಂದರೆ ಎಂದಾದರೊಂದು ದಿನ ಸಾರ್ವಜನಿಕ ಭೂಮಿಕಾಣಿ ಇದ್ರೆ ಅದನ್ನೂ ಹರಾಜಿನಲ್ಲಿ ಮಾರ್ಕೊಂಡು ಬಂದು ಬಿಡೋನೆ. ಹೊಂಡವನ್ನ ನೋಡಿ ಎಂದೂ ನದಿ ಅಂತ ಹೇಳೋ ಮೂರ್ಖನೇನಲ್ಲ. ಅಂಥವನು ಒಂದು ದಿನ ರಾತ್ರಿ ಮನೆಗೆ ಹಿಂತಿರುಗದಿದ್ದರೆ, ಅಷ್ಟೊಂದು ಯೋಚಿಸಬೇಕೇ ? ಆದರೆ ಸ್ನೇಹಿತರು ಒಬ್ಬ ವ್ಯಕ್ತಿಯನ್ನು ಯಾವ ರೀತಿ ಗುರುತಿಸಲು ಸಾಧ್ಯವೋ, ಮನೆಯಲ್ಲಿನ ಜನ ಆ ರೀತಿ ಗುರುತಿಸಲು ಸಾಧ್ಯವಿಲ್ಲ. ಈ ಮಾತೇನೋ ನಿಜ. ಬೆಳಗಾಗೆದ್ದು ನಾನೂ ಒಗಟನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತೇನೆ. ಸುಮ್ಮನೆ ನಾನು ಯೋಚನೆ ಮಾಡುವವನಂತೆ ಹೇಳಿದೆ, ಶೇಖರ ನಿನ್ನೆ ಯಾವಾಗ ಹೊರ ಹೊರಟಿದ್ದ ಹೇಳು ನೋಡೋಣ ?

ಎಂದಿನಂತೆ ಹತ್ತರ ವೇಳೆಗೆ ತಿಂದುಂಡು ಆಫೀಸಿಗೆ ಹೋಗಿದ್ದ. ಮಧ್ಯಾಹ್ನ ಎಂದೂ ಮನೆಗೆ ಬರೋದಿಲ್ಲ. ಹಿಂತಿರುಗೋದು ಇನ್ನು ರಾತ್ರಿ ಹತ್ತೋ ಹನ್ನೊಂದಕ್ಕೊ. ನಿನ್ನೆ ಹಿಂತಿರುಗಿಲ್ಲ ಮತ್ತು ಯಾವ ರೀತಿಯ ಸುದ್ದಿಯನ್ನೂ ತಿಳಿಸಿಲ್ಲ.

ನೀನು ಮೊದಲೇ ನನ್ನ ಹತ್ತಿರ ಯಾಕೆ ಬಂದೆ ?

ತಾಪಸದಾನ ಹತ್ತಿರ ಮೊದಲು ಹೋಗಿದ್ದೆ. ಅವರು ನಿಮ್ಮ ಹತ್ತಿರ ಹೋಗಿ ವಿಚಾರಿಸು ಅಂತ ಹೇಳಿದರು.

ಇಷ್ಟು ಕೇಳಿಯೂ ನನಗೆ ನಗು. ಈ ರೀತಿಯೇ ಆಗೋದು, ಒಬ್ಬರು ಇನ್ನೊಬ್ಬರ ಹತ್ತಿರ ಸಲೀಸಾಗಿ ಕಳಿಸಿ ಬಿಡುತ್ತಾರೆ. ತಾಪಸ ನನ್ನ ಬಳಿ ಕಳಿಸಿದ್ದಾನೆ, ನಾನು ಅವನನ್ನ ಅವಿನಾಶನ ಬಳಿಗೆ, ಅವನಾಶ ಪುನಃ ಪರೀಕ್ಷಿತನ ಕಡೆಗೆ. ಆದರೆ ಪಾರಿತೋಷನ ಬಗ್ಗೆ ನನಗೆ ಮರುಕ ಉಂಟಾಯಿತು. ಕೊಡೆಯನ್ನು ಮಡಿಚಿ ಪಕ್ಕದಲ್ಲಿಟ್ಟುಕೊಂಡು, ಕುರ್ಚಿಯ ಮೇಲೆ ನೇರವಾಗಿ ಕುಳಿತುಕೊಂಡಿದ್ದಾನೆ. ಅವನ ಮುಖದಲ್ಲಿ ಉದ್ವೇಗದ ಬದಲು ಅಭಿಮಾನವೇ ಹೆಚ್ಚು ಪ್ರಖರವಾಗಿದೆ. ಪಾರಿತೋಷನಿಗೆ ಒಂದು ವೇಳೆ ಗೊತ್ತೋ ಏನೋ – ಶೇಖರನಿಗೇನೂ ವಿಪತ್ತಾಗೋದಿಲ್ಲ ಅಂತ. ಆದರೆ ಶೇಖರನ ಅಲಕ್ಷ್ಯತೆ, ನಿಯಮವನ್ನು ಅನುಸರಿಸದಿರುವ ಪರಿಪಾಠವನ್ನು ಅವನು ಇಷ್ಟಪಡುವುದಿಲ್ಲ. ನಾನು ನಿಧಾನವಾಗಿ ಹೇಳಿದೆ, ಖಂಡಿತವಾಗಿಯೂ ಅವನೆಲ್ಲೋ ಸಿಕ್ಕಿಹಾಕಿಕೊಂಡಿರಬೇಕು. ಇಷ್ಟು ಹೊತ್ತಿಗಾಗಲೇ ಹಿಂತಿರುಗಿರಬೇಕು ಅಂತ ಅನಿಸುತ್ತೆ. ಏನೇ ಆಗಲಿ ಇಷ್ಟರ ನಡುವೆ ಬಂದಿಲ್ಲದಿದ್ದರೆ, ಮಧ್ಯಾಹ್ನ ನೀನು ನನಗೆ ಆಫೀಸಿಗೇ ಟೆಲಿಫೋನ್ ಮಾಡು. ನಾನು ಸಾಯಂಕಾಲ ಹುಡುಕಿಗಿಡಿಕಿ ಮಾಡ್ತೀನಿ. ನೀನಿನ್ನೂ ಎಲ್ಲೂ ಹೋಗಬೇಕಾದ್ದೇನಿಲ್ಲ. ಚಹಾ ಕುಡೀತೀಯ ?

ಇಲ್ಲ ಚಹಾ ಕುಡಿಯೋದಿಲ್ಲ. ನಾನು ಬೇಗನೆ ಮನೆಗೆ ಹೋಗಬೇಕು.

ನಿಜವಾಗಿ ಕೆಲವು ದಿನಗಳಿಂದ ಶೇಖರನನ್ನ ನಾನು ಕಂಡೇ ಇಲ್ಲ. ಶೇಖರನ ಜೊತೆ ನನ್ನ ಓಡಾಟ ನಿಂತೇ ಹೋಗಿದೆ. ಏನೇ ಆಗಲಿ ಮಧ್ಯಾಹ್ನ ನಾನು ಹುಡುಕಿ ವಿಚಾರಿಸ್ತೀನಿ.

ನಿಮ್ಮ ಜೂಜು ಕಟ್ಟೆಯಲ್ಲೇ ಯಾರೋ ಒಬ್ಬರನ್ನ.....

ಅವೆಲ್ಲಾ ಜಾಗಗಳಿಗೆ ನಾನು ಈ ನಡುವೆ ಬಹುಶಃ ಹೋಗ್ತಾನೇ ಇಲ್ಲ.

ನಂಬೋಕಾಗೋದಿಲ್ಲ.

ನಾನು ಸ್ವಲ್ಪ ದುರ್ಬಲ ಭಾವದಿಂದ ನಕ್ಕು ಹೇಳಿದೆ, ನಿನಗೆ ಗೊತ್ತಿಲ್ಲ ಪಾರಿತೋಷ, ಈಗ ನಾನು ತುಂಬಾ ಬದಲಾಯಿಸಿಬಿಟ್ಟಿದೀನಿ.

ಪಾರಿತೋಷ ಮುಖ ಕೆಳಗೆ ಮಾಡಿ ಹೇಳಿದ, ಎಷ್ಟು ಸಮಯದಲ್ಲಿ ವ್ಯಕ್ತಿ ಎಷ್ಟು ಬದಲಾಗಬಹುದು ಅನ್ನೋದು ನನಗೂ ಗೊತ್ತು ಸುನೀಲ್‌ದಾ. ಜೀವನದೊಂದಿಗೆ ನೀವೆಲ್ಲ ಯಾವ ರೀತಿ ಆಟ ಆಡ್ತಿದೀರೋ, ಅದಕ್ಕೆ ನಿಜವಾಗಿಯೂ ಏನಾದರೂ ಬೆಲೆ ಇದೆಯೋ ಇಲ್ಲವೊ ಅನ್ನೋದೇ ನನಗೆ ಸಂದೇಹ.

ನೀನಿನ್ನೂ ಚಿಕ್ಕ ಹುಡುಗ ಬಿಡು.....

ತುಂಬಾ ಚಿಕ್ಕ ಹುಡುಗನೇನಲ್ಲ. ನಿಮಗಿಂತ ಐದಾರು ವರ್ಷಕ್ಕೆ ಚಿಕ್ಕವನಿರಬಹುದು.

ಜೀವನದಲ್ಲಿ ಈ ಅಂತರ ಕಡಿಮೆ ಏನಲ್ಲ. ಒಂದೊಂದು ವರ್ಷವೂ ತುಂಬಾ ದೊಡ್ಡದು...

ಸರಿ ಬರ್ತೀನಿ. ಮಧ್ಯಾಹ್ನ ಆಫೀಸಿಗೇ ಟೆಲಿಫೋನ್ ಮಾಡ್ತೀನಿ.

ಬಹುಶಃ ಅಂಥಾ ಪ್ರಮೇಯ ಒದಗಲಿಕ್ಕಿಲ್ಲ. ಮನೆಗೆ ಹೋಗುತ್ತಲೇ ನೋಡುವಿಯಂತೆ ಶೇಖರ ಹಿಂತಿರುಗಿರುತ್ತಾನೆ. ಹಿಂತಿರುಗಿ ಬಂದಿದ್ದರೂ ನನಗೆ ಸ್ವಲ್ಪ ಫೋನ್ ಮಾಡಿ ಸುದ್ದಿ ತಿಳಿಸಿಬಿಡು.

ಪಾರಿತೋಷ ಹೊರಟು ಹೋಗುತ್ತಲೇ ಮಳೆ ಜೋರಾಗಿ ಬಂತು. ಮಳೆ ರಭಸ ನೋಡಿದ್ರೆ ಸಹಜವಾಗಿ ನಿಲ್ಲೋ ಅಂಥಾದ್ದಲ್ಲ. ಅರ್ಥಾತ್ ಇಂದು ಇಸ್ತ್ರಿ ಮಾಡಿದ ಬಟ್ಟೆ ಹಾಕ್ಕೊಳಕ್ಕಾಗೋದಿಲ್ಲ. ಬೂಟುಗಳನ್ನು ಪಾಲೀಶ್ ಮಾಡೋದು ವ್ಯರ್ಥ, ಕಾರಣ ಕೆಸರಂತೂ ಹತ್ತೇ ಹತ್ತುತ್ತೆ. ಸುಮ್ಮನೆ ನಿನ್ನೆಯ ಬೆವರು ವಾಸನೆಯ ಪ್ಯಾಂಟು ಹಾಗೂ ಕೆಸರು ಮೆತ್ತಿದ ಬೂಟು ಹಾಕಿಕೊಂಡು ಹೋಗೋದೇ ಮೇಲು. ಗಡ್ಡ ಬೋಳಿಸಿಕೊಳ್ಳುವುದೂ ವ್ಯರ್ಥ. ತುಂಬಾ ಕೆಲಸ ಮಾಡುವುದು ಒಮ್ಮೆಗೇ ತಪ್ಪಿದಾಗ ಸಮಯ ಉಳಿತಾಯವಾಗಿ ಬಹಳ ಸಮಯ ದೊರಕಿತು. ಈ ತರಹದ ಮಳೆ ದಿನಗಳಲ್ಲಿ ಸಾಧಾರಣವಾಗಿ ಆಫೀಸಿಗೆ ಹೋಗುವುದೋ ಬಿಡುವುದೋ ಅಂತ ಕೆಲವರಿಗೆ ಸಂದೇಹ. ಆದರೆ ನನಗೇನೋ ಆಫೀಸಿಗೆ ಹೋಗಲು ಇಷ್ಟವಾಗುತ್ತೆ. ಚೌಕಟ್ಟಿನ ಟೇಬಲಿನೆದುರು ಕಾಲೆತ್ತಿ ಕುಳಿತು ಚಹ ಸೇವಿಸುವಲ್ಲಿನ ಆನಂದ, ಮನೆಯಲ್ಲಿ ಮಂಚದ ಮೇಲೆ ಮಲಗಿರುವುದರಲ್ಲಿ ಇರೋದಿಲ್ಲ. ಕೆಲವು ದಿನಗಳ ಹಿಂದಷ್ಟೇ ಆಫೀಸಿನಲ್ಲಿ ನನಗೆ ಬಡ್ತಿ ಸಿಕ್ಕಿದೆ. ಹಜಾರದಲ್ಲಿ ಎಲ್ಲರ ಜೊತೆ

ಕುಳಿತುಕೊಳ್ಳುವ ಬದಲು ಈಗ ಒಂದು ಚಿಕ್ಕ ಕೋಣೆಯಲ್ಲಿ ಇಬ್ಬರ ಜೊತೆ ಪ್ರತ್ಯೇಕವಾಗಿ ಕುಳಿತುಕೊಳ್ಳುತ್ತೇನೆ. ಟ್ರಿಂ ಟ್ರಿಂ ಎಂದು ಬೆಲ್ ಬಾರಿಸಿದೊಡನೆ ಪೇದೆ ಝುರಿಸಿಂಗ್ ತಕ್ಷಣ ಹಾಜರಾಗ್ತಾನೆ. ಅವನಿಗೆ ಏನು ಬೇಕೋ ಹುಕುಂ ಮಾಡಬಹುದು. ಲೇಔಟ್ ಸೆಕ್ಷನ್ನಿನ ಮೂರು ಜನರಲ್ಲಿ ನಾನೂ ಒಬ್ಬ. ಅವರಲ್ಲಿ ವನಮಾಲಿ ಬಾಬುಗಳು ನನ್ನ ಅಜ್ಜನ ಚಿಕ್ಕ ತಮ್ಮನ ವಯಸ್ಸಿನವರು. ಆತನಿಗೆ ಪ್ರತಿಯೊಂದರಲ್ಲೂ ತಲೆ ಹಾಕುವ ಅಭ್ಯಾಸ. ಸ್ವಲ್ಪ ಅವಕಾಶ ಸಿಕ್ಕಿದರೆ ಸಾಕು ಸುಮ್ಮನೆ ತಲೆ ತಿನ್ತಾರೆ. ಇನ್ನೂ ಎಷ್ಟು ದಿನ ಪೆನ್ನು ಹಿಡಿದು ಸಾಗ್ತಾರೆ? ಈ ಸಲ ರಾಮಾಯಣ – ಮಹಾಭಾರತ ಓದಿ ಹೋಗಿ ಅಂತ ಅನ್ನಬೇಕು. ಜನರಿಗೆ ಆಜ್ಞೆ ಮಾಡುವುದರಲ್ಲಿ ಅಥವಾ ಬೆದರಿಸುವುದರಲ್ಲಿ ಯಾವ ಮೋಜು ದೊರಕುತ್ತೋ ಅದನ್ನೀಗ ನಾನೂ ಪಡೆಯಲು ಪ್ರಾರಂಭಿಸಿದ್ದೇನೆ.

ಮೂರರ ಸುಮಾರಿಗೆ ಸುವಿಮಲ ಬಂದು ಹಾಜರಾದ. ಆನಂತರವೇ ಪಾರಿತೋಷನ ಟೆಲಿಫೋನ್ ಬಂದದ್ದು. ಓ! ಶೇಖರನ ವಿಷಯವನ್ನು ನಾನು ಒಮ್ಮೆಗೆ ಮರೆತೇಬಿಟ್ಟಿದ್ದೆ. ಪಾರಿತೋಷನ ಧ್ವನಿಯಲ್ಲಿ ಆತಂಕ ಅಥವಾ ಭಯದ ಚಿಹ್ನೆ ಲೇಶ ಮಾತ್ರವೂ ಇಲ್ಲ. ಬದಲಿಗೆ ಅಭಿಮಾನ ಇನ್ನೂ ತೀವ್ರವಾಗಿದೆ. ಅವನೆಂದ, ಅಣ್ಣ ಇನ್ನೂ ಹಿಂತಿರುಗಿಲ್ಲ. ನಿಮಗೇನಾದ್ರೂ ಸುದ್ದಿ ಗೊತ್ತಾಯ್ತಾ?

ನಾನೆಂದೆ, ಒಂದು ನಿಮಿಷ ಇರು. ನಂತರ ಟೆಲಿಫೋನಿನ ಮೂತಿಯನ್ನು ಮುಚ್ಚಿ ಸುವಿಮಲನನ್ನು ಕೇಳಿದೆ, ಶೇಖರನ ಬಗ್ಗೆ ಏನಾದ್ರೂ ಗೊತ್ತಾಯ್ತೇನೋ?

ಏನು ವಿಷಯ?

ನಿನ್ನೆ ಅವನನ್ನು ಕಂಡಿದ್ದೆಯಾ?

ಇಲ್ಲ.

ಶೇಖರ ನಿನ್ನೆ ರಾತ್ರಿ ಮನೆಗೆ ಹಿಂತಿರುಗಿಲ್ಲ. ಸರಿ ಸ್ವಲ್ಪ ಇರು–

ನಾನು ಪಾರಿತೋಷನಿಗೆ ಪುನಃ ಹೇಳಿದೆ, ನನಗೇನೂ ವಿಷಯ ಗೊತ್ತಿಲ್ಲ. ಅವನೇನು ಮನೆಗೂ ಸುದ್ದಿ ಕಳಿಸಿಲ್ಲವೆ?

ಇಲ್ಲ. ನಾನು ಅಣ್ಣನ ಆಫೀಸಿಗೆ ಫೋನ್ ಮಾಡಿದ್ದೆ. ನಿನ್ನೆ ಸುಮಾರು ಎರಡರ ವೇಳೆಗೆ ಆಫೀಸಿನಿಂದ ಹೊರಟು ಹೋದನಂತೆ. ಇವತ್ತು ಏನೂ ಸುದ್ದಿ ಇಲ್ಲ. ಎಲ್ಲಾ ಆಸ್ಪತ್ರೆಯನ್ನು ಹುಡುಕಿದ್ದಾಯ್ತು. ಅಲ್ಲೂ ಏನೂ ಗೊತ್ತಾಗ್ಲಿಲ್ಲ.

ಠಾಣೆಯಲ್ಲಿ ವಿಚಾರಿಸಿದೆಯಾ?

ಠಾಣೆಯಲ್ಲಾ? ಠಾಣೆಯಲ್ಲಿ ಯಾಕೆ?

ನಾನಾ ಕಾರಣಕ್ಕಾಗಿ. ಇರಲಿ ಬಿಡು, ಠಾಣೆಯಲ್ಲಿ ಖಂಡಿತವಾಗಿ ಅವನಿರೋದಿಲ್ಲ. ನಾನು ನೋಡ್ತೀನಿ.

ಅಮ್ಮ ತುಂಬಾ ಅಸ್ವಸ್ಥರಾಗಿ ಬಿಟ್ಟಿದ್ದಾರೆ. ಮೇಲಿಂದ ಮೇಲೆ ನಿಮ್ಮ ಸುದ್ದಿ ಮಾತಾಡ್ತಾರೆ. ಅಣ್ಣನ ಸ್ನೇಹಿತರುಗಳ ಪೈಕಿ, ಅಮ್ಮನಿಗೆ ಪರಿಚಯವಿರೋದು ನೀವೊಬ್ಬರೇ.

ಅಮ್ಮನಿಗೆ ಹೇಳು ಯೋಚ್ನೆ ಬೇಡಾ ಅಂತ. ನಾವೆಲ್ಲಾ ಇದೀವಿ. ನಾನು ಈಗಲೇ

ಹೊರಡ್ತೀನಿ. ನೋಡೋಣ. ನನಗನ್ನಿಸುತ್ತೆ ಅವನು ಬಹರಾಂಪುರಕ್ಕೆ ಅನಿಮೇಷನ ಬಳಿಗೂ ಹೋಗಿರಲಿಕ್ಕೆ ಸಾಕು. ಒಮ್ಮೊಮ್ಮೆ ಅವನ ಬಳಿ ಹೋಗ್ತಿರ್ತಾನೆ.

ಆಫೀಸಿನಿಂದ ರಜೆ ತೊಗೊಂಡಿದಾನಾ ?

ಇಲ್ಲ.

ಸರಿ, ನಾನು ನೋಡ್ತೀನಿ. ಒಂದು ವೇಳೆ ಸಾಧ್ಯವಾದರೆ ಸಂಜೆಯು ಮೇಲೆ ನಿಮ್ಮನೆಗೆ ಬರ್ತೀನಿ. ಫೋನ್ ಇಡ್ತೀನಿ, ಆಂ ?

ಫೋನ್ ಕೆಳಗಿಟ್ಟು ನಾನು ಸುವಿಮಲನಿಗೆಂದೆ, ಶೇಖರನಿಗೇನಾಯ್ತು ಹೇಳು ನೋಡೋಣ ?

ಸುವಿಮಲ ಮುರಿದ ಬೆಂಕಿ ಕಡ್ಡಿಯನ್ನು ಕಿವಿಗೆ ತೂರಿಸುತ್ತ ಹೇಳಿದ, ಇನ್ನೇನಾಗುತ್ತೆ. ಖಂಡಿತವಾಗಿ ತಲೆ ಕೆಟ್ಟಿರಬೇಕು.

ನೀನು ನಿನ್ನೆ ಚಂಡಿಯ ಅಂಗಡಿಗೆ ಹೋಗಿದ್ದೆಯ ?

ಹುಂ.

ಶೇಖರ ಅಲ್ಲಿದ್ದನಾ ?

ಇಲ್ಲ.

ನಡಿ ಹೊರಡೋಣ. ಶೇಖರನನ್ನು ಸ್ವಲ್ಪ ಹುಡುಕೋದು ಅವಶ್ಯಕ. ಅವಿನಾಶ ಅಥವಾ ಪರೀಕ್ಷಿತಗೆ ಬಹುಶಃ ಗೊತ್ತಿರಬಹುದು ಅಂತ ಕಾಣುತ್ತೆ.

ಅವಿನಾಶ ಹಾಗೂ ಪರೀಕ್ಷಿತ ನಿನ್ನೆ ನನ್ನ ಜೊತೆ ಚಂಡಿಯ ಅಂಗಡಿಯಲ್ಲೇ ಇದ್ದರು. ಅವರ ಜೊತೆ ಶೇಖರ ಕಾಣಸಲಿಲ್ಲ.

ನಡಿ ಹೊರಡೋಣ. ಪುನಃ ಒಂದು ರಗಳೆ.

ಹೊರಟು ಎಲ್ಲಿಗೆ ಹೋಗ್ತೀಯ ?

ಯಾರಿಗೆ ಗೊತ್ತು ? ನಡಿ ಭತ್ತದ ಗದ್ದೆಯಲ್ಲಿ ಒಣಗಿದ ಫೈರನ್ನ ಹುಡುಕೋಣ.

ಸುವಿಮಲ ಚಕಿತನಾಗಿ ನನ್ನ ಕೋಣೆಯ ಇನ್ನೆರಡು ಟೇಬಲ್ಲಿನ ಕಡೆ ನೋಡಿ ಮೆಲುದನಿಯಲ್ಲಿ ಹೇಳಿದ, ಶೇಖರನನ್ನ ಹುಡುಕುವ ಮೊದಲು ನಡಿ ಸ್ವಲ್ಪ ಬಿಯರ್ ಕುಡಿಯೋಣ. ತಣ್ಣಗಿನ ತಲೆಯಲ್ಲಿ ಹುಡುಕಾಟ ಗಿಡುಕಾಟ ನಡೆಯಲ್ಲ. ಎಷ್ಟೊಂದು ಕಡೆ ಹೋಗ್ಬೇಕು ಅನ್ನೋದಾದರೂ ಗೊತ್ತಿದೆಯೇ ?

ನಾನು ತಕ್ಷಣವೇ ಡ್ರಾಯರಿನ ಬೀಗ ಹಾಕಿ ಕುರ್ಚಿ ಬಿಟ್ಟೆದ್ದು ನಿಂತುಕೊಂಡು ಹೇಳಿದೆ, ಈ ಮಳೇನಲ್ಲಿ ಬಿಯರೇ ? ನಿನ್ನ ತಲೆ ಕೆಟ್ಟಿದೆಯೇ ?

ಸುವಿಮಲ ಬಾಯಿ ತುಂಬಾ ನಕ್ಕು ಹೇಳಿದ, ಏನು ಹೇಳ್ತಾ ಇದೀಯಾ ? ಈ ಮಾತುಗಳನ್ನೇ ಕೇಳಬಯಸುತ್ತಿದ್ದೆ. ಮಳೆಯಲ್ಲಿ ಬಿಯರನ್ನು ಮರ್ಯಾದಸ್ಥರೇ ಕುಡಿಯೋದು ? ಇವತ್ತು ಒಮ್ಮೆಗೇ ಟಿಪಿಕಲ್ ವ್ಹಿಸ್ಕಿ ವೆದರ್.

ಯಾರು ಕುಡಿಸೋರು ?

ಗೌರಿ ಸೆನ್*

---

* ಕಳೆದ ಶತಮಾನದ ಬಂಗಾಳದ ಈ ಹೆಸರಿನ ವ್ಯಕ್ತಿ ಎಲ್ಲರ ಇಷ್ಟಾರ್ಥಗಳನ್ನು ಮೌನವಾಗಿ ನೆರವೇರಿಸುತ್ತಿದ್ದ. ಹಾಗಾಗಿ ಈ ಗಾದೆ.

ಇವತ್ತು ಗೌರಿ ಸೇನ್ ಯಾರು ?

ನೀನೇ ಆಗ್ತೀಯ ಅಂತ ಗೊತ್ತಾಗುತ್ತೆ. ಹಾಗಾದ್ರೆ ನಡಿ ಅವಿನಾಶನ ಬಳಿ ಹೋಗೋಣ.

ಬಾಗಿಲು ತೆರೆದು ಹೊರ ಹೊರಡುವಾಗ ವನಮಾಲಿ ಬಾಬುಗಳು ಬಂದರು. ಕೈಯಲ್ಲಿ ಟ್ರೇಸಿಂಗ್ ಪೇಪರ್‌ನಲ್ಲಿ ಕೆಲವೊಂದು ಡಿಸೈನ್. ಯಾರೇ ವಯಸ್ಸಾದವರ ಚಿತ್ರ ಬರೀಬೇಕಾದ್ರೆ ಅವರು ತಮ್ಮ ಮುಖದಚಿತ್ರವನ್ನೇ ಬರಿಯುವುದು. ಅವರೆಂದರು, ಮಿ. ಗಂಗೂಲಿ, ನೀವು ಹೊರಟುಬಿಟ್ರಿರಾ ? ಸೈಮನ್ ಕಂಪೆನಿಯ ಕಾಪಿಯನ್ನ –

ಕ್ಷಣದಲ್ಲಿ ದನಿಯಲ್ಲಿ ಒರಟುತನ ತುಂಬಿಕೊಂಡು ಹೇಳಿದೆ – ನಾಳೆ ಪ್ರೆಸ್ ಮುಚ್ಚಿರುತ್ತೆ. ಇವತ್ತು ಕಾಪಿ ತೊಗೊಂಡು ಏನು ಮಾಡೋದು ? ಇದನ್ನು ನೀವು ಏನು ಮಾಡೋಕೂ ಆಗೋದಿಲ್ಲ. ಪ್ರೆಸ್ ಟೈಪ್ ಕಂಪೋಜ್ ಮಾಡಿ ಕೂಡಿಸಬೇಕಾಗುತ್ತೆ. ನೀವು ಡ್ರಾಯಿಂಗ್‌ಗಳನ್ನು ನನ್ನ ಟೇಬಲಿನ ಮೇಲೆ ಇಟ್ಟುಬಿಡಿ. ಮಿಸ್ಟರ್ ಮೈತ್ರ, ಹಿಂತಿರುಗಿ ಬಂದು ನನ್ನನ್ನು ಕರೆದರೆ ಹೇಳಿಬಿಡಿ, ನಾನು ರೈಟರ್ಸ್ ಬಿಲ್ಡಿಂಗ್‌ಗೆ ಹೋಗಿದ್ದೀನಿ ಅಂತ, ಅರ್ಥವಾಯ್ತಾ ? ಮುಖ್ಯವಾದ ಕೆಲಸದ ಮೇಲೆ ಹೋಗಿದ್ದಾರೆ ಅಂತ ಹೇಳೋದನ್ನ ಮರೀಬೇಡಿ.

ಮಿಸ್ಟರ್ ಮೈತ್ರ ಅರ್ಥಾತ್ ನನ್ನ ದೊಡ್ಡ ಭಾವನವರು, ಅವರ ಪ್ರಭಾವದಿಂದಲೇ ನಾನು ತಿಂಗಳ ಸಂಬಳ ಪಡೆಯುವ, ಇತರರ ಮೇಲೆ ಅಧಿಕಾರ ಚಲಾಯಿಸುವ ಹಾಗೂ ಇತರರನ್ನು ಬೆದರಿಸುವ ಈ ಕೆಲಸವನ್ನು ಪಡೆದಿರುವುದು. ಒಮ್ಮೊಮ್ಮೆ ಅವರ ಹೆಸರನ್ನು ಉಚ್ಚರಿಸುವಾಗ ಮನದಲ್ಲಿ ಗರ್ವ ಮೂಡುತ್ತೆ. ಆಫೀಸಿನಲ್ಲಿ ಸಂಬಂಧಿಕರಿದ್ದರೂ, ಸ್ವಲ್ಪ ಅಂತರವನ್ನು ಇಟ್ಟುಕೊಳ್ಳುವುದು ಉಚಿತ. ನಾನು ಅದನ್ನೆಲ್ಲ ಅಷ್ಟಾಗಿ ಮನಸ್ಸಿಗೆ ತೆಗೆದುಕೊಳ್ಳುವುದಿಲ್ಲ. ಒಮ್ಮೊಮ್ಮೆ ಮಿ. ಮೈತ್ರ ಎನ್ನದೆ, ಬೇಕೆಂದೇ ಭಾವ ಎಂದೇ ಹೇಳುತ್ತೇನೆ. ಅಕೌಂಟೆಂಟರ ಹತ್ತಿರ ಹೋಗಿ, ಒಮ್ಮೊಮ್ಮೆ ಭಾವನವರ ಕೋಣೆಯ ಫ್ಯಾನ್ ಅದೇನು ಆ ತರಹ ಶಬ್ದ ಮಾಡುತ್ತೆ ? ಅವರಿಗೆ ವಿಪರೀತ ಕೆಲಸ, ಅದನ್ನು ಗಮನಿಸೋದಿಲ್ಲ. ನೀವಾದ್ರೂ ಏನಾದರೊಂದು ವ್ಯವಸ್ಥೆ ಮಾಡಬಾರದೇ ? ಎನ್ನುತ್ತೇನೆ.

ಈ ಆಫೀಸಿನ ದೊಡ್ಡ ಸಾಹೇಬರ ಸ್ವಂತ ಮೈದುನ ನಾನು – ನನ್ನ ಬಗ್ಗೆ ಯಾರು ಮಾತನಾಡೋರು ? ಇದೀಗ ನಾನು ಮಿ. ಮೈತ್ರರ ಹೆಸರನ್ನ ಹೇಳಿದ್ದೇನೆ, ಇದರ ಫಲವಾಗಿ ವನಮಾಲಿ ಬಾಬುಗಳು ಅಲ್ಲಿಯವರೆಗೆ ಆಫೀಸಿನಲ್ಲೇ ಕುಳಿತಿರಬೇಕಾಗುತ್ತೆ.

ಮಳೆ ಜೋರಾಗಿದೆ. ಕವಿದ ಆಕಾಶವನ್ನು ನೋಡಿದರೆ, ಇಡೀ ಮಧ್ಯಾಹ್ನ ಸಂಜೆ ಇದೇ ರೀತಿ ಸೋನೆ ಮಳೆ ಬೀಳ್ತಾನೆ ಇರುತ್ತೇನೋ ಅಂತ ಅನ್ನಿಸುತ್ತೆ. ಮಳೆ ಜೋರಾಗ್ಯೂ ಬೀಳೋಲ್ಲ, ನಿಲ್ಲೋದು ಇಲ್ಲ. ಸುವಿಮಲ ಕಿಡಿಕಿಯಿಂದ ಕೈ ಹೊರ ಚಾಚಿ ಮಳೆಯನ್ನ ನೋಡಿದ. ರಿಸೆಪ್ಷನ್ ಕೌಂಟರಿನ ಯಹೂದಿ ಹುಡುಗಿಯ ಕಡೆ ನಾನು ಮೆಲ್ಲನೆ ನೋಡಿ ಹೇಳಿದೆ, ಮಿಸ್ ನವಮಿ, ಟೆಲಿಫೋನ್ ಬಂದರೆ

ಹೇಳಿ, ನಾನಿವತ್ತು ಹಿಂತಿರುಗೋಲ್ಲ ಅಂತ. ನೀವು ಮಧ್ಯಾಹ್ನದ ಟಪಾಲನ್ನ ವಿಂಗಡಿಸಿಟ್ಟು ಬಿಡಿ. ನಾಳೆ ನಾಡಿದ್ದು ಎರಡೂ ದಿನ ನೀವು ರಜೆ ಹಾಕಿದೀರಾ, ಅಲ್ವಾ ?

ಹೌದು, ಸ್ವಲ್ಪ.....

ಛೇ, ಎರಡು ದಿನ ಆಫೀಸು ತುಂಬಾ ಬಣ ಬಣ ಅನ್ನಿಸುತ್ತೆ.

ಹುಡುಗಿ ನಕ್ಕು ಥಟ್ಟನೆ ಅಂದಳು, ನೀವು ಹೊರಟು ಬಿಟ್ಟಿರಾ, ಇವತ್ತು ಮಧ್ಯಾಹ್ನ ನನಗೂ ಬಣಬಣ ಅನಿಸುತ್ತೆ.

ನಾನು ಕೌಂಟರಿನ ಹತ್ತಿರ ಸ್ವಲ್ಪ ಸರಿದು ಹೇಳಿದೆ, ನಿಜಾನ ? ಇವತ್ತು ನೀನು ಫ್ರೀಯಾಗಿದೀಯಾ ? ಒಂದು ಡೇಟ್ ಯಾಕಾಗ್ಬಾರ್ದು ?

ಹುಡುಗಿ ಆಗಲೂ ತುಟಿಯಲ್ಲಿ ನಗೆಚೆಲ್ಲುತ್ತ ಹೇಳಿದಳು, ಇಲ್ಲ. ಸಂಜೆ ಐದರವರೆಗೆ ಮಾತ್ರ ನಾನು ಫ್ರೀ.

ಸುಂದರ ಮುಖದಲ್ಲಿ ಒಂದು ಮೊಡವೆಯ ಕಲೆ. ಆದರೆ ಅಂಥಾ ತಿಳಿ ಬಣ್ಣವೇನಲ್ಲ. ಕಂದು ಬಣ್ಣದ ಕೂದಲು, ಆ ಹುಡುಗಿಯ ಎರಡು ಕಣ್ಣಿನ ಬಣ್ಣವೂ ಎರಡು ತರಹ. ಒಂದು ಕಣ್ಣಿನ ಗುಡ್ಡೆಯ ಬಣ್ಣ ನೀಲಿ, ಮತ್ತೊಂದರ ಬಣ್ಣ ಕಪ್ಪು. ನಮ್ಮತ್ತೆಯ ಮನೆಯಲ್ಲಿನ ಒಂದು ಬೆಕ್ಕಿಗೂ ಇದೇ ತರಹ. ಅದಕ್ಕೂ ಎರಡೂ ಬಣ್ಣದ ಕಣ್ಣಿರುವುದನ್ನು ನೋಡಿದ್ದೆ.

ಸುವಿಮಲ ಮಳೆಯಲ್ಲೇ ರಸ್ತೆಗಿಳಿದು ಹೇಳಿದ, ಹುಡುಗಿ ಸಿಕ್ಕಿದಾಳೇನೋ ?

ಪ್ರಯತ್ನಪಟ್ಟಿದೀನಿ.

ಅರುಣನ ಆಫೀಸಿನಲ್ಲೊಬ್ಬ ಟೆಲಿಫೋನ್ ಆಪರೇಟರ್ ಇದ್ದಳು. ಬಂಗಾಲಿ ಹುಡುಗಿ. ಅವಳು ಧ್ವನಿ ಬದಲಾಯಿಸಿ ಅರುಣನೊಡನೆ ಪ್ರೇಮದ ಮಾತುಗಳನ್ನಾಡ್ತಾ ಇದ್ದಳು.

ಸರಿ ಇವೆಲ್ಲ ಅರುಣನ ಬರೀ ಬೂಟಾಟಿಕೆ ಮಾತು.

ಇಲ್ಲವೋ, ನನಗೆ ಪೂರ್ತಿ ವಿಷಯ ಗೊತ್ತು. ಯಾವಾಗ ಅರುಣ ಒಬ್ಬನೇ ಇರ್ತಾನೋ, ಆಗ ಹುಡುಗಿ ಮೊದಲು ನೀರಸ ದನಿಯಲ್ಲಿ ಆಪರೇಟರುಗಳ ಧ್ವನಿ ಯಾವ ರೀತಿ ಇರುತ್ತೋ ಆ ತರಹ ಹೇಳ್ತಿದ್ದಳು. ಮಿಸ್ಟರ್ ದಾಸ್‌ಗುಪ್ತ, ಹಿಯರ್ ದೇರ್ ಈಸ್ ಎ ಕಾಲ್ ಫಾರ್ ಯು. ಆನಂತರವೇ ಸ್ವಲ್ಪ ಹೊತ್ತು ಬಿಟ್ಟು, ಅನ್ಯ ರೀತಿಯ ದನಿಯಲ್ಲಿ ಹಲೋ, ಅರುಣ್, ಎಂದು ಮೃದು ನಗು. ಅರುಣ, ಯಾರು ? ಅಂತ ಕೇಳಿದಾಗ ಅದೇ ರಹಸ್ಯಮಯ ಕಂಠದಿಂದಲೇ, ನನ್ನ ಗುರುತು ಸಿಗಲಿಲ್ಲವೆ ? ಆಗ ಅರುಣ ತಡವರಿಸಿ, ಇಲ್ಲ ಖಂಡಿತವಾಗಿಯೂ, ನೀವ್ಯಾರು ? ಎಂದಾಗ ಹುಡುಗಿ ಆಗ ಗುರುತು ಸಿಗಲಿಲ್ಲದ ಮೇಲೆ ಇರಲಿ ಬಿಡಿ. ಇಷ್ಟು ಹೇಳಿ ಲೈನ್ ಸಂಪರ್ಕ ತೆಗೆದುಬಿಡುತ್ತಿದ್ದಳು. ಮಾರನೆಯ ದಿನವೂ ಅದೇ ತರಹ ನನ್ನ ಗುರುತು ಸಿಗಲಿಲ್ಲವೇ ? ಅರುಣನಂತೂ ಸಂದಿಗ್ಧಕ್ಕೆ ಒಳಗಾದ. ಟೆಲಿಫೋನಿನಲ್ಲಿ ಗಂಟಲಿನ ಧ್ವನಿ ಸ್ವಲ್ಪ ಬದಲಾಯಿಸಿಬಿಡುತ್ತೆ. ಯಾವುದೋ ಹುಡುಗಿಯನ್ನು ಇನ್ನಾವುದೋ ಹುಡುಗಿ ಅಂತ ಅಂದುಕೊಂಡುಬಿಟ್ಟರೆ – ಅದೊಂದು ದೊಡ್ಡ ಫಜೀತಿ. ಎರಡು ಮೂರು ದಿನ ಈ ರೀತಿ ನಡೆದ ಮೇಲೆ ಅವನು ಹಿಂದು ಮುಂದೂ ನೋಡದೆ

ಒಂದು ದಿನ ಹೇಳಿಬಿಟ್ಟ, ನೀನು ಯಾರು ಮಾಲತೀನಾ ?

ಆ ಕಡೆಯಿಂದ ನಿಟ್ಟುಸುರಿನ ಧ್ವನಿ. ನಂತರ, ಇಷ್ಟು ದಿನದ ಮೇಲಾದ್ರೂ ಗುರುತು ಸಿಕ್ಕಿತಲ್ಲ. ಅರುಣ ಕೇಳಿದ, ಮಾಲತಿ ಕಾನ್‌ಪುರದಿಂದ ಯಾವಾಗ ಹಿಂದಿರುಗಿದಿ ? ಹುಡುಗಿಯೆಂದಳು, ಮೂರು ದಿನದಿಂದ ಫೋನ್ ಮಾಡ್ತಾ ಇದೀನಿ. ನೀನು ನನ್ನನ್ನು ಗುರುತೇ ಹಿಡಿಯಲಿಲ್ಲ. ಎಷ್ಟು ಮಹಾ ದಿನವಾಗಿ ಹೋಯ್ತೂಂತ. ಅರುಣನೆಂದ, ಎಷ್ಟು ದಿನ, ಮೂರು ವರ್ಷದ ನಂತರ. ಹುಡುಗಿ ಎಂದಳು, ಮೂರು ವರ್ಷಾನೇ ಆಗಿರಲಿ, ಅಷ್ಟರಲ್ಲೇ ಮನುಷ್ಯ ಎಲ್ಲಾ ಮರೆತು ಬಿಡೋಕಾಗುತ್ತ ? ಆನಂತರ ಇದೇ ತರಹ ಕೆಲವು ದಿನ ನಡೀತಿತ್ತು.

ನಾನು ಪ್ರಶ್ನಿಸಿದೆ, ಈಗ ಏನು ಸಮಾಚಾರ ?

ಕೇಳಯ್ಯ, ಮಜಾನಾ. ಅರುಣನಿಗೆ ಆಗಲೂ ಏನೊಂದೂ ಅರ್ಥವಾಗಿರಲಿಲ್ಲ. ಆಪರೇಟರ್‌ನ ವಿಷಯದ ಬಗ್ಗೆಯೂ ಅವನು ಯೋಚಿಸಿರಲಿಲ್ಲ. ಟೆಲಿಫೋನಿನ ಘಟನೆಯಿಂದ ವಿಚಲಿತಗೊಂಡಿದ್ದ. ಒಂದು ದಿನ ಇದೇ ರೀತಿ ಫೋನ್ ಬಂದಾಗ, ನಾನು ಅಲ್ಲೇ ಇದ್ದೆ. ಅರುಣ ನನಗೆ ಎಲ್ಲಾ ವಿಷಯವನ್ನು ವಿವರಿಸಿ, ಹಿಂಜರಿಯುತ್ತಲೇ ಪ್ರಶ್ನಿಸಿದ, ಈಗ ಏನು ಮಾಡೋಣ ಹೇಳು ನೋಡೋಣ ? ನಾನೆಂದೆ, ಮಾಲತಿ ನಿನ್ನ ಹಳೇ ಸ್ನೇಹಿತಳು ಅಂತ ಕಾಣುತ್ತೆ ಅಲ್ವಾ ? ಅವಳನ್ನ ಯಾಕೆ ನೀನು ಭೇಟಿಯಾಗಬಾರದು ? ಅರುಣ ದೀರ್ಘವಾದ ನಿಶ್ವಾಸದಿಂದ ಹೇಳಿದ, ನಿನ್ನ ತಲೆ. ಯಾವ ಕಾಲಕ್ಕೂ ನನಗೆ ಮಾಲತಿ ಅನ್ನೋ ಹೆಸರಿನ ಹುಡುಗಿಯ ಪರಿಚಯವಿಲ್ಲವೇ ಇಲ್ಲ. ನಾನು ಯಾವುದೋ ಹೆಸರು ಹೇಳಿದರೆ ಅದನ್ನೇ ಪಟ್ಟಾಗಿ ಹಿಡಿದುಕೊಂಡು ಬಿಟ್ಟಿದಾಳೆ. ಈಗ ಯಾವ ಹುಡುಗಿ ಗಂಟು ಬಿದ್ದಿದಾಳೋ ಏನೋ ? ಪ್ರತಿ ನಿತ್ಯ ನನ್ನೊಡನೆ ಹಾಸ್ಯಕ್ಕೆಂದೇ ಮಾತನಾಡ್ತಾಳೆ.

ನಾನೆಂದೆ, ಅರುಣನ ಸ್ವಂತ ಹೆಂಡತಿ ಈ ರೀತಿ ತಮಾಷೆ ಮಾಡ್ತಾ ಇಲ್ಲ ತಾನೇ ?

ಇಲ್ಲ, ಅದನ್ನ ಪರಿಶೀಲಿಸಿದ್ದಾಯ್ತು. ಅರುಣನ ಹೆಂಡತಿ ಒಂದು ದಿನ, ಬಳಗದವರೊಂದಿಗೆ ಮಧ್ಯಾಹ್ನ ಸಿನೇಮಾಗೆ ಹೋಗಿದ್ದಳು. ಆ ದಿನವೂ ಫೋನ್ ಬಂದಿತ್ತು. ಮತ್ತು ಒಂದು ರೀತಿಯಲ್ಲಿ ಇಡೀ ವ್ಯವಹಾರವನ್ನು ಹಾಸ್ಯ ಅಂತಲೂ ಹೇಳೋಕಾಗೋದಿಲ್ಲ. ಎಷ್ಟು ದಿನ ಅಂತ ಸುಮ್ಮನೆ ಹಾಸ್ಯ ಮಾಡ್ಕೊಂಡು ಇರೋಕಾಗುತ್ತೆ. ಅದಲ್ಲದೆ ಹುಡುಗಿ ಏನೆಲ್ಲಾ ಹೇಳ್ತಾಳೋ, ಅದರಲ್ಲಿ ಸ್ವಲ್ಪ ಬಿಸಿ ಬಿಸಿ ಸುದ್ದಿ ಇರ್ತಿತ್ತು. ಅರುಣ ಯಾರೊಬ್ಬ ಪರಿಚಿತ, ಅರೆಪರಿಚಿತ ವ್ಯಕ್ತಿಯನ್ನ ಸಂದೇಹಿಸಲು ಸಿದ್ಧನಿರಲಿಲ್ಲ. ಆಗ ಟೆಲಿಫೋನ್ ಆಪರೇಟರ್‌ರ ವಿಷಯದ ಬಗ್ಗೆ ಆಲೋಚನೆ ಹೊಳೆದದ್ದು ನನ್ನ ತಲೆಗೇ. ಅರುಣನ ಆಫೀಸಿನಲ್ಲಿ ಇಬ್ಬರು ಆಪರೇಟರ್‌ಗಳಿದ್ದಾರೆ. ಇಬ್ಬರಿಗೂ ಷಿಫ್ಟ್ ಡ್ಯೂಟಿ. ಇವರಿಬ್ಬರಲ್ಲಿ ಯಾರಿರಬಹುದು ? ಒಬ್ಬಳು ಕಪ್ಪಗೆ, ದಪ್ಪ. ಮತ್ತೊಬ್ಬಳು ಬೆಳ್ಳಗೆ ಬಳಿಚಿಕೊಂಡಂತಿರುವವಳು. ಕಪ್ಪಗೆ, ದಪ್ಪಗಿರುವಾಕೆಯೇ ಆಗಿರಲು ಸಾಧ್ಯ. ಈ ತರಹ ಮೋಡದ ಹಿಂದೆ ಅವಿತುಕೊಂಡು ಯಾಕೆ ಆಟವಾಡ್ತಾಳೆ ? ಒಂದು ದಿನ ನನ್ನ ಕೈಗೆ ಸಿಕ್ಕಿಬಿದ್ದಳು. ನಡಿ ಇಷ್ಟು ಹತ್ತಿರ ಬಂದಿದೀವಿ, ಅವಿನಾಶನ ಬಳಿಗೆ

ಹೋಗುವ ಮೊದಲು ಒಂದು ರೌಂಡು ಮುಗಿಸಿಯೇ ಹೋಗೋಣ.

ಮಾತನಾಡುತ್ತ ನಾವು ನಡೆದುಕೊಂಡೇ ವೆಲಿಂಗ್ಟನ್‌ನಿಂದ, ಧರ್ಮತಲಾವರೆಗೂ ಬಂದು ಬಿಟ್ಟಿದ್ದೆವು. ಮಳೆಯಿಂದ ಇಡೀ ಮೈ ಒದ್ದೆ. ಅವಿನಾಶನ ಆಫೀಸ್ ಇರೋದು ಬೆಂಟಿಂಕ್ ಸ್ಟ್ರೀಟ್‌ನಲ್ಲಿ. ಇನ್ನೂ ಮತ್ತಷ್ಟು ನಡೆಯಬೇಕು ಸುವಿಮಲನಿಗೆಂದೆ, ನನ್ನ ಹತ್ತಿರ ಜಾಸ್ತಿ ಹಣ ಇಲ್ಲ ಕಣೋ.

ನಡಿಯೋ ನನ್ನ ಹತ್ತಿರ ಹತ್ತು ರೂಪಾಯಿ ಇದೆ: ನಿನ್ನ ಹತ್ತಿರ ಏನೂ ಇರೋದಿಲ್ಲ. ಇನ್ನೊಂದು ಕೆಲಸ ಮಾಡಬಹುದು. ಇಷ್ಟು ಹೊತ್ತು ಇದನ್ನ ಯಾಕೆ ಯೋಚನೆ ಮಾಡಲಿಲ್ಲ ? ನಿನ್ನ ತಲೆಯಲ್ಲಿ ಇಷ್ಟೊಂದು ಬುದ್ಧಿ ಯಾಕೆ ? ಅವಿನಾಶನ ಆಫೀಸ್ ತನಕ ಹೋಗೋ ಅವಶ್ಯಕತೇನೇ ಇಲ್ಲ. ಅವನನ್ನೇ ಫೋನ್ ಮಾಡಿ ಇಲ್ಲಿಗೆ ಕರೆಸಿಬಿಟ್ಟರೆ ಸಮಸ್ಯೆ ಬಗೆಹರಿಯುತ್ತೆ.

ಫೋನಿನಲ್ಲಿ ಅವಿನಾಶ ಸಿಕ್ಕ. ನಾವಿಬ್ಬರು ಚಿಕ್ಕ ಮಟನ್ ಬಾರಿಗೆ ಹೋಗಿ ಒಳನುಗ್ಗಿದೆವು. ಹೋಗುವಾಗ ಬೇರರ್‌ಗೆ ಟಿಪ್ಸ್ ಕೊಡದಿದ್ದರೂ ನಡೆಯುತ್ತೆ. ಅದಕ್ಕೆ ಸುವಿಮಲ ತಾನೇ ಸ್ವತಃ ಕೌಂಟರ್‌ನಿಂದ ಎರಡು ಗ್ಲಾಸ್ ವ್ಹಿಸ್ಕಿ ಹಾಗೂ ಸೋಡಾ ಇಸ್ಕೊಂಡು ಟೇಬಲಿಗೆ ಬಂದ. ಆನಂತರ ನನ್ನ ಕಣ್ಣುಗಳನ್ನೇ ದಿಟ್ಟಿಸಿ ಹೇಳಿದ, ಯಾಕೆ ಕೋಪ ಮಾಡ್ಕೋತೀಯ ? ಬೇಕೆಂದೇ ಜಾಸ್ತಿ ಸೋಡಾ ಬೆರೆಸಿಕೊಂಡು ಬಂದಿದೀನಿ. ಇವೆಲ್ಲ ಈಗ ಕಲಿತದ್ದಲ್ಲ. ಸ್ವಲ್ಪ ಸ್ವಲ್ಪವಾಗಿ ದಿನದ ಮೊದಲ ಪೆಗ್ ಕುಡಿಯುವಾಗ, ತುಂಬಾ ಸೋಡಾ ಬೆರೆಸಿ, ತುಂಬಾ ನಿಧಾನವಾಗಿ ಕುಡಿಯಬೇಕು. ಆನಂತರ ರಾತ್ರಿಯೆಲ್ಲ ಏನು ಇಷ್ಟ ಬರುತ್ತೋ ಆ ರೀತಿ ಮಾಡಬಹುದು.

ಮೊದಲ ಗುಟುಕು ಗುಟುಕರಿಸುತ್ತಲೇ ನನ್ನ ಮನಸ್ಸು ಕೆಟ್ಟು ಹೋಯಿತು. ಸುವಿಮಲನಿಗೆ ಸುಳ್ಳು ಹೇಳಿದ್ದೆ. ನಿಜವಾಗಿ ನನ್ನ ಜೇಬಿನಲ್ಲಿ ತುಂಬಾ ದುಡ್ಡಿತ್ತು. ಇವತ್ತು ನಾನು ನಿನ್ನೆಯ ಬಟ್ಟೆಯನ್ನೇ ಹಾಕಿಕೊಂಡು ಬಂದಿದೀನಿ. ನಿನ್ನೆ ಮಧ್ಯಾಹ್ನ ದೊರೆತ ತುಂಬಾ ಹಣ ಜೇಬಿನಲ್ಲಿ ಹಾಗೇ ಇಟ್ಟುಕೊಂಡಿದ್ದೆ. ಸುವಿಮಲನೊಂದಿಗೆ ಪ್ರಾರಂಭವಾದದ್ದು ಇದು ಇಂದು ಎಲ್ಲಿಗೆ ಬಂದು ಮುಟ್ಟುತ್ತೋ ಗೊತ್ತಿಲ್ಲ. ಆದ್ದರಿಂದ ಇವತ್ತು ಹೇಗಾದರು ಮಾಡಿ ತಪ್ಪಿಸಿಕೊಳ್ಳೋಣ ಅಂತ ಅಂದುಕೊಂಡಿದ್ದೆ. ಇವತ್ತು ಸಾಯಂಕಾಲದೊಳಗೆ, ಸ್ವಾಭಾವಿಕ ವ್ಯಕ್ತಿಯ ರೀತಿ ಮೂರು ಸರಳ ಕೆಲಸವನ್ನು ಮಾಡಬೇಕು ಅಂತ ಮೊದಲೇ ನಿಶ್ಚಯಿಸಿಕೊಂಡಿದ್ದೆ. ಒಬ್ಬನೇ ಯಾರೊಬ್ಬರ ಜೊತೆ ಇಲ್ಲದೆ ಸಂಜೆ ನಡೆದುಕೊಂಡೇ ನಾನು ಮೂರು ಸ್ಥಳಗಳಿಗೆ ಹೋಗಿಬರಬೇಕು. ಮೊದಲು ಆಸ್ಪತ್ರೆ. ನಡು ನಡುವೆ ಆಸ್ಪತ್ರೆಗೆ ಹೋಗಿ ಬರ್ತಿದ್ರೆ ಬದುಕುಳಿಯಬೇಕೆನ್ನುವ ಆಸೆ ತೀವ್ರವಾಗುತ್ತದೆ. ಆದರೆ ಕೇವಲ ಅದಕ್ಕಾಗಿ ಅಂತ ಅಲ್ಲ. ದಾದಾಮೊಶಾಯ್ ಆಸ್ಪತ್ರೆಯಲ್ಲೇ ಇದ್ದಾರೆ. ಅವರನ್ನ ಎಂಟು ವರ್ಷದಿಂದಲೂ ನಾನು ನೋಡಿಲ್ಲ. ಅವರನ್ನ ಕೊನೆಯ ಸಲ ಒಮ್ಮೆ ನೋಡಿ ಬರಬೇಕೆಂದು ಬಹಳ ಇಚ್ಛೆಯಾಗುತ್ತಿದೆ. ಆದರೆ ಇಂದು ನನಗೆ ಬಿಡುವಿಲ್ಲ ಅನ್ನೋದನ್ನ ನಾನು ಮೊದಲ ಗುಟುಕು ಗುಟುಕರಿಸುವಾಗಲೇ ತಿಳಿದುಕೊಂಡು ಬಿಟ್ಟೆ.

ಸುವಿಮಲನೆಂದ, ಏನೋ ತೂಕಡಿಸ್ತಾ ಇದ್ದೀ ಏನೋ ?

ನಾನು ಮುಖವೆತ್ತಿ ಹೇಳಿದೆ, ಶೇಖರನ ಬಗ್ಗೆ ಯೋಚಿಸುತ್ತಲಿದ್ದೆ, ಎಲ್ಲಿಗೆ ಹೋದನೋ ಏನೋ ?

ಎಲ್ಲೋ ಇರ್ತಾನೆ ಬಿಡು. ನನಗೇನು ಅನಿಸುತ್ತೆ ಗೊತ್ತಾ? ಶೇಖರ ಆ ಮೃಚ್ಛಕಟಿಕ ನಾಟಕದ ಆ ವ್ಯಕ್ತಿಯ ತರಹ, ಅದ್ಯಾವನೋ ಇದಾನಲ್ಲ. ವಸಂತಸೇನೆಯ ಪ್ರೇಮಿ ?

ಚಾರುದತ್ತ ?

ಹೌದು, ಅದೇ ಚಾರುದತ್ತನ ತರಹ ಜೂಜಿನಲ್ಲಿ ಸರ್ವಸ್ವವನ್ನು ಕಳೆದುಕೊಂಡು ತನ್ನನ್ನೇ ತಾನು ಮಾರಿಕೊಂಡಿರಬೇಕು.

ತುಂಬಾ ಜೂಜಾಡ್ತಾನೆ ಈ ನಡುವೆ ಅಂತ ಕೇಳಿದೆ ?

ಅವನಿಗೆ ಯಾವಾಗ ಯಾವುದರ ಹುಚ್ಚು ಹಿಡಿಯುತ್ತೋ ಅದರ ಬಗ್ಗೆ ಯಾರಿಗಾದ್ರೂ ಗೊತ್ತಿದೆಯೇ ? ಈಗ ಅಷ್ಟಾಗಿ ಹೆಂಡ ಕುಡಿಯೋದಿಲ್ಲ. ಈಗ ಅವನಿಗೆ ಕೇವಲ ಜೂಜಿನ ಹುಚ್ಚು, ಜೂಜಿನಲ್ಲಿ ಸೋಲುವ ಹುಚ್ಚು, ಗೆದ್ದರೆ ಅವನಿಗೆ ಸಂತೋಷವಾಗೋದಿಲ್ಲ. ಸೋಲೋದರಲ್ಲೇ ಅವನಿಗೆ ಉತ್ತೇಜನ. ಶೇಖರನ ವಿಷಯ ಬಿಟ್ಟು ಬಿಡು. ಈಗ ಅರುಣನ ವಿಷಯ ಕೇಳು.

ಹೌದು, ಹೌದು. ಯಾವ ಆಪರೇಟರ್ ? ಕಪ್ಪಗೆ ದಪ್ಪಗಿನವಳೋ ಅಥವಾ ತೆಳುವಾದ ತಿಳಿ ಬಣ್ಣದವಳೋ ?

ವಿಷಯ ಕೇಳೋ ಇಲ್ಲಿ, ಒಂದು ದಿನ ನಾನು ಅವನ ಟೇಬಲಿನ ಎದುರು ಸುಮ್ಮನೆ ಕುಳಿತಿದ್ದೆ. ಅದೇ ಸಮಯದಲ್ಲಿ ಅದೇ ಫೋನು, ಅದೇ ನಕಲಿ ಮಾಲತಿಯದು. ಸ್ವಲ್ಪ ಹೊತ್ತು ಮಾತುಕತೆಯಾದ ಮೇಲೆ ನಾನು ಅರುಣನ ಕೈಯಿಂದ, ಫೋನನ್ನ ಇಸಿದುಕೊಂಡು ಹೂಂ ಗುಟ್ಟುತ್ತ ಮುಂದುವರೆಸಿದೆ. ಅಷ್ಟರಲ್ಲಿ ಅರುಣ ಥಟ್ಟನೆ ಪಿ.ಬಿ. ಎಕ್ಸ್. ಇಟ್ಟಿರುವ ಕೋಣೆಗೆ ಓಡಿ ಹೋದ. ಅಲ್ಲೇ ತಕ್ಷಣ ಕೈಗೇ ಸಿಕ್ಕಿ ಬಿದ್ದಳು. ಅದೇ ತೆಳ್ಳಗಿನ ತಿಳಿ ಬಣ್ಣದ ಹುಡುಗಿ. ಆನಂತರ ತುಂಬಾ ಮೋಜಿನ ಸಂಗತಿ ನಡೆಯಿತು. ಹುಡುಗಿ ಖಂಡಿತವಾಗಿಯೂ ಹಾಸ್ಯ ಮಾಡಿರಲಿಲ್ಲ. ಕಿಲ ಕಿಲ ನಗುವ ಬದಲು, ನಾಚಿಕೆಯಿಂದ ತಲೆ ತಗ್ಗಿಸಿ ಬಿಟ್ಟಳು. ಅರುಣನೊಡನೆ ಮಾತನಾಡಲು ಬಯಸಲೇ ಇಲ್ಲ. ಮುಖದ ಬಣ್ಣ ಬಿಳಿಚಿಕೊಂಡು ಬಿಟ್ಟಿತ್ತು. ಸ್ವಲ್ಪ ನಡುಗುತ್ತಲೂ ಇದ್ದಳು. ಅರುಣನಿಗೆಂದಳು, ನನ್ನನ್ನ ಕ್ಷಮಿಸಿ ಬಿಡಿ. ಈ ಕೋಣೆಯಲ್ಲಿರಬೇಡಿ, ಪ್ಲೀಸ್. ನನ್ನಿಂದ ಅನ್ಯಾಯವಾಗಿ ಹೋಯ್ತು. ಅರುಣನಂತು ಮೂಕ ವಿಸ್ಮಿತನಾಗಿ ಹಿಂತಿರುಗಿದ. ಈ ಕಡೆ ನಾನು ಎಷ್ಟು ಹೊತ್ತು ಫೋನ್ ಇಟ್ಟುಕೊಂಡಿದ್ದೆನೋ, ಆಗ ಹುಡುಗಿ ಹೇಳಿದ್ದನ್ನ ಕೇಳಿಸಿಕೊಂಡೆ – ನನ್ನಿಂದ ಇನ್ನು ಸಾಧ್ಯವಿಲ್ಲ ಅರುಣ, ಇದೇ ಕೊನೇ ಸಲ. ನೀನು ನನ್ನನ್ನ ದೂರಸರಿಸಿದರೆ, ನಾನು ಒಟ್ಟಾರೆ ಎಲ್ಲಿಗೆ ಹೋಗ್ತೇನೋ ಗೊತ್ತಿಲ್ಲ. ಅಯ್ಯಮ್ಮ, ಅವಳ ಆ ದನಿ ಮೋಸ ಮಾಡುವಂತಿರಲಿಲ್ಲ, ಕೇಳಿ ನನ್ನ ದೇಹ ನಡುಗಿತ್ತು.

ಹುಡುಗಿಯ ಹೆಸರೇನು ?

ಸಾವಿತ್ರಿ. ಸಾವಿತ್ರಿ ಹಾಲ್‌ದಾರ್. ರೆಫ್ಯೂಜಿ ಹುಡುಗಿ, ಕೆಲಸ ಮಾಡಿ ಒಂದು ದೊಡ್ಡ ಸಂಸಾರವನ್ನೇ ನಡೆಸ್ತಾ ಇದಾಳೆ. ಆದರೆ ಹುಡುಗಿ ತೀರಾ ಇತರ ಟೆಲಿಫೋನ್ ಆಪರೇಟರ್ ತರಹ ಅಲ್ಲ. ಅವಳ ಮುಖದಲ್ಲಿ ಒಂದು ಬೇರೆ ತರಹದ ಲಾವಣ್ಯವಿದೆ. ನೋಡಿದಾಗ ಮನಸ್ಸಿಗನಿಸುತ್ತೆ ತುಂಬಾ ದೂರದಿಂದ ನೋಡ್ತಾ ಇದ್ದಾಳೋ ಏನೋ ಅಂತ ಅಥವಾ ಹತ್ತಿರ ಕುಳಿತು ಕೂಡಾ ದೂರದ ವಸ್ತುವನ್ನು ನೋಡ್ತಾ ಇದ್ದಾಳೋ ಏನೋ ಅಂತ.

ಇನ್ನು ಒಂದು ರೌಂಡ್‌ಗೆ ಆರ್ಡರ್ ಕೊಡು. ಲೋಟ ಖಾಲಿ. ಎದ್ದು ಹೋಗೋದೇನೂ ಬೇಡ, ಬೇರರ್‌ಗೆ ಹೇಳಿಬಿಡು.

ನಿನಗಿನ್ನು ಸೋಡಾ ಬೇಕೆ ?

ಬೇಡ.

ಹುಡುಗೀನ ಆಫೀಸಿನಲ್ಲಿ ಎಲ್ಲರೂ ತುಂಬಾ ಗೋಳು ಹೊಯ್ದುಕೊಳ್ಳುತ್ತಾರೆ. ಸ್ವಲ್ಪ ಅವಕಾಶ ಸಿಕ್ಕರೆ ನಡು ವಯಸ್ಸಿನ ಆಫೀಸರರ ಸನ್ನೆ – ಸಂಜ್ಞೆಗಳು. ಯುವಕ ಕಾರಕೂನರ ಕಿರುಕುಳ ಇದ್ದೇ ಇರುತ್ತೆ. ನೀನೂ ಇವತ್ತು ನಿನ್ನ ಆಪರೇಟರ್ ಜೊತೆ ಯಾವ ರೀತಿ ಮಾಡಿದಿ ........

ನಾನೇನು ಮಾಡಲಿಲ್ಲ. ನಾನು ಹಾಸ್ಯ ಮಾಡ್ತಿದ್ದೆ.....

ಅದೇ ನೋಡು. ಟೆಲಿಫೋನ್ ಆಪರೇಟರೊಂದಿಗೆ ಎಲ್ಲರೂ ಹಾಸ್ಯ ಮಾಡೋರೇ..... ಮತ್ತು ಆ ಹಾಸ್ಯ ಕೇವಲ ಸ್ವಲ್ಪ ಗೋಪ್ಯವಾಗಿ ಸ್ಫೂರ್ತಿ ಕೊಡುವ ಚೆಷ್ಟೆ. ಬೇರಿನ್ನೇನಿಲ್ಲ, ಹುಡುಗಿಯ ಡ್ಯೂಟಿ ಮುಗಿಯೋದು ಐದೂವರೆಗೆ. ನಾನು ಮತ್ತು ಅರುಣ ರಸ್ತೆಯ ತಿರುವಿನಲ್ಲಿ ನಿಂತಿದ್ದೆವು. ನಾನು ಸ್ವಲ್ಪ ದೂರದಲ್ಲಿ ನಿಂತಿದ್ದೆ. ಅರುಣ ಮಾತನಾಡಿಸಹೋದ. ಸ್ವಲ್ಪ ಹೊತ್ತಿನ ಮೇಲೆಯೇ ಹಿಂತಿರುಗಿದ. ಹುಡುಗಿ ಲಜ್ಜೆಯಿಂದ ಮುಜುಗರಪಟ್ಟುಕೊಂಡು ಯಾವ ಮಾತನ್ನಾಡಲೂ ಸಾಧ್ಯವಾಗದೆ, ಸುಮ್ಮನೆ ನನ್ನನ್ನು ಕ್ಷಮಿಸಿ, ನನ್ನನ್ನ ಕ್ಷಮಿಸಿ ಅಂತ ಮಾತ್ರ ಹೇಳಿದಳು. ನನಗೆಷ್ಟು ಕರುಣೆ ಬಂತು ಅಂದ್ರೆ ನನ್ನೆದೆ ಮುದುಡಿ ಹೋಯಿತು. ಆ ಹುಡುಗಿಯನ್ನೇ ನಾನು ಮದುವೆ ಮಾಡ್ಕೋಬೇಕು ಅಂತ ಅನ್ನಿಸಿತು.

ನೀನೇ ? ನೀನ್ಯಾಕೆ ಪುನಃ ಇದರಲ್ಲಿ ಸಿಕ್ಕಿಹಾಕಿಕೊಂಡೆ ?

ವ್ಹಾ! ಹುಡುಗಿಗೆ ಅರುಣನಿಗೆ ಮದುವೆಯಾಗಿರೋ ವಿಷಯ ಗೊತ್ತಿಲ್ಲ. ಅರುಣನ ಕೆಂಪು ಮುಖ ಹಾಗೂ ಶಾಂತ ಸ್ವಭಾವವನ್ನು ನೋಡಿ ಅರುಣನ ಪ್ರೇಮದಲ್ಲಿ ಸಿಕ್ಕಿ ಬಿದ್ದಿದ್ದಳು. ಅದಕ್ಕೆಂದೇ ಆ ಹುಡುಗಿ ಹಾಳಾಗೋದು ಬೇಡ ಅಂತಲೇ ಒಂದು ವೇಳೆ ನಾನು ಮದುವೆ ಮಾಡಿಕೊಂಡರೆ .....

ಹುಡುಗಿ ಪ್ರೀತಿಸ್ತಿರೋದು ಅರುಣನನ್ನ, ಥಟ್ಟನೆ ನಿನ್ನನ್ನ ಹೇಗೆ ಮದುವೆ ಮಾಡಿಕೊಳ್ಳುತ್ತಾಳೆ ? ಅದಲ್ಲದೆ ಹುಡುಗಿ ಅರುಣನನ್ನ ಪ್ರೀತಿಸ್ತಾಳೆ ಅನ್ನೋದು ಗೊತ್ತಿದ್ದೂ ನೀನು ಅವಳನ್ನ ಹೇಗೆ ಮದುವೆ ಮಾಡಿಕೊಳ್ತೀಯ ?

ಅರುಣನನ್ನ ಪ್ರೀತಿಸ್ತಾ ಇದ್ದಳು ಎಂದ ಮಾತ್ರಕ್ಕೆ ಮುಂದೆ ಅವಳು ನನ್ನನ್ನು ಪ್ರೀತಿಸಲು ಸಾಧ್ಯವಿಲ್ಲವೇ ? ನಾನು ಕೂಡಾ ಈ ಮೊದಲು ಹದಿನೇಳು

ಹುಡುಗಿಯರನ್ನು ಪ್ರೀತಿಸ್ತಿದ್ದೆ. ಹಾಗಂತ ಇನ್ಯಾರನ್ನು ಪ್ರೀತಿಸಲು ಸಾಧ್ಯವಿಲ್ಲವೇ ? ನಾನಂತೂ ಅದೇ ದಿನ ಆ ಹುಡುಗಿಯನ್ನ ತುಂಬಾ ಪ್ರೀತಿಸಲು ಪ್ರಾರಂಭಿಸಿಬಿಟ್ಟೆ. ಸಾವಿತ್ರಿ – ಈ ಹೆಸರನ್ನ ಯೋಚಿಸಿದರೇ ನನ್ನ ಎದೆಯೊಳಗೆ ಏನೋ ಒಂದು ರೀತಿ ವ್ಯಥೆಯಾಗುತ್ತದೆ. ಇದ್ದರ ಹೆಸರೇ ಪ್ರೀತಿ ಪ್ರೇಮ. ಹೌದೋ ಅಲ್ಲವೋ ?

ಯಾರಿಗೆ ಗೊತ್ತು ? ಏನೇ ಆಗಲಿ ನೀನು ಹುಡುಗಿ ಹತ್ತಿರ ಮದುವೆ ಪ್ರಸ್ತಾಪ ಮಾಡಿದೆಯಾ ?

ಇಲ್ಲ. ಸಾವಿತ್ರಿಗೆ ನನ್ನ ಪರಿಚಯವೇ ಇಲ್ಲ. ಅರುಣ ಒಂದು ವೇಳೆ ನನ್ನ ಜೊತೆ ಪರಿಚಯ ಮಾಡಿಸಿಕೊಟ್ಟಿರುತ್ತಿದ್ದರೆ, ನಾನು ಸಾವಿತ್ರಿಯ ಹತ್ತಿರ, ಯಾವುದೇ ತೊಂದರೆ ಇಲ್ಲದೆ ಆತ್ಮಸಮರ್ಪಣೆ ಮಾಡಿಕೊಂಡು ಬಿಡುತ್ತಿದ್ದೆ. ಆ, ಟೆಲಿಫೋನಿನಲ್ಲಿನ ಅವಳ ಆ ಕಾರುಣ್ಯದ ಸ್ವರ, ಇನ್ನೂ ನನ್ನ ಕಿವಿಯಲ್ಲಿ ಮೊಳಗುತ್ತಿದೆ. ನೀನು ಒಂದು ವೇಳೆ ನನ್ನನ್ನು ದೂರ ಸರಿಸಿಬಿಟ್ಟರೆ, ನಾನು ಎಲ್ಲಿಗೆ ಹೋಗ್ತೀನೋ ಗೊತ್ತಿಲ್ಲ. ನನ್ನ ಮನಸ್ಸಿಗನ್ನಿಸಿತು – ನದಿಯ ಧಾರೆಯಲ್ಲಿ ಹರಿದು ಹೋಗುವ ಆ ಹುಡುಗಿಯ ಮೃದು ಕೈಗಳನ್ನು ನಾನು ಹಿಡಿಯಲೇಬೇಕು. ನಾನು ಅರುಣನಿಗೆ ಎಲ್ಲಾ ಹೇಳಿದೆ. ಅವನೇನು ಮಾಡಿದ ಗೊತ್ತೆ ? ಅವನು ತುಂಬಾ ಕೆಟ್ಟವನು. ಸ್ವಾರ್ಥಿ. ನನ್ನ ಮಾತು ಕೇಳಿ ಅರುಣ ರೇಗಿದ. ಅದಕ್ಕೆ ನಾನು ಅವನ ಆಫೀಸಿಗೆ ಹೋಗೋದನ್ನೇ ಬಿಟ್ಟುಬಿಟ್ಟೆ. ನಾನು ಇನ್ನೆಂದಾದರೂ ಹೋದರೆ ಅವನು ಬಾಗಿಲು ಕಾಯುವವನನ್ನು ಕರೆಸಿ ನನ್ನನ್ನು ಹೊರಗೆ ಕಳಿಸಿ ಬಿಡ್ತಾನಂತೆ.

ಅರುಣನನ್ನ ದೋಷಿ ಅಂತ ಹೇಳೋಕಾಗೋದಿಲ್ಲ. ನಿನ್ನನ್ನ ಯಾವ ರೀತಿ ನಂಬೋದು ?

ಯಾಕೆ ಒಂದು ಕ್ಷಣದಲ್ಲಿ ಮನುಷ್ಯನ ಜೀವನ ಬದಲಾಯಿಸೋದಿಲ್ವೆ ? ನಾನು ಆ ದಿನ ಆ ಒಂದು ಮುಹೂರ್ತದಲ್ಲಿ –

ಹೌದು, ಒಂದು ಕ್ಷಣದಲ್ಲೂ ಬದಲಾಗಬಹುದು. ಆದರೆ ಆ ವಿಶೇಷ ಮುಹೂರ್ತವನ್ನು ಗುರುತಿಸುವುದು ಬಹಳ ಕಷ್ಟ. ನಿನ್ನ ಹಿಂದಿನ ಹದಿನೇಳು ಸಲದ ......

ಹ್ಞಾ! ನನಗ್ಗೊತ್ತು ಈ ಮುಹೂರ್ತವೇ ರಿಯಲ್. ಹಾಗಂತ ಹೇಳಿದ್ರೆ ಅರುಣ ನನ್ನನ್ನ ಆಫೀಸಿಗೇ ಬರೋದು ಬೇಡ ಅನ್ನಬೇಕೇ, ಇದು ಚಿಕ್ಕ ಮನುಷ್ಯರ ತರಹದ ವರ್ತನೆ ಅಲ್ಲದೆ ಮತ್ತೇನು ?

ಸುವಿಮಲ ಒಂದೇ ಗುಟುಕಿಗೆ ಪೂರ್ತಿ ಗ್ಲಾಸನ್ನೆತ್ತಿ ಕುಡಿದು ಲೋಟವನ್ನು ಚಕ್ ಅಂತ ಟೇಬಲ್ಲಿನ ಮೇಲಿಟ್ಟ. ತುಟಿ ಸ್ವಲ್ಪ ಕೊಂಕಿಸಿ ಏನೋ ಅವನು ಲೋಟವನ್ನು ಉಪಯೋಗಿಸಿಯೇ ಇಲ್ಲವೆನ್ನುವಂತೆ ನೋಡಿದ. ತಲೆಯ ಕೂದಲಿನ ನಡುವೆ ಕೈಗಳನ್ನ ಹಣಿಗೆಯಂತೆ ಉಪಯೋಗಿಸಿಕೊಂಡು, ಬಾಚಿಕೊಂಡು ಸುವಿಮಲನೆಂದ, ಇದರ ನಂತರದ ರೌಂಡನ್ನು ನೀನೇ ಕುಡಿಸಬೇಕು.

ಸುವಿಮಲನನ್ನ ನೋಡಿದರೆ ಅವನು ಖಂಡಿತವಾಗಿ ನೊಂದಿದ್ದಾನೆ ಅಂತ ಅನ್ನಿಸುತ್ತೆ. ನಿಜವಾಗಿ ಯಾವುದಕ್ಕಾಗಿ ? ಅರುಣ ಅವನನ್ನು ಅಪಮಾನ

ಮಾಡಿದನೆಂದೇ ಅಥವಾ ಸಾವಿತ್ರಿಯೊಂದಿಗೆ ಅವನ ಪರಿಚಯವಾಗಲಿಲ್ಲವೆಂದೇ ? ನಾನು ದನಿಯನ್ನು ತಗ್ಗಿಸಿ ಹೇಳಿದೆ, ಸುವಿಮಲ ನೀನು ಎಷ್ಟು ದಿನಾಂತ ಮಧ್ಯಾಹ್ನದ ಹೊತ್ತು ಸ್ನೇಹಿತರುಗಳ ಆಫೀಸು ಅಂತ ಸುತ್ತಾಡ್ತೀಯ ? ನಿನಗಿಷ್ಟವಾಗುತ್ತಾ ?

ದುಃಖಿತನಾಗಿ ಸುವಿಮಲನೆಂದ, ಏನು ಮಾಡಲಿ, ಮಧ್ಯಾಹ್ನ ಮನೇನಲ್ಲಿ ಕುಳಿತಿರೋದಕ್ಕೆ ಸ್ವಲ್ಪವೂ ಇಷ್ಟವಾಗೋದಿಲ್ಲ. ಒಂಟಿಯಾಗಿದ್ರೆ ಏನೇನೋ ಯೋಚನೆಗಳು ಬರುತ್ತೆ. ದೇಹ ಕೆಟ್ಟು ಹೋಗುತ್ತೆ.

ಆದರೆ ದಿನಾ ಸ್ನೇಹಿತರುಗಳ ಆಫೀಸಿಗೆ ಬಂದು ಹರಟೆ ಹೊಡೆಯೋಕೆ ನಿನಗೆ ಬೇಸರವಾಗೋದಿಲ್ಲವೆ ? ಯಾವುದಾದರೊಂದು ಕೆಲ್ಸಗಿಲ್ಸ ಹುಡುಕಿಕೊಳ್ಳಬಾರದೆ....

ಕೊಡೋರು ಯಾರು ?

ಅವಿನಾಶನಿಗೆ ಹೇಳು ? ಅವನಿಗೆ ಅನೇಕ .....

ಹೋಗ್ಹೋಗು. ಅವಿನಾಶ ಕೆಲ್ಸ ಕೊಡ್ತಾನೆ, ಅದರಿಂದ ನಾನು ಬದುಕಬೇಕಾ ? ಗೊತ್ತಾ ನಿನಗೆ, ಅವಿನಾಶ ನಮ್ಮ ಹಳ್ಳಿಯವನೆ. ಅವಿನಾಶನ ಅಪ್ಪ ನಮ್ಮ ಅಜ್ಜನ ಬಳಿ ದಿನಾ ಬೆಳಗಾಗೆದ್ದು ಬಂದು ಹಲ್ಲು ಕಿರೀತಿದ್ದರು.....

ಅವೆಲ್ಲ ದೊಡ್ಡಸ್ತಿಕೇನ ಬಿಡು. ಪೂರ್ವ ಬಂಗಾಲದಿಂದ ಯಾರೆಲ್ಲ ಬಂದಿದಾರೋ ಎಲ್ಲರೂ ಹಿಂದೆ ಒಬ್ಬೊಬ್ಬ ಜಮೀನ್ದಾರರಾಗಿದ್ದವರು. ಇವನ್ನೆಲ್ಲ ತುಂಬಾ ಕೇಳಿದೀನಿ. ಅವನ್ನೆಲ್ಲ ಈಗ ಮರೆತುಬಿಟ್ಟು ....

ನೀನು ನಂಬ್ತಾ ಇಲ್ಲ. ನೀವು ಎಲ್ಲಿಯವರು ?

ನಾನೂ ಈಸ್ಟ್ ಬೆಂಗಾಲದವನೇ. ಆದರೆ ನಮ್ಮ ಅಜ್ಜ ಒಂದು ಸಣ್ಣ ಪಾಠ ಶಾಲೆಯ ಪಂಡಿತರಾಗಿದ್ದರು. ನಾವು ಹೆಂಚಿನ ಮನೆಯಲ್ಲೇ ಇದ್ದೆವು, ಇಲ್ಲಿ ಕಲ್ಕತ್ತೆಯಲ್ಲಿ ಒಂದಂತಸ್ತಿನ ಮನೇನಲ್ಲಿದ್ದೀವಿ. ನಾವೇನು ಕೆಟ್ಟಿಲ್ಲ. ಇರಲಿ ಬಿಡು ಅವಿನಾಶನಿಗೆ ಹೇಳದಿದ್ದರೆ ಬೇಡ ಬೇರಿನ್ನೆಲ್ಲಾದರೂ ಕೆಲಸ ಹುಡುಕು.....

ಒಂದು ನೂರಾ ಮೂವತ್ತೇಳು ಕೆಲಸಗಳಿಗೆ ಅಪ್ಲಿಕೇಷನ್ ಹಾಕಿದೀನಿ, ಇದುವರೆಗೂ ಹದಿನೇಳು ಕಡೆಗಳಿಂದ ಇಂಟರ್‌ವ್ಯೂಗೆ ಕರೆ ಬಂದಿದೆ. ಅದರಲ್ಲಿಯೂ ಕೂಡಾ ಒಂದರಲ್ಲಿ ಮಾತ್ರ ಅಪಾಯಿಂಟ್‌ಮೆಂಟ್ ಸಿಕ್ಕಿತ್ತು. ನೂರ ಹದಿನೇಳು ರೂಪಾಯಿ ತಿಂಗಳ ಸಂಬಳ. ಆನಂತರದಿಂದ ಈ ಜಂಜಾಟದಲ್ಲಿ ಸಿಕ್ಕಿಹಾಕಿಕೊಳ್ಳೋದನ್ನ ಬಿಟ್ಟಿದ್ದೀನಿ. ಇದರ ಬದಲು ಇಂಜಿನಿಯರಿಂಗ್, ಓಂಜನಿಯರಿಂಗ್ ಓದಿದ್ದರೆ ಕೆಲಸ ಸಿಗುತ್ತಿತ್ತೋ ಏನೋ. ಸಾಹಿತ್ಯ, ದರ್ಶನ, ಇತಿಹಾಸ – ಇವೆಲ್ಲ ಈ ದೇಶಕ್ಕೆ ಅವಶ್ಯಕವಿಲ್ಲ ಈಗ.....

ಎಲ್ಲಾದರೂ ಮಾಸ್ತರಿಕೆಗೆ ಪ್ರಯತ್ನಪಟ್ಟರೆ ಸಿಗಬಹುದು ?.....

ಯಾವುದೋ ಹಳ್ಳಿಗೆ ಹೋಗಿ ? ಸಾಧ್ಯವಿಲ್ಲ. ಅದಲ್ಲದೆ ಚಿಕ್ಕ ಮಕ್ಕಳಿಗೆ ಅನ್ಯಾಯ ಮಾಡೋಕೆ ನನ್ನಿಂದ ಸಾಧ್ಯವಿಲ್ಲ. ಕೊನೆತನಕ ಬೇರೆ ಇನ್ನಾವ ಕೆಲಸವೂ ಸಿಗದಿದ್ದರೆ ಮಾಸ್ತರಿಕೇನೆ ಗತಿ. ಅದರರ್ಥ ಕ್ಲಾಸಿಗೆ ಹೋಗಿ ಕಾಲೆತ್ತಿಟ್ಟುಕೊಂಡು, 'ಡ್ಯಾಫೊಡಿಲ್ಸ್'ನ ಭಾವಾರ್ಥವನ್ನು ಬರೀರಪ್ಪ, ಎಂದು ಹೇಳಿ ಮಲಗೋದು, ನನ್ನಿಂದ ಅವೆಲ್ಲ ಆಗೋದಿಲ್ಲ. ನನ್ನಿಂದ ಮನಸ್ಸಿಟ್ಟು ಪಾಠ ಹೇಳಿಕೊಡಲು

ಸಾಧ್ಯವಿಲ್ಲ. ಸುಳ್ಳು ನಾಟಕವಾಡಲು ಸಾಧ್ಯವಿಲ್ಲ. ಹಾಗಾದ್ರೆ ?

ಮನಸ್ಸಿಟ್ಟು ಯಾಕೆ ಪಾಠ ಹೇಳಿಕೊಡೋದಕ್ಕಾಗೋದಿಲ್ಲ ?

ನನ್ನನ್ನೇ ಹಾಸ್ಯ ಮಾಡ್ತಿಯೇನೋ, ನನ್ಮಗನೇ ? ಕೊಡು, ಪುನಃ ಇನ್ನೊಂದು ರೌಂಡಿಗೆ ಆರ್ಡರ್. ನೀನು ಬಿಡಪ್ಪಾ ನಿಮ್ಮ ಭಾವನವರ ಬಲದಿಂದ ಕೆಲ್ಸ ಕೊಡಿಸ್ಕೊಂಡಿದೀಯ. ಆಫೀಸಿಗೆ ಹೋಗಿ ಬರೀ ಕಾಲಹರಣ ಮಾಡ್ತೀಯ. ಎಲ್ಲರಿಂದಲೂ ಇದು ಸಾಧ್ಯವಿಲ್ಲ. ನನ್ನಿಂದ ಮಾತ್ರ ಮಾಸ್ತರಿಕೆ ಸಾಧ್ಯವಿಲ್ಲ. ಇತರರಿಗೆ ನಾನೇನು ಕಲಿಸಬೇಕಾದ್ದಿಲ್ಲ. ನೀನಂತೂ ಒಳ್ಳೆ ಕೆಲಸ ಪಡ್ಕೊಂಡಿದೀಯ. ನೀನು ಕೆಲಸ ಯಾಕೆ ಮಾಡೋದಿಲ್ಲ ?

ನಾನು ಕೆಲಸ ಮಾಡೋದಿಲ್ವೆ ? ಆಫೀಸಿನಲ್ಲಿ ಇತರರು ಇಡೀ ದಿನ ಟೇಬಲ್ಲಿನ ಮುಂದೆ ಕುಳಿತು, ಫೈಲ್ ತಿರುಗಿಸಿ ಮಾಡಿ ಕೆಲಸ ಮಾಡ್ತಾರೆ. ಅವೆಲ್ಲ ವಾಸ್ತವವಾಗಿ ಒಂದು ಘಂಟೆ ಕೆಲಸ. ಇದರ ಮೊದಲು ನಾನು ಸರಕಾರಿ ಕಛೇರಿಯಲ್ಲಿ ಕಾರಕೂನಿ ಕೆಲಸ ಮಾಡುತ್ತಿದ್ದೆ. ಅಲ್ಲಿ ಕೂಡಾ ಏನೂ ಕೆಲಸವಿಲ್ಲ. ಏಳೆರಡಲಿ ಹದಿನಾಲ್ಕರ ಸಂಖ್ಯೆ ಕೆಳಗೆ ಬರೆದು ಕೈಯಲ್ಲಿ ಪೆನ್ಸಿಲ್ ಹಾಗೇ ಹಿಡಿದು ಕುಳಿತಿರೋದು. ಚಹ ಎತ್ತಿಕೊಂಡು ಗಮನಿಸಿ ನೋಡು, ಇಡೀ ದೇಶ ನಿಂತು ಹೋಗಿಬಿಟ್ಟಿದೆ. ವಾಸ್ತವವಾಗಿ ಈಗ ಪ್ರತಿ ದಿನ ಭಾರತ್ ಬಂದ್. ಅವರೆಲ್ಲ ಕೆಲಸ ಕಾರ್ಯದ ಬಗ್ಗೆ ಯೋಚನೆ ಮಾಡೋದಿಲ್ಲ. ಯಾವುದೇ ರೀತಿಯ ಕೆಲಸವನ್ನು ಹುಡುಕಿಕೊಳ್ಳೋದಿಲ್ಲ. ಹಣವಂತೂ ಬೇಕೇ ಬೇಕು. ಎಲ್ಲರೂ ಕೆಲಸ ಮಾಡದೆ ಹಣ ಪಡೀತಾರೆ. ನೀನೂ ಯಾಕೆ ಪಡೀಬಾರದು ಅಂತೀನಿ ?

ಸುವಿಮಲ ದೀರ್ಘ ನಿಶ್ವಾಸಬಿಟ್ಟು ಹೇಳಿದ, ಕೆಲಸ ಗಿಲಸ ಇನ್ನೇನು ಸಿಗೋದಿಲ್ಲ ಅಂದ್ಕೊಂಡಿದೀನಿ. ಕವಿತೆ ಬರೆಯೋದನ್ನ ಬಿಟ್ಟು ಈ ಸಲ ಕಾದಂಬರಿ ಗೀದಂಬರಿ ಬರೆಯುವುದಕ್ಕೆ ಪ್ರಾರಂಭಿಸಬೇಕು.

ನಾನು ನಕ್ಕು ಹೇಳಿದೆ, ಅದರಿಂದಲೇ ನಿನಗೊಂದು ದಾರಿಯಾಗುತ್ತ ? ಎಷ್ಟೋ ಜನ ಕಾದಂಬರಿ ಬರೀತಾರೆ. ನೀನೂ ಕಾದಂಬರಿ ಬರಿ. ಎರಡೇ ದಿನದಲ್ಲಿ ಲಾಟರಿ ಹೊಡೀತೀಯ. ವಿಮಲ್ ಮಿತ್ರರ ತರಹ ಬರೆಯೋಕೆ ಸಾಧ್ಯವೇ ?

ಅಷ್ಟರಲ್ಲೇ ಬಾಗಿಲ ಹತ್ತಿರ ಅವಿನಾಶನ ಉದ್ದನೆಯ ಮುಖ ಕಾಣಿಸಿಕೊಂಡಿತು. ಬೆಲೆ ಬಾಳುವ ಸೂಟು ಹಾಕಿಕೊಂಡಿದಾನೆ. ಆ ಕಡೆ ಈ ಕಡೆ ಕುತ್ತಿಗೆ ತಿರುಗಿಸಿ ನಮ್ಮನ್ನ ಹುಡುಕುತ್ತಾ ಇದ್ದಾನೆ. ನಮ್ಮನ್ನು ನೋಡಿ, ಬೇರರ್‌ಗೆ ಆರ್ಡರ್ ಕೊಟ್ಟು ಬಂದು ಟೇಬಲಿನ ಮುಂದೆ ಕುಳಿತುಕೊಂಡ. ಸುವಿಮಲ ಪ್ರಶ್ನಿಸಿದ, ಏನಯ್ಯ ಇಷ್ಟು ಹೊತ್ತು ಮಾಡಿ ಬಿಟ್ಟೆ ? ನಾನೆಂದೆ, ಅವಿನಾಶ ನಿನಗೇನಾದರೂ ಶೇಖರನ ಸುದ್ದಿ ಗೊತ್ತೆ ?

ಯಾಕೆ ಶೇಖರನಿಗೇನಾಗಿದೆ ?

ನಿನ್ನೆ ರಾತ್ರಿಯಿಂದ ಮನೆಗೆ ಹಿಂತಿರುಗಿಲ್ಲ.

ಹಾಳಾಗಿ ಹೋಗಲಿ. ಮನೆಗೆ ಹಿಂತಿರುಗಿಲ್ಲ ತಾನೇ, ಅವನಿಗೇನು ಮನೆಗಳ ಕೊರತೆಯೇ ? ಇಲ್ಲಿಂದ ಅವಸರವಾಗಿ ಬೇಗನೆ ಹೋಗಬೇಕು. ಒಂದು ಸಲ

ಬಾರೀನ್‌ದಾನ ಅಖಾಡಾಕ್ಕೂ ಹೋಗೋಣ.

ಸುವಿಮಲನೆಂದ, ನಾನು ಬಾರೀನ್‌ದಾನ ಹತ್ತಿರ ಬರೋದಿಲ್ಲ. ನನಗಿಷ್ಟವಾಗೋದಿಲ್ಲ.

ನಡಿಯೋ, ಇವತ್ತು ಸ್ವಲ್ಪ ಹೊಡೆದಾಟ ಬಡಿದಾಟವಾಗಬಹುದು.

ನಾನಂತೂ ಹೊಡೆದಾಟ ಬಡಿದಾಟವಾಡೋದಿಲ್ಲಪ್ಪಾ.

ನೀನು ನಮ್ಮೊಡನೆಯೇ ಇರುತ್ತೀಯ. ಸುನೀಲ ಇರ್ತಾನೆ. ಪರೀಕ್ಷಿತ ಬರ್ತಾನೆ. ನಿನಗ್ಯಾಕೆ ಭಯ. ಇವತ್ತು ಬಾರೀನ್‌ಗೆ ಬುದ್ಧಿ ಕಲಿಸಬೇಕು.

ನಾನೆಂದೆ, ಆದರೆ, ಶೇಖರನನ್ನ ಸ್ವಲ್ಪ ಹುಡುಕಿ ವಿಚಾರ್ಸೋದು ಅತಿ ಮುಖ್ಯ. ಅವನ ತಮ್ಮ ಬಂದಿದ್ದ ಬೆಳಗ್ಗೆ. ಅವನು ಎಲ್ಲಿಗೆ ಹೋಗಿರಲು ಸಾಧ್ಯ....

ಅವಿನಾಶ ಗದರಿ ಹೇಳಿದ, ನೀನು ಶೇಖರನನ್ನು ಎಲ್ಲೀಂತ ಹುಡುಕುತ್ತೀಯಾ ? ಅವನದ್ಯಾವುದಾದ್ರೂ ಜಾಗ ನಿಯಮಿತವಾಗಿದೆಯೇ ? ನಡಿ, ಬಾರೀನ್‌ದಾನ ಹತ್ರ ಹುಡುಕೋಣ. ಇದಾನಾಂತ ನೋಡೋಣ.

ನಾವು ಒಳ ಹೊಕ್ಕಾಗ, ಅಂಗಡಿ ಖಾಲಿಯಿತ್ತು. ಕತ್ತಲಾದ ಮೇಲೆ ಈಗ ಜನನಿಬಿಡವಾಗಿದ್ದಿತು. ಮೂಲೆಯಲ್ಲಿ ಒಬ್ಬ ದಪ್ಪನೆಯ ಯುವಕ ಕುಡಿದು ಮತ್ತನಾಗಿ ಮಗುವಿನ ದನಿಯಲ್ಲಿ ಹಾಡು ಹೇಳ್ತಾ ಇದ್ದಾನೆ. ಒಮ್ಮೊಮ್ಮೆ ಆತ ಚೀತ್ಕರಿಸಿ ಶೇರ್ ಏ ಪಂಜಾಬ್ ಎನ್ನುತ್ತಾನೆ. ಯೂ ನೋ ಹೂ ವಾಸ್ ಮೈ ಫಾದರ್ ? ಶೇರ್ ಏ ಪಂಜಾಬ್, ಹಿಂದೂಸ್ಥಾನದ ಬುಲ್ ಬುಲ್. ಮೈ ಫಾದರ್ ವಾಸ್ ಕೆ.ಎಲ್. ಸೈಗಲ್. ಸಿಂಹದ ಮರಿ ಸಿಂಹ. ಇದಾದ ನಂತರ ಅವನು ಏನೋ ಒಂದು ರೀತಿಯ ಶಬ್ದವನ್ನು ಎದೆಯಲ್ಲಿ ಮಾಡಿದ. ಆತನನ್ನ ಬಹಳ ದಿನಗಳಿಂದ ಕಂಡಿದ್ದೇನೆ. ಸ್ವಲ್ಪ ಹೊತ್ತಿನ ನಂತರ ಈ ಸಿಂಹದ ಮರಿಯನ್ನು ಒಂದು ಹಿಂಡು ತೋಳುಗಳಂತಿರುವ ಈ ಬೇರರ್‌ಗಳು ಎಳೆದುಕೊಂಡು ಹೋಗಿ ಬಾಗಿಲಿನಿಂದ ಹೊರದೂಕಿ ಬಿಡುತ್ತಾರೆ. ಒಂದು ಲೋಟ ಛಳ್ ಎಂದು ಒಡೆದ ಶಬ್ದದೊಡನೆ ಇನ್ನೊಂದು ಕಡೆಯಿಂದ ಅಟ್ಟಹಾಸದ ಹೋಹೋ ಎಂಬ ನಗು ತೇಲಿ ಬಂತು.

ಹೊರಗೆ ಮಳೆ ನಿಂತಿದೆ. ಆದರೆ ಗಾಳಿಯಲ್ಲಿನ್ನೂ ತೇವವಿದೆ. ಯಾವುದೋ ಒಂದು ದೊಡ್ಡ ಮೆರವಣಿಗೆ ಹೊರಟಿದೆ. ಟ್ರಾಮ್, ಬಸ್ ಎಲ್ಲವೂ ನಿಂತುಬಿಟ್ಟಿವೆ. ಒಂದು ಟ್ಯಾಕ್ಸಿ ಸಿಗುವುದೂ ಅಸಂಭವ. ಒದ್ದೆಯಾದ ರಸ್ತೆಯಲ್ಲಿ ಸಪ್ಪಳ ಮಾಡಿ ನಡೆಯುತ್ತ, ಮೆರವಣಿಗೆಯ ಜನರು ಏನನ್ನೋ ಕುರಿತು ತುಂಬಾ ಸಿಟ್ಟಿನಿಂದ ಘೋಷಣೆಯನ್ನು ಮಾಡುತ್ತಿದ್ದಾರೆ. ಕಿವಿಗೆ ಬಿದ್ದದ್ದನ್ನು ಕೇಳಿದೆ, ವಿಯಟ್ನಾಮ್. ಬಾಲ್ಯದಲ್ಲಿನಂತೆ ಈಗಲೂ ನನಗೆ ಮೆರವಣಿಗೆ ನೋಡೋದೂಂದ್ರೆ ತುಂಬಾ ಇಷ್ಟ. ಗಮನವಿಟ್ಟು ನೋಡ್ತೇನೆ. ಪ್ರತಿಯೊಂದು ಮೆರವಣಿಗೆಯಲ್ಲೂ ಜನರು ಒಂದೇ ತರಹ ಕಾಣಿಸ್ತಾರೆ. ಸರಿಯಾಗಿ, ಮೂರು ಜನ ಪ್ಯಾಂಟ್ ಧರಿಸಿದ ಜನರಾದ ನಂತರ, ಇಬ್ಬರು ಪಂಚೆ, ಒಬ್ಬ ಗಿಡ್ಡನೆಯ ವ್ಯಕ್ತಿ, ಲೈನ್ ಮೇಕಪ್ ಮಾಡಲು ಅರೆ ಓಡ್ತಾನೇ ಇರ್ತಾನೆ. ಇದಾದ ನಂತರ ಕೆಲವು ಸಪಾಟು ಎದೆಯ ಹುಡುಗಿಯರು, ಇಬ್ಬರು ಪಂಜಾಬಿ

ಉಡುಪು ತೊಟ್ಟವರು. ತಲೆಯಲ್ಲಿ ಎಣ್ಣೆಯಿಲ್ಲ. ಹಿಂದೆ ಪುನಃ ಮೂರು ಜನ ಪ್ಯಾಂಟ್ ತೊಟ್ಟವರು. ಇದೇ ಒಂದೇ ತೆರನಾದ ಜನರನ್ನೇ ಪ್ರತಿಯೊಂದು ಮೆರವಣಿಗೆಯಲ್ಲೂ ಕಾಣ್ತೇನೆ. ಅನಂತವಾಗಿ ಇದೇ ಎಲ್ಲಾ ಮುಖಗಳು. ವಿಯೆಟ್ನಾಮಿನ ಬದಲು ಅನ್ನಬೇಕು ಅಷ್ಟೇ. ಆಗಲೂ ಇದೇ ಮೆರವಣಿಗೆ, ಸರಿಯಾಗಿ ಮೂರು ಜನ ಪ್ಯಾಂಟಿನ ನಂತರ ಇಬ್ಬರು ಪಂಚೆ, ಒಬ್ಬ ಗಿಡ್ಡನೆಯ ವ್ಯಕ್ತಿ ಓಡುತ್ತಿರುವವನು, ಪುನಃ ಇವರುಗಳೇ ಬರುತ್ತಾರೆ. ಪೂಜಾ ಬೋನಸ್ ಅಥವಾ ಡಿ.ಎ. ಹೆಚ್ಚಿಸಲು, ನಡೆಯುವ ಆಂದೋಲನದಲ್ಲೂ ಸಹ. ಆಗಲೂ ಇವರೇ ಮೂರು ಜನ ಪ್ಯಾಂಟ್, ನಂತರ ಇಬ್ಬರು ಪಂಚೆ, ಒಬ್ಬ ಗಿಡ್ಡನೆಯ ವ್ಯಕ್ತಿ ಓಡುತ್ತಿರುವವನು. ಕಾಶ್ಮೀರ ಕೊಡೋದಿಲ್ಲ, ಇವರೇ. ಡಿ.ಪಿ.ಆರ್.ನ ಕಡಿಮೆ ಮಾಡಿ, ಆಗಲೂ ಇವರೇ. ನಾನು ಬಹಳ ಗಮನವಿಟ್ಟು ನೋಡಿದ್ದೇನೆ. ಮೆರವಣಿಗೆಯ ಜನರು ತುಂಬಾ ಸುಖಿಗಳು ಅಂತ ನನಗನ್ನಿಸುತ್ತೆ. ಕಾರಣ ಇವರಿಗೆ ಬೇಡಿಕೆಗಳಿವೆ. ಅವರಿಗೆ ನಿಶ್ಚಯವಾದ ಆಸೆ ಇದೆ. ಆದ್ದರಿಂದ ಹತ್ತು ಬೇಡಿಕೆಗಳ ನಡುವೆ, ಜೀವನದಲ್ಲಿ ಒಂದಲ್ಲ ಒಂದು ಸಿಕ್ಕೇ ಸಿಗುತ್ತೆ. ನನಗೇನು ಬೇಡಿಕೆಗಳಿಲ್ಲ. ಅದಕ್ಕೆ ನನಗೆ ಹತ್ತಿರ ನಿಂತು ಮೆರವಣಿಗೆ ನೋಡಲು ಸಾಧ್ಯ.

ಸುವಿಮಲನೆಂದ, ಇರು, ನಾನು ನಿತ್ಯದ ಗುಡ್–ಟರ್ನ್ ಮುಗಿಸಿ ಬರುತ್ತೇನೆ.

ಅವಿನಾಶನೆಂದ, ಅದೇನೋ ಪುನಃ ?

ನಾನು ನಿಶ್ಚಯಿಸಿಕೊಂಡಿದ್ದೇನೆ. ಇಡೀ ದಿನದಲ್ಲಿ ಒಂದಲ್ಲ ಒಂದು ಒಳ್ಳೆ ಕೆಲಸ ಮಾಡ್ತೀನಿ ಅಂತ, ಅದರಿಂದ ಮನಸ್ಸು ಬಹಳಷ್ಟು ಶುದ್ಧವಾಗಿರುತ್ತೆ.

ಸುವಿಮಲ ಒಬ್ಬ ಮಧ್ಯವಯಸ್ಕನ ಹತ್ತಿರ ಹೋಗಿ ಹೇಳಿದ, ನಡೀರಿ. ವ್ಯಕ್ತಿ ತಿರುಗಿ ನಿಂತುಕೊಳ್ಳುತ್ತಲೇ ನೋಡಿದ್ರೆ ಆತ ಕುರುಡ. ಕೈಯಲ್ಲಿ ಒಂದು ಸಾಧಾರಣವಾದ ಕೋಲು. ವ್ಯಕ್ತಿ ಅಸ್ವಸ್ಥನಾಗಿ ಕೋಲನ್ನ ನೆಲಕ್ಕೆ ಕುಟ್ಟುತ್ತಲಿದ್ದ. ಸುವಿಮಲನೆಂದ, ನೀವು ರಸ್ತೆ ದಾಟಬೇಕೆ ? ನಡೀರಿ, ಈ ಮೆರವಣಿಗೆ ತುಂಬಾ ದೊಡ್ಡದು, ಅದು ಮುಗಿಯಲು ಇನ್ನೂ ತುಂಬಾ ಸಮಯ ಬೇಕು. ನಿಮ್ಮನ್ನ ನಾನು ರಸ್ತೆ ದಾಟಿಸುತ್ತೇನೆ.

ವ್ಯಕ್ತಿ ಎಂದ, ಹೌದು. ಇನ್ನೂ ಹೊತ್ತಾದರೆ ನಾನು ಟ್ರೈನ್ ಹಿಡಿಯೋಕಾಗೋದಿಲ್ಲ.

ಕುರುಡರು ಕೂಡಾ ಒಬ್ಬರೇ ಟ್ರೈನ್ ಹತ್ತುತ್ತಾರೆ. ಅನ್ನೋದು ಮೊದಲು ನನಗೆ ಗೊತ್ತಿರಲಿಲ್ಲ. ಸುವಿಮಲ ವ್ಯಕ್ತಿಯ ಕೈ ಹಿಡಿದು ರಸ್ತೆಗಿಳಿದ. ದೊಡ್ಡ ಮೆರವಣಿಗೆ, ಅಸಂಖ್ಯಾತ ದನಿಯಲ್ಲಿ ಸಿಟ್ಟಿನ ಚೀತ್ಕಾರ, ಅದರ ನಡುವಿನಿಂದ ಒಬ್ಬ ಕುರುಡ ದಾಟಿಕೊಂಡು ಹೋದ.

ನಾವು ಮೂರು ಜನ ಚೌರಂಗಿಯಿಂದ ನಡೆಯಲು ಪ್ರಾರಂಭಿಸಿದೆವು. ಕೆಲವು ಕ್ಷಣದ ಮೌನದ ನಂತರ ಸುವಿಮಲ ಅವಿನಾಶನನ್ನು ಪ್ರಶ್ನಿಸಿದ, ಬಾರೀನ್‌ದಾನ ಜೊತೆ ನಿನ್ನ ಜಗಳವೇಕಾಯ್ತು ?

ಅವಿನಾಶ ಉತ್ತೇಜಿತನಾಗಿ ಹೇಳಿದ, ಅವನೊಬ್ಬ ದೊಡ್ಡ ಸೈತಾನ, ಸ್ಮಶಾನದ

ಹತ್ತಿರ ವ್ಯವಸಾಯ ಮಾಡ್ತಾನೆ. ಅರ್ಥವಾಯ್ತುಲ್ಲ? ನಿನ್ನೆ ಆಟ ಆಡೋವಾಗ.....

ನಾನು ಅನ್ಯಮನಸ್ಕನಾಗಿ ಹೋದೆ, ಅವರ ಮಾತಿನ ಕಡೆ ನನ್ನ ಲಕ್ಷ್ಯವಿರಲಿಲ್ಲ. ದೇಹದಲ್ಲಿ ಚಡಪಡಿಕೆ ಪ್ರಾರಂಭವಾಗಿತ್ತು. ಸರಿಯಾಗಿ ಮತ್ತು ಏರಿರಲಿಲ್ಲ. ತಲೆಯೆಲ್ಲ ಜುಂ ಜುಂ. ಕಾಲಿನ ಶಬ್ದ ತುಂಬಾ ಭಾರಿ. ನಾಲಿಗೆ ಒಣಗಿತ್ತು. ಇನ್ನು ನಿಂತು ಕೊಳ್ಳೋದಕ್ಕಾಗೋದಿಲ್ಲ. ಆದ್ದರಿಂದ ಸಂಜೆಯ ವೇಳೆ ಬೇರೆ ತರಹ ಸಮಯ ಕಳೀಬೇಕೆಂದು ಆಸೆಯಾಗಿತ್ತು. ಈ ಮೊದಲೇ ಒಂದು ಸಲ ಆಸ್ಪತ್ರೆಗೆ ಹೋಗಬೇಕು ಅಂತ ಅಂದುಕೊಂಡಿದ್ದೆ. ದಾದಾಮೊಶಾಯ್ ಇನ್ನು ಬದುಕೋದಿಲ್ಲ. ಎಂಟು ವರ್ಷದಿಂದ ಅವರನ್ನ ನೋಡಿಲ್ಲ. ದಾದಾಮೊಶಾಯ್ ನೆನಪಾದಾಗಲೆಲ್ಲ, ಕಣ್ಣ ಮುಂದೆ ಎಪ್ಪತ್ತೊಂದು ವರ್ಷದ ದೀರ್ಘ ರೋಗಿಷ್ಠ ಶರೀರ, ಎದೆ ತುಂಬಾ ಬಿಳಿ ಕೂದಲು ಇರುವ ವ್ಯಕ್ತಿಯ ಚಿತ್ರ ತೇಲಿಬರುತ್ತೆ. ದಾದಾಮೊಶಾಯ್ ಮೈ ಬಣ್ಣ ಕಪ್ಪು. ತಲೆ ಕೂದಲು ಈಗಲೂ ತುಂಬಾ ಕಪ್ಪಗಿದೆ. ಆದರೆ ಎದೆಯ ಮೇಲಿನ ಕೂದಲೆಲ್ಲ ಬಿಳಿ. ದಾದಾಮೊಶಾಯ್‌ರನ್ನು ಹೋಲಿಸಿದರೆ ನನಗಿನ್ನೂ ಕಿಶೋರಾವಸ್ಥೆ. ಅವರ ಬಳಿ ಬಹರಂಪುರದಲ್ಲಿ ಇರುತ್ತಿದ್ದಾಗ ಅವರೆನ್ನುತ್ತಿದ್ದರು, ಸಂಸ್ಕೃತ ಹಾಗೂ ಗಣಿತ – ಇವೆರಡನ್ನು ಮನಸ್ಸಿಟ್ಟು ಕಲಿ, ಅರ್ಥವಾಯ್ತಾ. ಇವೆರಡನ್ನ ಕಲಿತರೆ ಬದುಕೋದಕ್ಕೆ ಯಾವೊಂದು ಅಡ್ಡಿಯೂ ಇರೋದಿಲ್ಲ. ಪ್ರಪಂಚದಲ್ಲಿ ಭಯದ ಲವಲೇಶವೂ ಇರೋದಿಲ್ಲ. ಯಾವುದೂ ಅಜ್ಞಾತವಾಗಿರೋದಿಲ್ಲ, ಅಷ್ಟೇ ಅಲ್ಲ ಅಂಥವನು ಜ್ಞಾನದ ಸೀಮೆಯಿಂದ ಹೊರಗುಳಿಯೋದಿಲ್ಲ. ಜ್ಞಾನದ ಪ್ರಭೆಯ ವಲಯದೊಳಗೆ ಪ್ರವೇಶಿಸಬಲ್ಲ. ಅರ್ಥವಾಯ್ತಾ? – ನನ್ನಿಂದ ಅವೆರಡನ್ನು ಕಲಿಯಲಾಗಲಿಲ್ಲ. ಸಂಸ್ಕೃತ ಹಾಗೂ ಗಣಿತ ನನ್ನಿಂದ ಕಲಿಯಲಾಗಲಿಲ್ಲ. ಅದಕ್ಕೆ ನೋಡು ಈ ನನ್ನ ಅವಸ್ಥೆ?

ದಾದಾಮೊಶಾಯ್ ಬದುಕುವುದಿಲ್ಲ. ಕಳೆದ ಎಂಟು ವರ್ಷಗಳಿಂದ ಅವರನ್ನು ನಾನು ನೋಡಲಾಗಿಲ್ಲ. ನನ್ನ ಕಿಶೋರಾವಸ್ಥೆಯಲ್ಲಿ ಅವರೇ ನನಗೆ ಆದರ್ಶ. ಹಾಗಾಗಿ ಅವರನ್ನೊಮ್ಮೆ ನೋಡಲೇಬೇಕಿದೆ. ಇನ್ನು ಕಾಣ್ತೇನೋ ಇಲ್ವೋ. ಜೀವನದಲ್ಲಿ ಸ್ಮೃತಿಗೆ ಮಹತ್ವವಿದೆ. ಅವರನ್ನೀಗ ಕಾಣಲಾಗದಿದ್ದರೆ ನನ್ನ ಸ್ಮೃತಿ ಅಪೂರ್ಣ. ಆದರೆ ಈ ದಿನ ನಾನು ಹೋಗಲಾಗಿಲ್ಲ. ಅವರು ಬದುಕುವ ಸ್ಥಿತಿಯಲ್ಲಿಲ್ಲ ಎಂದು ನಿನ್ನೆ ಅಕ್ಕ ಹೇಳಿದ್ದಳು. ದಾದಾಮೊಶಾಯ್‌ಗೆ ಔಷಧಿ ತಿನ್ನುವ ಗೀಳು ಇತ್ತು. ಅನೇಕ ವೈದ್ಯಕೀಯ ಪತ್ರಿಕೆಗಳನ್ನು ಓದುತ್ತಿದ್ದರು. ತಾವೂ ಬಳಸುತ್ತಿದ್ದರಲ್ಲದೆ ಸಣ್ಣಪುಟ್ಟ ಖಾಯಿಲೆಗಳಿಗೆ ಬೇರೆಯವರಿಗೂ ಔಷಧಿ ಕೊಡುತ್ತಿದ್ದರು. ಹೃದಯಾಘಾತವಾದ ನಂತರ 'ಕೋಮಾ' ಸ್ಥಿತಿಯಲ್ಲಿದ್ದ ಅವರು ಕಳೆದ ಮೂರು–ನಾಲ್ಕು ದಿನಗಳಿಂದ ಪ್ರಜ್ಞಾಸ್ಥಿತಿಯಲ್ಲಿದ್ದಾರೆ. ತಡವಾದರೆ ನರ್ಸ್‌ಗೆ ಎಚ್ಚರಿಸಿ ಔಷಧಿ ಪಡೆಯುತ್ತಾರೆ. ಒಬ್ಬನನ್ನು ಉಳಿಸಲು ಸಮಯ ಎಷ್ಟು ಮಹತ್ವ ಎಂಬ ಬಗ್ಗೆ ಹೇಳುತ್ತಿರುತ್ತಾರೆ.

ಅಕ್ಕ ಇದನ್ನೂ ಹೇಳಿದ್ದಳು – ನಿನ್ನೆ ಆಕೆ ಆಸ್ಪತ್ರೆಗೆ ಹೋದಾಗ ದಾದಾಮೊಶಾಯ್ ನಿದ್ದೆ ಮಾಡುತ್ತಿದ್ದರು. ಚೇತರಿಸಿಕೊಂಡಂತೆ ಕಂಡುಬಂದರೂ ಔಷಧಿ ಕೊಡಲು ನರ್ಸ್ ಎಬ್ಬಿಸಿದಾಗ ಆಕೆಗೆ ಕೈ ಜೋಡಿಸಿ, ಇನ್ನು ಔಷಧಿ ಸಾಕು. ನನ್ನನ್ನು ಮನೆಗೆ

ಕಳಿಸಿರಿ ಎಂದಿದ್ದರು.

ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಗಿತ್ತು. ಅವರ ಗಂಟಲಲ್ಲಿ ಬೇರಾರೋ ಮಾತಾಡಿದಂತೆ ಅನ್ನಿಸುತ್ತಿತ್ತು. ಅವರು ಮಕ್ಕಳಂತೆ, ಮನೆಗೆ ಕರೆದುಕೊಂಡು ಹೋಗಲು ಹಟಮಾಡಿದ್ದರು.

ಮನೆ ಎಂದರೆ ಸಾವೆ ?..... ನಡೆದು ನಾವು ಪಿ.ಜಿ. ಆಸ್ಪತ್ರೆ ತಲುಪಿದ್ದರೂ ಒಳಗೆ ಹೋಗಲಾಗಲಿಲ್ಲ. ಗಂಟಲು ಒಣಗಿತ್ತು. ಮನಸ್ಸಲ್ಲಿ ಗೊಂದಲ. ಕಾಲು ಭಾರವಾಗಿದ್ದವು. ದಾದಾಮೊಶಾಯ್ ಇನ್ನೊಂದು ದಿನ ಬದುಕಿ, ನಿಮ್ಮನ್ನು ನೋಡಲೇಬೇಕಿದೆ. ನಾನು ನಾಳೆ ಬರುವೆ.

ನಾನು ಅವಿನಾಶನಿಗೆಂದೆ, ನಡಿ ಟ್ಯಾಕ್ಸಿ ಹಿಡಿಯೋಣ. ಇನ್ನು ನನ್ನಿಂದ ನಡೆಯೋದಕ್ಕೆ ಆಗೋದಿಲ್ಲ. ಅವರಿಬ್ಬರೂ ಮಾತುಕತೆಯಲ್ಲಿ ಮಗ್ನರಾಗಿದ್ದರು. ಸುವಿಮಲನೆಂದ. ತುಂಬಾ ಹೊತ್ತೇನಾಗಿಲ್ಲ. ನಡಿ ಕಾಲೀಘಾಟ್‌ನ ತನಕ ನಡೆಯುತ್ತಲೇ ಹೋಗೋಣ.

ಆಕಾಶದ ಕಡೆ ನೋಡಿದರೇನೇ ಅನ್ನಿಸ್ತಿತ್ತು ಏಳೂವರೆಗಿಂತ ಹೆಚ್ಚಾಗಿಲ್ಲ ಸಮಯ ಅಂತ. ಒದ್ದೆಯಾಗಿದ್ದ ಬಟ್ಟೆಬರೆ ಮೈಮೇಲೆ ಒಣಗಿ, ಗರಿಗರಿಯಾಗಿತ್ತು. ಸಿಗರೇಟ್ ಮುಗಿದು ಹೋಗಿತ್ತು. ಬೀಡದಂಗಡಿ ಎದುರು ನಿಂತು ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಂಡೆ. ನನ್ನ ಕಣ್ಣು ಸ್ವಲ್ಪದರಲ್ಲೇ ಕೆಂಪಾಗಿ ಬಿಟ್ಟಿದ್ದವು.

ಭವಾನಿಪುರದ ಹತ್ತಿರ ರಸ್ತೆ ದಾಟಲೆಂದು ನಿಂತಿದ್ದೆವು. ರಸ್ತೆಯ ಆ ಬದಿಯಲ್ಲಿ ನಾಲ್ಕೈದು ಚಿಕ್ಕ ವಯಸ್ಸಿನ ಹುಡುಗಿಯರು ನಿಂತು ಹರಟೆ ಹೊಡೆಯುತ್ತಿದ್ದರು. ಆ ಕಡೆಯೇ ದೃಷ್ಟಿ ಹೊರಳಿತು. ಮೊದಲೇ ಯಾಂತ್ರಿಕವಾಗೊಮ್ಮೆ ನೋಡಿದ್ದೆ. ಹುಡುಗಿಯರ ಕಡೆ ಒಂದು ಸಲ ನೋಡೋದು ವಾಡಿಕೆ. ಈ ಬದಿಯ ಇಬ್ಬರು ಜಡೆ ಅಲ್ಲಾಡಿಸಿಕೊಂಡು ನಿಂತಿರುವ ಹುಡುಗಿಯರ ಕಡೆ ನೋಡಿದ್ದೆ. ಒಂದು ಕ್ಷಣ ಪುನಃ ಅವರ ಕಡೆಯೇ ದೃಷ್ಟಿ ಹೊರಳಿಸಿದೆ. ಅವರನ್ನು ನೋಡುತ್ತಿದ್ದರೆ ಏನೋ ಒಂದು ಬೇರೆಯೇ ರೀತಿಯೇ ಅನ್ನಿಸುತ್ತಿತ್ತು. ಏನೋ ಒಂದು ರೀತಿಯಲ್ಲಿ ಪರಿಚಯವಿರುವಂತಿತ್ತು. ಪುನಃ ದೃಷ್ಟಿ ಹೊರಳಿಸಿದೆ, ಚಲಿಸುವ ಬಸ್ಸಿನ ಕಿಟಕಿಯ ಹತ್ತಿರ ಹಳದಿ ಸೀರೆ ಉಟ್ಟ ಒಬ್ಬ ದಪ್ಪನೆಯ ಹೆಂಗಸನ್ನು ನೋಡುತ್ತಿರುವಂತೆಯೇ, ಪುನಃ ಹತ್ತಿರದಿಂದ ಪಂಜಾಬಿ ಉಡುಪು ಧರಿಸಿದ ಕುವರಿಯರು ಹಾದುಹೋದರು. ಅವರ ಶರೀರದ ರೇಖೆಗಳನ್ನು ಚೆನ್ನಾಗಿಯೇ ನೋಡಲು ಸಾಧ್ಯವಾಯಿತು. ಆನಂತರ ಪುನಃ ಆ ಗುಂಪಿನ ಕಡೆ ದೃಷ್ಟಿ ಹರಿಸಿದೆ. ಐವರು ಚಿಕ್ಕ ಹುಡುಗಿಯರು ಹದಿನೈದು ಹದಿನೇಳು ವಯಸ್ಸಿನವರು. ಕೈಕಾಲು ಕುಣಿಸುತ್ತ ಕಲಕಲ ಮಾತುಕತೆಯಾಡುತ್ತಿದ್ದಾರೆ. ನಾನು ಅವರುಗಳ ಮುಖದ ಮೇಲೆ ದೃಷ್ಟಿಹರಿಸತೊಡಗಿದೆ. ಏನೋ ನನಗೊಂದು ರೀತಿ ನೆನಪಾದಂತಿತ್ತು. ಗಡಿಯಾರದ ಅಲಾರಾಮಿನ ತರಹ ಒಂದು ಗಂಟೆಯ ಸದ್ದು ಕೇಳಿ ಬಂತು.

ಅವರ ನಡುವೆ ಒಬ್ಬ ಕೆಂಪು ಸೀರೆ ಉಟ್ಟ ಹುಡುಗಿಯ ಕಡೆ ಒಂದೆರಡು ಸಲ ನೋಡಿ ನನ್ನ ಕಣ್ಣುಗಳು ಅಲ್ಲೇ ನೆಟ್ಟು ಹೋದವು. ತಕ್ಷಣ ಮನಸ್ಸಿಗೆ ನೆನಪಾಯಿತು.

ಅದೇ ದೃಶ್ಯ. ನಾನು ಅವಳನ್ನು ಎರಡು ವರ್ಷಗಳ ಹಿಂದೆ ನೋಡಿದ್ದೆ. ಒಂದು ಮದುವೆ ಮನೆಯಲ್ಲಿ ಬಹಳ ದೀಪಗಳು ಹಾಗೂ ಜನರ ನಡುವೆ, ಈ ಹುಡುಗಿಯನ್ನು ನೋಡಿದ್ದು ನೆನಪಾಯಿತು. ಅವಳ ಹೆಸರು ಜಮುನಾ. ಅವಳನ್ನು ನೋಡಿದ್ದೇನೆ. ಆ ನೋಟ ನನ್ನೆದೆಯಲ್ಲಿ ಹಾಗೆ ಉಳಿದಿದೆ. ಮದುವೆಯ ದಿನ ಜನರ ಸದ್ದುಗದ್ದಲ, ವಾಲಗದವರ ಸದ್ದು ಹಾಗೂ ಗಡಿಬಿಡಿಯ ಸದ್ದು, ತಮಗೊಪ್ಪದ ಅಸಹ್ಯ ಉಡುಪುಗಳನ್ನು ಹಾಕಿಕೊಂಡ ಅಸಂಖ್ಯಾತ ಕುರೂಪಿ ಹೆಂಗಸರು. ಅವರುಗಳ ನಡುವೆ ನಾನು ಜಮುನಾಳನ್ನು ನೋಡಿದ್ದೆ. ಈಗಲೂ ಅದೇ ಚಿತ್ರವನ್ನು ಕಾಣುತ್ತಲಿದ್ದೇನೆ. ಅಗಲವಾದ ಮೆಟ್ಟಿಲುಗಳ ತುದಿಯಲ್ಲಿ ಈ ಹುಡುಗಿ ನಿಂತುಕೊಂಡಿದ್ದಳು, ಒಂದು ಸಾಧಾರಣವಾದ ಫ್ರಾಕ್ ಹಾಕಿಕೊಂಡು. ಹಗುರವಾದ ಶರೀರ, ಆರೋಗ್ಯ ಸೂಸುವ ದೇಹ, ನಾನು ಕೆಳಗಿನಿಂದ ನೋಡಿದ್ದೆ. ಹುಡುಗಿ ಕತ್ತು ಬಗ್ಗಿಸಿ ಕೆಳಗೆ ನಿಂತಿದ್ದವರನ್ನು ನೋಡುತ್ತಿದ್ದಳು. ಅವಳ ಕಣ್ಣುಗಳಲ್ಲಿ ಆಶ್ಚರ್ಯ ತುಂಬಿತ್ತು. ಈ ವಯಸ್ಸಿಗೆ ಹಂಸದ ತರಹದ ಶರೀರ, ಮುಖದ ಲಕ್ಷಣ ಸಾಕ್ಷಾತ್ ಲಕ್ಷ್ಮೀಯಂತೆ, ಬಿಳಿ ಸಾಧಾರಣವಾದ ಫ್ರಾಕ್, ಅವಳ ಕಣ್ಣುಗಳಲ್ಲಿನ ವಿಸ್ಮಯ – ಎಲ್ಲಾ ಸೇರಿ ಸರಳತೆಯೇ ಮೂರ್ತಿವೆತ್ತಂತಿದೆ ಎಂದು ನನ್ನ ಮನಸ್ಸಿಗೆನಿಸಿತ್ತು. ಅವಳಲ್ಲಿ ಜಗತ್ತಿನ ಸರ್ವ ಸೌಂದರ್ಯವೂ ಅಡಕವಾದಂತೆ ಮತ್ತು ತನ್ನ ಸ್ವಂತ ಶರೀರವನ್ನ ಹೊಳೆಯುವಂತೆ ಮಾಡಿ ಇಡೀ ಭೂಮಿಯನ್ನೇ ಪ್ರಕಾಶಮಾನವನ್ನಾಗಿ ಮಾಡಿದಂತಿದೆ. ಸುಂದರ ಸ್ತ್ರೀಯರನ್ನು ನಾನೇನು ಕಡಿಮೆ ಕಂಡಿಲ್ಲ. ಹತ್ತಿರದಿಂದ, ದೂರದಿಂದ, ಕೆಲವೊಮ್ಮೆ ಶೃಂಗಾರ ಮಾಡಿಕೊಂಡಿದ್ದಾಗ, ಮತ್ತೊಮ್ಮೆ ನಿರಾಡಂಬರವಾಗಿದ್ದಾಗ, ಅಷ್ಟೇ ಏನು ಆ ಮದುವೆ ಮನೆಯಲ್ಲಿಯೂ ಕೂಡಾ ಯಾರನ್ನು ಸ್ತ್ರೀಯರು ಅಂತ ಕರೆಯಬಹುದೋ, ಸರ್ವ ಅಸ್ತಿತ್ವದ ನಡುವೆಯು ಅವರ ಶರೀರ ಒಂದೇ ಪ್ರಕಾರವಾಗಿತ್ತು. ಅಂಥವರನ್ನು ಕಂಡಿದ್ದೆ, ಮಾತುಕತೆ ಕೂಡಾ ಆಡಿದ್ದೆ. ಆದರೆ ಆ ಕ್ಷಣದಲ್ಲಿ ಸರಳತೆಗಾಗಿ ಕಂಗಾಲಾಗಿಬಿಟ್ಟಿದ್ದೆ. ಅವಳನ್ನು ಕೈಮುಟ್ಟಿ ನೋಡಬೇಕು, ಅವಳನ್ನು ಮುಟ್ಟಿದರೆ ಕೈಗೆ ಬಣ್ಣ ಹತ್ತುತ್ತೋ ಇಲ್ಲವೋ ಅನ್ನೋದನ್ನ, ನೋಡಬೇಕು ಅಂತ ಆಸೆಯಾಯಿತು. ಸರಳ ವಿಸ್ಮಯ ಜೀವನದ ಪವಿತ್ರ ಬಣ್ಣ ಅವಳದು.

ಅವಳೇನು ಅಂಥಾ ಸುಂದರಿ ಏನಲ್ಲ. ಅಥವಾ ಈ ವಯಸ್ಸಿನಲ್ಲಿ ಎಲ್ಲ ಹುಡುಗಿಯರೂ ಸುಂದರವಾಗಿಯೇ ಕಾಣುತ್ತಾರೆ. ಅಲ್ಲದೆ ಇನ್ನೇನು ವಿಶೇಷವಲ್ಲ. ಅವಳ ಬಣ್ಣ ಅಂಥಾ ತಿಳಿಯಾಗೇನಿಲ್ಲ. ಒಂದು ಬಟ್ಟೆ ಸುತ್ತಿದ, ಟೇಬಲ್ ಲ್ಯಾಂಪಿಗೆ, ನೀಲಿ ಪರದೆ ಇದ್ದರೆ ಮೇಲಿನಿಂದ ಅದರ ಬೆಳಕು ಯಾವ ರೀತಿ ಕಾಣುತ್ತೋ ಬಹುಶಃ ಅದೇ ರೀತಿ. ನಾನು ಅಂದು ತುಂಬಾ ಹೊತ್ತು ಅವಳ ಕಡೆ ನೋಡುತ್ತಲೇ ಇದ್ದೆ, ಅವಳನ್ನ ಹಿಂದೆಯೂ ನೋಡಿದ್ದೆ. ಆದರೆ ಆ ದಿನದ ಆಶ್ಚರ್ಯದ ಮುಖ ಮಾತ್ರ ಮನದಲ್ಲೇ ಇಟ್ಟುಕೊಂಡು ಪೂಜೆ ಮಾಡುವ ತರಹ. ನಾನು ಅವಳಿಗೆ ಹೇಳಿದ್ದೆ, ಪುಟ್ಟೀ, ನೀನೊಂದು ಹೂವು ತೆಗೆದುಕೊಳ್ತೀಯಾ ? ಅವಳೆಂದಿದ್ದಳು. ನನ್ನ ಹೆಸರು ಪುಟ್ಟಿ ಅಲ್ಲ, ನನ್ನ ಹೆಸರು ಜಮುನಾ. ನನ್ನ ಗುರುತು ಸಿಗಲಿಲ್ಲವೇ ? ನಾನು

ವರುಣನ ತಂಗಿ.

ನೆಟ್ಟ ದೃಷ್ಟಿಯಿಂದ ದಿಟ್ಟಿಸಿದೆ. ಕೆಂಪು ಸೀರೆ ಉಟ್ಟಿದ್ದಾಳೆ, ಆದರೂ ಜಮುನಾಳ ಮುಖ ಈಗಲೂ ಸರಳ ಹಾಗೂ ಪವಿತ್ರ. ಹೊಳೆಯ ನೀರಿನ ತರಹ, ಶರೀರ ಥಳ ಥಳ. ನಾನು, ಸುವಿಮಲ ಹಾಗೂ ಅವಿನಾಶರಿಗೆಂದೆ, ನೀವಿಬ್ಬರೂ ಮುಂದೆ ನಡೀರಿ. ನಾನು ಆಮೇಲೆ ಬರ್ತೀನಿ.

ಅವಿನಾಶನೆಂದ, ಯಾಕೆ ?

ನನಗೆ ದೊಡ್ಡಕ್ಕನಿಗಾಗಿ ಸ್ವಲ್ಪ ಔಷಧ ಕೊಂಡುಕೊಳ್ಳೋದಿದೆ. ಮರೆತೇಬಿಟ್ಟಿದ್ದೆ. ಈಗ ಕೊಂಡುಕೊಳ್ಳದಿದ್ದರೆ ಆಮೇಲೆ ಆಗೋದಿಲ್ಲ.

ತೊಗೊಂಡು ಬಾ. ನಾವು ಇಲ್ಲೇ ನಿಂತಿರ್ತೀವೆ.

ಇಲ್ಲ ಅದೊಂದು ಮಿಕ್ಸ್‌ಚರ್ ತಯಾರಿಸಲು ಸ್ವಲ್ಪ ಹೊತ್ತು ಹಿಡಿಯುತ್ತೆ. ನೀವು ಹೋಗ್ತಿರಿ, ನಾನು ಬರ್ತೀನಿ.

ಸುವಿಮಲನೆಂದ, ನಡಿ ಅವನು ಆಮೇಲೆ ಬರ್ತಾನೆ. ಅವಿನಾಶ ನನ್ನ ಹತ್ತಿರ ಸರಿದು ಬಂದು ಹೇಳಿದ, ಸರಿಯಾಗಿ ಬರ್ತೀಯಾ ತಾನೆ ? ತಪ್ಪಿಸ್ಕೊಂಡು ಹೋಗೋಕೆ ನೋಡ್ತಾ ಇಲ್ಲ ತಾನೆ ?

ನಾನೆಂದೆ, ತಪ್ಪಿಸ್ಕೊಳ್ಳೋದ್ಯಾಕೆ ? ನೀವು ಹೋಗಿರಿ. ನಾನು ಹದಿನೈದು ಇಪ್ಪತ್ತು ನಿಮಿಷಗಳಲ್ಲೇ ಬಾರೀನ್‌ದಾನ ಮನೆಗೆ ಬರ್ತೀನಿ. ಇಷ್ಟು ಹೇಳಿ ನಾನು ಎದುರಿನ ಔಷಧದ ಅಂಗಡಿಯ ಒಳ ನುಗ್ಗಿದೆ. ಒಳ ಹೊಕ್ಕು, ನೇರವಾಗಿ ಕೌಂಟರಿನ ಹತ್ತಿರ ಹೋಗಿ ನಿಂತುಕೊಂಡೆ. ಸ್ವಲ್ಪ ಹೊತ್ತಿನ ಮೇಲೆ ಒಬ್ಬಾತ ಮುಖವೆತ್ತಿ ಕೇಳಿದ, ಏನು ಬೇಕು ? ನಾನೆಂದೆ, ದಯವಿಟ್ಟು ಸ್ವಲ್ಪ ಟೆಲಿಫೋನ್ ಮಾಡಲು ಅವಕಾಶ ಮಾಡಿಕೊಡ್ತೀರಾ ?

ಟೆಲಿಫೋನ್ ಎತ್ತಿದಾಗ ನನ್ನ ಕೈ ಕಂಪಿಸುತ್ತಿರುವುದು ಗಮನಕ್ಕೆ ಬಂತು – ಯಾರಿಗ್ಗೊತ್ತು ? ಬೇಕೆಂದೇ ನಾನು ಐದು ಸಲ ಡಯಲ್ ತಿರುಗಿಸಿದೆ. ಬರೀ ಎಂಗೇಜ್ಡ್ ಸೌಂಡ್ ಕೇಳಿಸಿತು. ಹತಾಶನಾದಂತೆ ಮಾಡಿ, ರಿಸೀವರ್‌ವನ್ನಿಟ್ಟು ಹೊರ ಬಂದು ನೇರವಾಗಿ ಡಾಕ್ಟರ್ ಷಾಪಿನ ತನಕ ಬಂದೆ. ಮೆಲ್ಲನೆ ಬಗ್ಗಿ ನೋಡಿದೆ, ಅವಿನಾಶ ಹಾಗೂ ಸುವಿಮಲ ನಿಜವಾಗಿಯೂ ಹೊರಟು ಹೋಗಿದ್ದರು.

ಆದರೆ ರಸ್ತೆಯು ಈ ಬದಿಯೂ ಖಾಲಿಯಾಗಿತ್ತು. ಆ ಐವರು ಹುಡುಗಿಯರಲ್ಲಿ ಯಾರೊಬ್ಬರೂ ಇಲ್ಲ. ಅಯ್ಯೊ, ಎಲ್ಲಿ ಹೋದರು ಅವರೆಲ್ಲ ? ಗಾಳಿಯಲ್ಲಿ ಕರಗಿಬಿಟ್ಟರೋ ಹೇಗೆ ? ಇಲ್ಲೆ ನಿಂತುಕೊಂಡು ಹರಟೆ ಹೊಡೆಯುತ್ತಿದ್ದರು. ಎರಡು ನಿಮಿಷಗಳಲ್ಲಿ ಎಲ್ಲರೂ ಹೊರಟು ಹೋದರೆಂದರೆ ಬರೀ ಕಲ್ಪನೆಯೋ ? ಒಂದು ವೇಳೆ ಅವರ್ಯಾರೂ ಇರಲಿಲ್ಲವೇ ? ಇಲ್ಲ, ನಾನೇ ಕಲ್ಪಿಸಿಕೊಂಡಿದ್ದೆನೋ ಏನೋ, ಜಮುನಾಳು ನನಗೆ ಕಾಣಿಸಲಿಲ್ಲ. ?

ಕ್ಷಣದ ನಂತರ ಥಟ್ಟನೆ ನನ್ನಲ್ಲಿ ಸಿಟ್ಟು ಕೆರಳಿತು. ತಲೆಯು ಜುಂ ಎಂದಿತು. ನಾನು ಗಡುಸಿನ ಮುಖದಿಂದ, ಸುಟ್ಟು ಬಿಡುವಂತೆ, ರಸ್ತೆಯು ಕಡೆ ನೋಡಿ ಮನಸ್ಸಿನಲ್ಲೇ ಅಂದುಕೊಂಡೆ, ಜಮುನಾಳನ್ನು ಪುನಃ ತಂದುಕೊಡು. ಜಮುನಾಳನ್ನು ನಾನು ಪುನಃ

ಒಮ್ಮೆ ನೋಡಬೇಕು, ಈಗಲೇ ಜಮುನಾಳನ್ನು ತೋರಿಸು. ಇಲ್ಲದಿದ್ದರೆ ನಾನು ಸರ್ವನಾಶ ಮಾಡಿ ಸುಟ್ಟು ಹಾಕಿ ಬಿಡುತ್ತೇನೆ, ಟ್ರಾಮಿನ ಹಳಿಯನ್ನು ಎತ್ತಿ ಬಿಡುತ್ತೇನೆ. ಟೆಲಿಗ್ರಾಫಿನ ತಂತಿಗಳನ್ನು ಕಿತ್ತು ಬಿಸಾಕಿ ಬಿಡುತ್ತೇನೆ. ರಸ್ತೆಯ ನಡುವೆ ಬೆಂಕಿ ಹಾಕ್ಬಿಡ್ತೀನಿ. ಜಮುನಾ ಎಲ್ಲಿ? ತೋರಿಸು. ಕತ್ತು ಹೊರಳಿಸಿ ಆಕಡೆ ಈಕಡೆ ನೋಡುತ್ತಲೇ ತಟ್ಟನೆ ಕಣ್ಣಿಗೆ ಬಿತ್ತು. ಯಾರೋ ಅವಳನ್ನ ಅದೃಶ್ಯ ಮಾಡಿ ಬಿಟ್ಟಿದ್ದರೇನು? ಎನ್ನುವಂತೆ, ಪುನಃ ಅವಳನ್ನು ಹಿಂತಿರುಗಿಸಿದಂತೆ ತೋರಿತು. ಸ್ವಲ್ಪ ದೂರದಲ್ಲಿ ಬಸ್‌ಸ್ಟಾಪಿನಲ್ಲಿ ಜಮುನಾ ಒಬ್ಬಳೇ ನಿಂತುಕೊಂಡಿದ್ದಾಳೆ. ನಿಧಾನವಾಗಿ ನನ್ನ ಮೈ ತಣ್ಣಗಾಗುತ್ತಾ ಬಂತು. ಮುಖದ ಭಾವ ಮೃದುವಾಯಿತು. ನಾನು ತುಂಬಾ ಹೊತ್ತಿನ ಮೇಲೆ ದೀರ್ಘ ನಿಶ್ವಾಸವನ್ನು ಬಿಟ್ಟೆ.

ನಿಶ್ಶಬ್ದವಾಗಿ ಜಮುನಾಳ ಹತ್ತಿರ ಹೋಗಿ ನಿಂತುಕೊಂಡು ಹೇಳಿದೆ, ಹೇಗಿದ್ದೀಯ? ಚಕಿತಳಾಗಿ ತಿರುಗಿ ನೋಡಿ, ಜಮುನಾಳೆಂದಳು, ಇದೇನಿಲ್ಲಿ? ಸುನೀಲ್‌ದಾ ನೀವು ಇಲ್ಲಿ? ನಾನು ಪ್ರಶ್ನಿಸಿದೆ, ನೀನಿಲ್ಲಿ ಏನು ಮಾಡ್ತಿದೀಯಾ? ನೀವೀಗ ಇಲ್ಲೇ ಇದೀರಲ್ವಾ?

ಇಲ್ಲ, ನಮ್ಮ ಮನೆ ಇರೋದು ಲೇಕ್ ಪ್ಲೇಸ್‌ನಲ್ಲಿ. ಇಲ್ಲಿ ಸಂಗೀತ ಕಲಿಯೋದಕ್ಕೆ ಬರ್ತೀನಿ. ಅದೋ ಅಲ್ಲಿ, ಅದೇ ನಮ್ಮ ಸಂಗೀತ ಶಾಲೆ.

ನೀನು ಸೀರೆ ಉಟ್ಕೊಂಡಿದೀಯ, ಅದಕ್ಕೆ ಮೊದಲು ನಿನ್ನ ಗುರ್ತು ಸಿಗಲಿಲ್ಲ.

ವ್ಹಾ! ನಾನು ತುಂಬಾ ದಿನದಿಂದ ಸೀರೆ ಉಟ್ಕೋತಾ ಇದ್ದೀನಿ. ನೀವು ಹಿಂದೆ ನೋಡಿರಲಿಲ್ಲ ಅಂತ ಕಾಣುತ್ತೆ.

ಯಾರಿಗ್ಗೊತ್ತು ನನಗೆ ನೆನಪಿರೋದು ನಿನ್ನನ್ನು ಆ ಬೂಲೂದೀಯ ಮದುವೆಯಲ್ಲಿ ನೋಡಿದ್ದು, ಅದೇ ಸಾಧಾರಣ ಬಿಳಿ ಫ್ರಾಕ್ ಹಾಕ್ಕೊಂಡಿದ್ದಿ.

ಅಯ್ಯೋ ಎಷ್ಟೊಂದು ಸುಳ್ಳು, ಬೂಲೂಚಿಕ್ಕಿಯ ಮದುವೆಯಲ್ಲಿ ನಾನು ಖಂಡಿತವಾಗಿಯೂ ಫ್ರಾಕ್ ಹಾಕಿಕೊಂಡಿರಲಿಲ್ಲ. ನಾನು ಎಲ್ಲರಂತೇ ಸೀರೇನೆ ಉಟ್ಟುಕೊಂಡಿದ್ದೆ. ಬೂಲೂಚಿಕ್ಕಿಯ ಮದುವೆ ಸ್ವಲ್ಪ ದಿನಗಳ ಹಿಂದೆ ಆಗಿದ್ದು ಅಷ್ಟೆ.....

ಕೆಲವು ದಿನಗಳ ಹಿಂದೆ ಅಲ್ಲ, ಎರಡು ವರ್ಷಗಳ ಹಿಂದೆ. ಆಗ ನೀನು.....

ಖಂಡಿತವಾಗಿಯೂ ಇಲ್ಲ. ಬೂಲೂಚಿಕ್ಕಿಯ ಮದುವೆಯಲ್ಲಿ ನಾನು. ಗುಲಾಬಿ ಬಣ್ಣದ ಮುರ್ಷಿದಾಬಾದ್ ಸಿಲ್ಕ್ ಸೀರೆಯನ್ನು ಉಟ್ಟುಕೊಂಡಿದ್ದೆ.

ಅದು ಬೇಕಿದ್ರೆ ಬೀಗರ ಔತಣದ ದಿನ ಅಂತ ಕಾಣುತ್ತೆ. ಆದರೆ ಮದುವೆಯ ದಿನ ನೀನು ಬಿಳಿ ಫ್ರಾಕ್ ಹಾಕಿಕೊಂಡಿದ್ದೆ, ನನಗೆ ಚೆನ್ನಾಗಿ ನೆನಪಿದೆ.

ನಿಮಗೇನೂ ನೆನಪಿಲ್ಲ ಅಂತ ಕಾಣುತ್ತೆ, ಅದು ನರೇಶದಾನ ಮದುವೆಯಲ್ಲಿ. ಮೂರು ವರ್ಷದ ಹಿಂದೆ. ಬೂಲೂಚಿಕ್ಕಿಯ ಮದುವೆಯಾಗಿದ್ದು ಕಳೆದ ಜೂನ್ ತಿಂಗಳಲ್ಲಿ. ಬೂಲೂಚಿಕ್ಕಿಯ ಮದುವೆಗೆ ನೀವು ಬಂದೇ ಇರಲಿಲ್ಲ. ಹುಡುಗಿಯರು ಸೀರೆ ಉಡೋ ವಿಷಯಾನ ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಿರ್ತಾರೆ.

ಅಯ್ಯೋ ಹುಡುಗಿಯರಾ? ಸೀರೆ ಉಟ್ಕೊಂಡ್ರೆ ತುಂಬಾ ದೊಡ್ಡವಳಾಗಿ

ಕಾಣಿಸ್ತೀಯ. ನೀನಿನ್ನೂ ಪುಟ್ಟ ಹುಡುಗಿ.

ಖಂಡಿತವಾಗಿ ಪುಟ್ಟ ಹುಡುಗಿಯಲ್ಲ.

ಸರಿಯಮ್ಮ ಪುಟ್ಟ ಹುಡುಗಿಯಲ್ಲ. ನೀನು ನನ್ನನ್ನ ಹೇಗೆ ಗುರುತು ಹಿಡಿದೆ?

ವ್ಹಾ! ಯಾಕೆ ಗುರ್ತು ಹಿಡಿಯೋದಿಲ್ಲ? ಆದರೂ ನಿಮ್ಮ ಮುಖ ತುಂಬಾ ಬದಲಾಗಿ ಬಿಟ್ಟಿದೆ. ಹಿಂದೆ ನೀವು ತುಂಬಾ ಚೆನ್ನಾಗಿದ್ದಿರಿ. ನಿಜವಾಗಿಯೂ.

ಅದಕ್ಕೆ ನೀನು ಇನ್ನೂ ಚಿಕ್ಕ ಹುಡುಗಿ ಅಂದಿದ್ದು. ಹುಡುಗಿಯರು ಯಾವುದಾದರೂ ಹುಡುಗನ ಮುಖದೆದುರೇ ಅವನ ಮುಖ ಚೆನ್ನ ಅಂತ ಹೇಳೋಕಾಗುತ್ತಾ? ಸ್ವಲ್ಪ ಹಿಂದೆ ಮುಂದೆ ನೋಡಿ ಹೇಳ್ತಾರೆ.

ಸ್ವಚ್ಛಂದವಾಗಿ ನಕ್ಕಳು ಜಮುನಾ. ಆ ನಗುವಿನಲ್ಲಿ ಎಲ್ಲೂ ಒಂದಿಷ್ಟೂ ಕಠಿಣ ಭಾವವಿಲ್ಲ. ಆ ನಗು ಅವಳ ಇಡೀ ಶರೀರದಿಂದ ಹೊರ ಹೊಮ್ಮಿದಂತೆ. ನಗು ನಗುತ್ತಲೇ ಹೇಳಿದಳು, ಈಗ ಚೆನ್ನಾಗಿ ಕಾಣ್ತೀರ ಅಂತ ಹೇಳಲ್ಲ. ಈಗ ತುಂಬಾ ಅಸಹ್ಯವಾಗಿದೀರ....

ಯಾವ ರೀತಿ ಅಸಹ್ಯ?

ಬಣ್ಣ ಕಪ್ಪಾಗಿಬಿಟ್ಟಿದೆ. ಗಡ್ಡ ಬೋಳಿಸಿಕೊಂಡಿಲ್ಲ. ಬಟ್ಟೆ-ಬರೆ ಯಾವ ತರಹ ಆಗೋಗ್ಬಿಟ್ಟಿದೆ ನೋಡಿ.....

ಮಳೆಯಲ್ಲಿ ನೆನೆದಿದ್ದೆ. ನಾಳೆ ನೋಡುವಿಯಂತೆ ನನ್ನನ್ನ ಪೂರ್ತಿ ಬೇರೆ ರೀತಿಯಲ್ಲಿ. ನಾಳೆಯೇ.......

ನೀವು ಅಷ್ಟು ಜೋರಾಗಿ ಏಕೆ ಮಾತನಾಡ್ತಾ ಇದೀರ?

ನಾನು ಚಕಿತನಾಗಿ ಕೇಳಿದೆ, ಜೋರಾಗಿ ಮಾತಾಡ್ತೀನಾ? ನಿನಗೆ ತೊಂದ್ರೆಯಾಗುತ್ತಾ? ಜಮುನಾ ಅವಳ ದೊಡ್ಡ ಕಪ್ಪು ಕಣ್ಣುಗಳನ್ನು ನನ್ನ ಕಡೆ ಸರಿಸಿ ಹೇಳಿದಳು, ಇಲ್ಲ, ನೀವು ಹಿಂದೆ ಈ ರೀತಿ ಜೋರಾಗಿ ಮಾತನಾಡ್ತಾ ಇರಲಿಲ್ಲ. ನಿಮ್ಮ ಕಣ್ಣು ಕೆಂಪಗಾಗಿದೆ ಏಕೆ? ನಿಮಗೆ ಮೈ ಹುಷಾರಿಲ್ವಾ?

ಇಲ್ಲ, ಇಲ್ಲ. ಕಣ್ಣಲ್ಲಿ ಮರಳು ಬಿದ್ದಿತ್ತು. ನೀನು ಬಸ್ ಹತ್ತುತ್ತೀಯಾ? ನಡಿ ಸ್ವಲ್ಪ ದೂರ ನಡ್ಕೊಂಡೇ ಹೋಗೋಣ. ನಾನು ಕಾಲಿಘಾಟಿಗೆ ಹೋಗ್ತೀನಿ. ನೀನು ಅಲ್ಲಿಂದ ಬಸ್ ಹತ್ತುವಿಯಂತೆ.

ನಡೀರಿ, ನೀವು ನಮ್ಮನೆ ಕಡೆ ಬರಲೇ ಇಲ್ಲ ಯಾಕೆ? ಇವತ್ತು ಬರ್ತೀರಾ? ನಡೀರಿ.

ಊಹೂಂ ಇನ್ನೊಂದು ದಿನ. ನಿಮ್ಮಣ್ಣ ವರುಣ ಅಮೆರಿಕೆಯಿಂದ ಇನ್ನೂ ಬಂದಿಲ್ವಾ?

ಅಣ್ಣ ಈ ನವೆಂಬರ್‌ಗೆ ಬರ್ತಾನೆ. ನನಗಾಗಿ ಒಂದು ಟೇಪ್ ರೆಕಾರ್ಡರ್ ತೊಗೊಂಡು ಬಾ ಅಂತ ಹೇಳಿದ್ದೀನಿ.

ಕೆಂಪು ಸೀರೆ, ಕೆಂಪು ಬ್ಲೌಸ್, ಕೆಂಪು ಬಣ್ಣದ ಚಪ್ಪಲಿ ಅದರ ನಡುವೆ ಜಮುನಾಳ ಬಳುಕುವ ಎಳೇ ಶರೀರ. ಇಷ್ಟೆಲ್ಲ ಕೆಂಪು ಬಣ್ಣದ ನಡುವೆಯೂ ಯಾವೊಂದು ಬೆಂಕಿಯ ಛಾಯೆಯೂ ಇಲ್ಲ. ಇದೇ 'ಸೌಂದರ್ಯ'. ಯಾವುದನ್ನೇ ನೋಡಲಿ

ಮನಸ್ಸನ್ನ ಸೆಳೆಯುತ್ತೆ. ಒಂದು ಕ್ಷಣ ನನ್ನ ಮನಸ್ಸಿಗನ್ನಿಸಿತು – ಜಮುನಾ ಖಂಡಿತವಾಗಿಯೂ ನೀನು ಸುಂದರಿ – ಈ ಮಾತನ್ನು ಹೇಳಿ ನಾನು ಅವಳ ಕಾಲಿಗೆ ಬಿದ್ದು ನಮಸ್ಕರಿಸುವೆ. ಅವಳ ಅಂತರ್ಯದಲ್ಲಿ ಏನು ಸೌಂದರ್ಯ ಇದೆಯೋ, ಅದು ನಮಸ್ಕರಿಸಲೇ ಯೋಗ್ಯ. ಆದರೆ ಆ ರೀತಿ ಮಾಡೋಕಾಗೋಲ್ಲ. ಖಂಡಿತವಾಗಿಯೂ ಸಾಧ್ಯವಿಲ್ಲ. ಜನ ಹುಚ್ಚ ಅಥವಾ ಹೆಂಡಕುಡುಕ ಅಂತಾರೆ ಅಷ್ಟೆ. ನಿಧಾನವಾಗಿ ನಡೆಯುತ್ತ ನಾನೆಂದೆ, ಜಮುನಾ ನಿನ್ನನ್ನು ಥಟ್ಟನೆ ನೋಡಿ ನನ್ನ ಮನಸ್ಸಿಗೆ ತುಂಬಾ ಸಂತೋಷವಾಗಿದೆ.

ಮನೆಗೆ ಬನ್ನಿ ನೀವು. ಏನು ಅಂಥಾ ಕೆಲಸ ?

ಇಲ್ಲ ಇವತ್ತಾಗೋದಿಲ್ಲ. ಇನ್ನೊಂದು ದಿನ ನಾನು ನಿನ್ನ ಸಂಗೀತ ಶಾಲೆಯ ಎದುರು ಕಾಣ್ತೇನಿ.

ಸಂಗೀತ ಶಾಲೆಯ ಎದುರೇ ಏಕೆ ?

ಹಾಗೆ ಸುಮ್ಮನೆ. ಇವತ್ತು ಇಲ್ಲಿ ನಿನ್ನನ್ನು ನೋಡಿ ತುಂಬಾ ಸಂತೋಷವಾಯ್ತು. ಇನ್ನೊಂದು ದಿನವೂ ನೋಡಿ ತುಂಬಾ ಸಂತೋಷವಾಗಬಹುದು. ನೀನೀಗ ಯಾವ ಹಾಡು ಕಲೀತಾ ಇದೀಯಾ – 'ಎಲೆ ದೋಣಿಯಲ್ಲಿ ತೇಲೋಣ ?'

ಅಯ್ಯೋ, ನಿಮಗೆ ಹೇಗೆ ಗೊತ್ತಾಯ್ತು, ಅದು ಬಿಗಿನರ್ಸ್ ಹಾಡು. ನಾನೀಗ ಸೆಕೆಂಡ್ ಇಯರ್.

ಹಾಗಾದ್ರೆ ಈಗ 'ಶ್ರಾವಣ ನೀನು ಗಾಳಿಯಲ್ಲಿ ಯಾರ ಮುಖ ಕಂಡೆ ?' ಜಮುನಾ ಪುನಃ ಇಡೀ ಮೈಕುಲುಕಿಸಿ ನಕ್ಕಳು. ಅವಳೆಂದಳು, ನೀವು ಇದನ್ನೆಲ್ಲಾ ಹೇಗೆ ತಿಳಿದುಕೊಂಡಿರಿ ? ಸಂಗೀತ ಕಲಿತಿದ್ದೀರ ಅಂತ ಕಾಣುತ್ತೆ.

ಇಲ್ಲ ಎಂದೂ ಕಲಿತಿಲ್ಲ. ನಮ್ಮನೆ ಪಕ್ಕದಲ್ಲಿ ಒಬ್ಬ ಹುಡುಗಿ ಸಂಗೀತ ಶಾಲೆಯಲ್ಲಿ ರವೀಂದ್ರ ಸಂಗೀತ ಕಲೀತಿದ್ದಾಳೆ ಮತ್ತು ದಿನಾ ಬೆಳಗ್ಗೆ ಹಾರ್ಮೋನಿಯಮ್‌ನಲ್ಲಿ ಅದೇ ಹಾಡನ್ನ ಬಾರಿಸಿ ಹಾಡ್ತಾಳೆ. ಹಾಡೋದಿಲ್ಲ ಕಿರುಚಿಕೊಳ್ತಾಳೆ. ಅದಕ್ಕೆ ಯಾವ ಹಾಡಾದ ಮೇಲೆ ಯಾವ ಹಾಡನ್ನ ಕಲಿತುಕೊಳ್ಳಬೇಕು ಅನ್ನೋದು ನನಗೆ ಕಂಠಪಾಠವಾಗಿಬಿಟ್ಟಿದೆ.

ಒಳ್ಳೇದೇ ಆಯ್ತು ಬಿಡಿ. ನೀವು ಹಾಡು ಕಲಿತಂತಾಗುತ್ತೆ.

ಎಂಥಾ ಮುಖ ! ಶುಭ್ರ, ಎಲ್ಲೂ ಯಾವೊಂದು ಸಾಮಾನ್ಯ ಕಲೆಯೂ ಇಲ್ಲ. ಪವಿತ್ರಕಣ್ಣುಗಳಲ್ಲಿ ಸಾಮಾನ್ಯ ಚಂಚಲತೆಯೂ ಇಲ್ಲ. ಕಪ್ಪನೆಯ ದಪ್ಪ ಹುಬ್ಬುಗಳು. ಮರದಿಂದ ಇದೀಗ ಕಿತ್ತು ತಂದಂತಹ ಸೇಬು ಅಥವಾ ಸೀಬೇ ಹಣ್ಣನ್ನು ಕೈಯಲ್ಲಿ ಹಿಡಿದರೆ ಯಾವ ರೀತಿ ಸಂತೋಷವಾಗುತ್ತೋ – ಜಮುನಾಳ ಮುಖ ನೋಡಿ ನನಗೆ ಅದೇ ರೀತಿ ಮನಸ್ಸಿಗನ್ನಿಸತೊಡಗಿತು. ಪ್ರಪಂಚದಲ್ಲಿ ಯಾವುದೆಲ್ಲವೂ ಶ್ರೇಷ್ಠವೋ ಅವೆಲ್ಲವನ್ನೂ ನಾನು ಅವಳ ಮುಖದಲ್ಲೇ ಕಾಣ್ತೇನೆ. ಇಡೀ ಶರೀರದಲ್ಲಿ ಯಾವೊಂದೂ ಕುಂದು ಕೊರತೆಗಳಿಲ್ಲ. ಒಂದು ಮರಿಕುದುರೆ ಅಥವಾ ಒಂದು ಗಿಡುಗನ ಶರೀರದ ಪ್ರತಿಯೊಂದು ಅಂಶ ಯಾವ ರೀತಿ ಸೂಕ್ಷ್ಮ ಹಾಗೂ ಛಂದೋಮಯವಾಗಿರುತ್ತೋ, ಸರಿಯಾಗಿ ಅದೇ ತರಹ. ಅಷ್ಟಲ್ಲದೆ ಆಕಾಶದಲ್ಲಿ

ಏರೋಪ್ಲೇನ್ ಹಾರುವಾಗ ಯಾವ ಸ್ಮಾರ್ಟನೆಸ್ ಇದೆಯೋ ಹಾಗೆ. ಜಮುನಾಳನ್ನು ನೋಡಿ ನನ್ನ ಮನಸ್ಸಿಗೆ ಆ ವಿಷಯವೂ ನೆನಪಿಗೆ ಬಂತು. ನೀಳ ಕುತ್ತಿಗೆಯಿಂದ ಕೆಳಗೆ ಸ್ವಲ್ಪ ಉಬ್ಬಿದ ಒಂದು ಕೈ, ಎದೆ ಹತ್ತಿರ ಸಂಗೀತದ ಪುಸ್ತಕ ಹಿಡಿದಿದೆ. ಸ್ತನಗಳು ಯಾವ ರೀತಿ ಎಂದರೆ – 'ಯೌವ್ವನದ ಆಗಮಾನವನ್ನು ಘೋಷಿಸುವಂತಿವೆ' – ಇದನ್ನು ಎಲ್ಲೋ ಕೇಳಿದ್ದೆ ಕೂಡಾ. ನಾನು ಜಮುನಾಳ ಮುಖ ಹಾಗೂ ಎದೆಯ ಕಡೆ ನೋಡಿ, ಯೌವನ ಹೊರಡಿಸಿದ ಚೆಲುವನ್ನು ಗಮನಿಸಿದೆ. ಈ ರಸ್ತೆಯಲ್ಲೇ ನಿಂತು, ಜಮುನಾಳ ಕಾಲು ಹಿಡಿದು ನಮಸ್ಕರಿಸಬೇಕೆಂಬ ಬಯಕೆ ಉಂಟಾಗುತ್ತದೆ. ಆದರೆ ಆ ರೀತಿ ಮಾಡಲಾಗುವುದಿಲ್ಲ. ಇಲ್ಲಿ ಜನ ಹುಚ್ಚ ಅಥವಾ ಹೆಂಡಕುಡುಕ ಅಂತ ಎಂದುಕೊಳ್ಳುತ್ತಾರೆ.

ನಾನು ಅವಳನ್ನು ಪ್ರಶ್ನಿಸಿದೆ, ನಿನ್ನ ಸಂಗೀತದ ಶಾಲೆ ಯಾವಾಗ್ಯಾವಾಗ ಇರುತ್ತೆ?

ಮಂಗಳವಾರ ಹಾಗೂ ಗುರುವಾರ ಆರರಿಂದ ಎಂಟರವರೆಗೆ. ನೀವು ಸಂಗೀತ ಕಲೀತೀರಾ? ಕಲೀರಿ, ನಿಮ್ಮ ತರಹಾನೂ ತುಂಬಾ ಜನ ಬಂದು ಕಲೀತಾರೆ.

ಛೆ! ಅದಕ್ಕೇಂತ ಅಲ್ಲ. ನಾನು ಈ ಕಡೇನೇ ಒಮ್ಮೊಮ್ಮೆ ಬರ್ತಿರ್ತೀನಿ. ಬೇಕಾದರೆ ಒಮ್ಮೊಮ್ಮೆ ನಿನ್ನನ್ನು ಕಾಣುತ್ತಿರಬಹುದೂಂತ. ಇವತ್ತು ನಿನ್ನನ್ನು ನೋಡಿ ಮನಸ್ಸಿಗೆ ತುಂಬಾ ಸಂತೋಷವಾಯಿತು.

ಅಮ್ಮನಿಗೆ ನಿಮ್ಮ ವಿಷಯ ಹೇಳ್ತೀನಿ. ಯಾವಾಗ ಮನೆ ಕಡೇ ಬರ್ತೀರಾ?

ಬರ್ತೀನಿ, ಬರ್ತೀನಿ. ಅಲ್ಲಿ ನೋಡು ನಿನ್ನ ಬಸ್ ಬಂದು ಬಿಡ್ತು. ಹತ್ತಿ ಬಿಡು ಇಲ್ಲಾಂದ್ರೆ ಮನೆಯಲ್ಲಿ ನಿನ್ನ ಬಗ್ಗೆ ಚಿಂತಿಸ್ತಾರೆ. ನೀನು ದಾರಿ ತಪ್ಪಿ ಬಿಟ್ಟಿದೀಯ ಅಂತ ಅಂದುಕೊಳ್ಳುತ್ತಾರೆ.

ಛೇ, ಇದೇನು ಈ ರೀತಿ ಹೇಳ್ತೀರಾ? ನಾನು ಒಬ್ಬೊಬ್ಬಳೇ ಎಷ್ಟು ಕಡೆಗಳಲ್ಲಿ ಸುತ್ತಾಡಿ ಬರ್ತೀನಿ.

ಗೊತ್ತು, ಗೊತ್ತು. ನೀನು ತುಂಬಾ ದೊಡ್ಡವಳಾಗಿ ಬಿಟ್ಟಿದೀಯ. ಈ ಸಲ ಬಸ್ಸಿನಲ್ಲಿ ಹತ್ತಿಬಿಡು.

ಜಮುನಾ ಹೋಗಿ ಬಸ್ ಹತ್ತಿದಳು. ಆನಂತರ ಹಿಂತಿರುಗಿ ನನ್ನ ಕಡೆ ನೋಡಿ ನಕ್ಕಳು. ಅವಳ ಕೆಂಪು ಉಡುಪಿನಿಂದಾಗಿ, ಅವಳ ನಗುವಿನಲ್ಲೂ ಕೆಂಪು ಛಾಯೆ ಹರಡಿತ್ತು. ಬಸ್ ಹತ್ತುವ ಕ್ಷಣದಲ್ಲೂ ಅವಳು ಝುಣ ಝುಣ ದನಿಯ ಶುದ್ಧ ಸ್ವರದಲ್ಲಿ ಕೂಗಿ ಹೇಳಿದಳು, ಬರ್ಬೇಕು ಮತ್ತೆ. ಜಮುನಾ ಇನ್ನೂ ಹೆಂಗಸರ ನಡುವೆ ಒಬ್ಬಳಾಗಿಲ್ಲ. ಆ ರೀತಿ ಯಾವುದೇ ಹೆಂಗಸು ಬಸ್ ಹತ್ತಿದ ಮೇಲೆ ರಸ್ತೆಯಲ್ಲಿ ನಿಂತಿರುವ ಗಂಡಸರನ್ನುದ್ದೇಶಿಸಿ ಜೋರಾಗಿ ಮಾತನಾಡುವುದಿಲ್ಲ. ಮಾತನಾಡಬಾರದೆಂಬ ನಿಯಮವೇನಿಲ್ಲವಲ್ಲ.

ಕಾಲಿಘಾಟ್ ಬಾಜಾರದ ಮುಂದಕ್ಕೆ ಒಂದು ಮನೆಯಲ್ಲಿ ಬಾರೀನ್‌ದಾ ಇರೋದು. ಬಾರೀನ್‌ದಾನ ಜೊತೆ ಹೇಗೆ ಯಾವ ಸಂದರ್ಭದಲ್ಲಿ ನನ್ನ ಪರಿಚಯವಾಯಿತು ಅನ್ನೋದು ಇದೀಗ ನೆನಪಿಲ್ಲ. ಆದರೆ ಅವರ ಮನೆಗೆ ಅನೇಕ ಸಿನೇಮಾ ತಾರೆಯರು,

ಫುಟ್‌ಬಾಲ್ ಆಟಗಾರರು ಬರ್ತಾರೆ ಅನ್ನೋದನ್ನು ನೋಡಿದೀನಿ. ಬಾರೀನ್‌ದಾನ ಮನೆಯಲ್ಲಿ ಇಸ್ಪೀಟಿನ ಆಟವನ್ನಾಡುತ್ತ ಅನೇಕ ರಾತ್ರಿ ಕಳೆದಿದ್ದೇನೆ. ಒಂದೊಂದು ಸಲ ರಾತ್ರಿ ಎಲ್ಲವನ್ನೂ ಸೋತು ಕಳೆದುಕೊಂಡದ್ದು ಉಂಟು. ಆದರೆ ಬೆಳಗ್ಗೆ ಬಾರೀನ್‌ದಾ ಬೇಯಿಸಿದ ಮೊಟ್ಟೆ ಹಾಗೂ ಚಹ ಕೊಟ್ಟು ಮನೆಗೆ ಹಿಂತಿರುಗುವ ಗಾಡಿಯ ಬಾಡಿಗೆಯನ್ನು ಕೂಡಾ ಕೊಟ್ಟಿದ್ದಾನೆ. ಬಾರೀನ್‌ದಾ ಬಹಳ ಭಯಂಕರ ಸ್ವಭಾವದವ. ಆದರೆ ಅವನು ಹಣದಾಹಿಯಲ್ಲ. ಜೂಜಾಡುವಾಗ ಒಂದು ಚಿಕ್ಕಾಸನ್ನೂ ಬಿಟ್ಟು ಕೊಡುವುದಿಲ್ಲ. ಆದರೆ ಬೇರಿನ್ನಾವ ಸಮಯದಲ್ಲೇ ಆಗಲೀ ಸಾಲ ಕೇಳಿದರೆ ತಕ್ಷಣ ಕೊಟ್ಟು ಬಿಡ್ತಾನೆ ಹಾಗೂ ಬಹುಪಾಲು ಹಿಂತಿರುಗಿಯೂ ಕೇಳೋದಿಲ್ಲ. ಅವನು ಗಿಡ್ಡ. ಆದರೆ ಸಬಲ ಮುಖ, ಕೈಗಳೆರಡೂ ಬಹಳ ದಷ್ಟಪುಷ್ಟ. ತಲೆಕೂದಲು ಚಿಕ್ಕದಾಗಿ ಕತ್ತರಿಸಲ್ಪಟ್ಟಿದೆ. ಮುಖ ನೇಪಾಲಿಯವರ ತರಹ. ಮುಖದ ಭಾವ ಕೋಪ ಅಥವಾ ದುಃಖವೇ ಅನ್ನೋದು ಸುಲಭವಾಗಿ ತಿಳಿಯಲಾಗುತ್ತಿರಲಿಲ್ಲ. ಕೇವುಡಾ ತಲಾ ಸ್ಮಶಾನದ ಹತ್ತಿರ ಬಾರೀನ್‌ದಾನ ಒಂದು ಹೂವಿನ ಅಂಗಡಿ ಇದೆ. ಬೆಳಗಿನ ಹೊತ್ತು ಅವನು ಅಲ್ಲಿಯೇ ಕುಳಿತಿರುತ್ತಾನೆ. ಅದೂ ಆಶ್ಚರ್ಯ. ಆ ಹೂವಿನ ಅಂಗಡಿಯಿಂದಾಗಿ ಅವನಿಗೆಷ್ಟೋ ಲಾಭವಾಗುತ್ತೆ. ಬಾರೀನ್‌ದಾನ ಏನೇ ಲಾಭವಿದ್ದರೂ ಅದು ಎಲ್ಲವೂ ರಾತ್ರಿಯ ಜೂಜಿನಲ್ಲೇ. ಅದಲ್ಲದೆ ಅವನ ಮನೆಯಲ್ಲಿ ಯಾವಾಗಲೂ ಮೂರು ನಾಲ್ಕು ತರದ ಹೆಂಡ ಇದ್ದೇ ಇರುತ್ತೆ – ಹಣ ಕೊಟ್ಟು ಕುಡಿಯಬೇಕು. ಆದರೆ ಅವನಿಗೆ ಅಂಗಡಿಯ ಮೇಲೆ ತುಂಬಾ ಆಸ್ಥೆ. ಯಾರ ಬಗ್ಗೆಯಾದರೂ ಅತಿ ಸ್ನೇಹ ತೋರಿಸಹೋದರೆ ಬಾರೀನ್‌ದಾ ಹೇಳ್ತಿದ್ದ, ಹೋಗು ನೀನು ಸತ್ತರೆ ನನ್ನ ಅಂಗಡಿಯಿಂದ ಎಷ್ಟು ಬೇಕೋ ಅಷ್ಟು ಹೂವು ಪುಗಸಟ್ಟೆಯಾಗೇ ಕೊಡ್ತೀನಿ.

ನಾನು ಒಳಗೆ ಹೋಗಿ ಬಗ್ಗಿ ನೋಡಿದೆ. ಕೋಣೆಯಲ್ಲಿ ಅನೇಕ ಜನರಿದ್ದರು. ಶೇಖರ ಇದಾನೋ ಇಲ್ಲವೋ ಅನ್ನೋದನ್ನ ಮೊದಲ ನೋಟದಲ್ಲೇ ನೋಡಿ ಬಿಟ್ಟೆ. ಮಂಚದ ಮೇಲೆ ಜೂಜು ಪ್ರಾರಂಭವಾಗಿತ್ತು. ಬಾರೀನ್‌ದಾ, ಅವಿನಾಶ, ತಾಪಸ್ ಹಾಗೂ ಒಬ್ಬ ಅಪರಿಚಿತ ವ್ಯಕ್ತಿ. ಕಿಟಕಿಯ ಬಳಿ ನೂರೂಲ್ ಹಾಗೂ ಸುವಿಮಲ ಕುಳಿತಿದ್ದರು. ಒಂದು ಮೂಲೆಯಲ್ಲಿ ಕಾಲು ಮುದುರಿಕೊಂಡು ಮಲಗಿದ್ದಾನೆ ಪರೀಕ್ಷಿತ. ಅವನು ಕೈಯಿಟ್ಟುಕೊಂಡು ಮಲಗಿರುವ ಭಂಗಿಯನ್ನು ನೋಡಿದರೇ ಹೇಳಬಹುದು, ಅವನಿನ್ನು ಇಡೀ ರಾತ್ರಿ ಏಳೋದಿಲ್ಲ ಅಂತ. ನಾನು ಬಾರೀನ್‌ದಾನನ್ನು ವಿಚಾರಿಸಿದೆ, ಶೇಖರನ ವಿಷಯವೇನಾದ್ರೂ ಗೊತ್ತೇ ಅಂತ.

ಇಲ್ಲಪ್ಪ ಅವನು ಈ ಕಡೆ ಬಂದು ಹದಿನೈದು ದಿನಗಳ ಮೇಲಾಗ್ತಾ ಬಂತು. ಇನ್ನೆಂದೂ ಈ ಕಡೆ ತಲೆ ಹಾಕೋದಿಲ್ಲ ಅಂತ ಹೇಳಿ ಹೋಗಿದಾನೆ.

ಇನ್ನು ಬರೋದಿಲ್ವೆ? ಯಾಕೆ?

ಸರಿ, ಸರಿ ಅವರಿಗೆಲ್ಲ ಏನು ಆಟ ಆಡೋಕೆ ಬರುತ್ತೆ? ಕಳೆದ ತಿಂಗಳು ಶೇಖರ ಮೇಲಿಂದ ಮೇಲೆ ನಾಲ್ಕು ಸಲ ಗೆದ್ದ. ಗೆದ್ದ ಅಂದ್ರೆ ಬಹುಶಃ ಐನೂರು ರೂಪಾಯಿಯವರೆಗೂ ಗೆದ್ದಿರಬಹುದು. ಆನಂತರ ಒಂದು ದಿನ ಪುನಃ ಸೋತ.

ಬಹುಶಃ ಆರು ನೂರು ರೂಪಾಯಿಗಳವರೆಗೂ. ಆ ದಿನವೇ ತಾನು ಬೇಕೆಂದೇ ಹಣವನ್ನ ಸೋತೆ ಎಂದ. ಅವನಿಗಿನ್ನು ಆಡಲು ಮನಸ್ಸಿದ್ದಂತಿಲ್ಲ. ಆ ತರದ ಜನರನ್ನು ಕಟ್ಟಿಕೊಂಡು ಆಟ ಆಡೋಕಾಗೋದಿಲ್ಲ. ಆಟದಲ್ಲಿ ಅವಿನಾಶನನ್ನ ಬಿಟ್ರಿಲ್ಲ.

ಅವಿನಾಶ ? ಆದರೆ ನಿನ್ನೆ ರಾತ್ರಿ ಅವನೊಡನೆ ಜಗಳವಾಯ್ತಂತೆ.

ಅವಿನಾಶ ಯಾವೊಂದೂ ಮಾತನಾಡದೆ ನಿರ್ವಿಕಾರವಾಗಿ ಇಸ್ಪೀಟಿನ ಎಲೆಗಳ ಕಡೆಯೇ ನೋಡುತ್ತಲಿದ್ದ. ಬಾರೀನ್‌ದಾ ಜೋರಾಗಿ ಹೋ ಹೋ ಎಂದು ನಕ್ಕು ಹೇಳಿದ, ನಿನ್ನೆ ಅವಿನಾಶ ಸ್ವಲ್ಪ ಹೆಚ್ಚಾಗಿಯೇ ಗೆದ್ದುಬಿಟ್ಟಿದ್ದ, ಅದಕ್ಕೆ ಅವನಿಗೆ ಸ್ವಲ್ಪ ನೆತ್ತಿಗೇರಿತ್ತು. ಇರ್ಲಿ ಬಿಡಪ್ಪಾ, ಇಪ್ಪತ್ತು ವರ್ಷದಿಂದ ನೋಡ್ತಾ ಇದೀನಿ. ಆದರೆ ಒಂದು ವಿಷಯಾನ್ನ ಚೆನ್ನಾಗಿ ಗಮನಿಸಿದೀನಿ. ವ್ಯಕ್ತಿ ಸೋತಾಗ ಅವನ ತಲೆ ಅಷ್ಟೊಂದು ಬಿಸಿಯಾಗೋಲ್ಲಾ. ಆದ್ರೆ ಗೆದ್ದರೆ ಇನ್ನೂ ಹೆಚ್ಚಾಗಿ ನೆತ್ತಿಗೇರುತ್ತೆ. ಹೊಸ ಡೀಲ್ ಪ್ರಾರಂಭಿಸಿದೀನಿ, ನೀನು ಬಂದು ಕೂತ್ಕೋತಿಯಾ ಹೇಗೆ ?

ಇಲ್ಲ, ನಾನು ಆಟ ಆಡೋಲ್ಲ.

ತಾಪಸನೆಂದ, ಬಾ ಸುನೀಲ್, ಕೂತ್ಕೋಬಾ, ಒಂದೆರಡು ಘಂಟೆ ಆಟ ಆಡುವಿಯಂತೆ.

ನಾನೆಂದೆ, ಇಲ್ಲಪ್ಪಾ, ನಾನಾಡೋದಿಲ್ಲ. ನೀನು ಆಡು.

ಯಾಕೆ ದುಡ್ಡಿಲ್ಲವೆ ?

ಹಾಗಂತ ಅಲ್ಲ. ಇವತ್ತು ಯಾಕೋ ನನಗೆ ಮನಸ್ಸಿಲ್ಲ. ನೀವೆಲ್ಲ ಆಟ ಆಡಿ. ನಾನು ಬಂದದ್ದು ಶೇಖರನಿಗಾಗಿ. ನಿಮಗ್ಯಾರಿಗೂ ಶೇಖರನ ಬಗ್ಗೆ ಗೊತ್ತಿಲ್ಲ. ಹಾಗಾದ್ರೆ ಅದು ಯೋಚ್ನೆ ಮಾಡೋ ಅಂತ ವಿಷಯಾನೇ.

ಶೇಖರ ಬಿಡಪ್ಪ, ಬರೀ ಸ್ವಾರ್ಥಿ. ಅವನು ಯಾರ ಬಗ್ಗೇನೂ ಯೋಚ್ನೇ ಮಾಡೋದಿಲ್ಲ. ನಾವ್ಯಾಕೆ ಅವನ ಬಗ್ಗೆ ತಲೆ ಕೆಡಿಸಿಕೊಳ್ಳೋಣ.

ಆದ್ರೆ ನಿನ್ನೆ ರಾತ್ರಿಯಿಂದ ಅವನು ಮನೆಗೆ ಹಿಂತಿರುಗಿಲ್ಲ. ಎಲ್ಲೂ ಸಿಕ್ಕಿಲ್ಲ. ಎಲ್ಲಾದ್ರೂ ಕಳೆದುಗಿಳೆದು ಹೋಗಿದಾನೋ ಏನೋ ? ಸ್ವಲ್ಪ ಹುಡುಕೋದು ಒಳ್ಳೆಯದು.

ಅವಿನಾಶ ಮುಖ ಎತ್ತಿ ಸ್ವಾಭಾವಿಕ ದನಿಯಲ್ಲಿ ಹೇಳಿದ, ಯೋಚ್ನೆ ಮಾಡು ನಾವೂ ಕಳೆದುಹೋಗ್ತೇವೆ. ಶೇಖರನಿಗೆ ಹೇಳು, ಅವನು ನಮ್ಮನ್ನ ಹುಡುಕಲಿ.

ಅವನು ಸಿಕ್ಕರೆ ತಾನೇ ನಾನು ಹೇಳೋದು.

ವೀಣಾಳ ಮನೆಯಲ್ಲಿ ಹುಡುಕಿದೀಯ ? ನನಗೆ ಖಂಡಿತ ಗೊತ್ತು, ಅವನು ಅಲ್ಲೇ ಬಿದ್ದಿರಬೇಕು.

ವೀಣಾಳ ಬಳಿಯೇ ? ಶೇಖರ ಅಲ್ಲಿಗೆ ಹೋಗೋದನ್ನ ನಿಲ್ಲಿಸಿದ್ದಾನೆ ಅಂತ ಕೇಳಿದೆ. ಅದೂ ಅಲ್ಲದೆ ಅಲ್ಲಿಗೆ ಹೋದರೂ ಮಾರನೇ ದಿನದ ತನಕ ಮನೆಗೆ ಯಾಕೆ ಹಿಂತಿರುಗಿಲ್ಲ ?

ಅಲ್ಲಿ ಹೊಡೆದಾಟ ಬಡಿದಾಟವಾಗಿರಬೇಕು, ಇಲ್ಲ ಸಿಕ್ಕಿ ಬಿದ್ದಿರಬೇಕು. ಅವನಿಗೆ ಯಾವುದೂ ನಿಶ್ಚಿತವಿಲ್ಲ. ನೀನು ಅಲ್ಲಿ ಹೋಗಿ ನೋಡು, ಖಂಡಿತ ಸಿಗ್ತಾನೆ.

ನಾನು ಸ್ವಲ್ಪ ಸಿಡುಕಿ ಹೇಳಿದೆ, ನನ್ನ ಹಣೇಬರಹ, ನಾನೊಬ್ಬನೇ ಹುಡುಕಬೇಕು. ಅವನಿಗೇನಾದ್ರೂ ಯೋಚನೆ ಇದೆಯೇ ?

ಅವಿನಾಶ ಹಲ್ಲು ಕಡಿದು ಗಡಸು ದನಿಯಲ್ಲಿ ಹೇಳಿದ, ಈ ಪ್ರಸ್ತಾಪ ಮಾಡಲು ನಿನ್ನನ್ನು ಗೋಗರೆದವರ್‍ಯಾರು ? ಆಟ ಆಡೋದಾದ್ರೆ ಆಡು, ಇಲ್ಲಾಂದ್ರೆ ಇಲ್ಲಿಂದ ಜಾಗ ಖಾಲಿ ಮಾಡು.

ಬಾರೀನ್‌ದಾ ಹೇಳಿದ, ಇಸ್ಪೀಟ್ ಹಾಕ್ತಿದೀನಿ. ಒಂದೆರಡು ರೌಂಡ್ ಆಟ ಆಡ್ತೀಯಾ ?

ನಾನೆಂದೆ, ಇಲ್ಲ, ನೀವೆಲ್ಲ ಆಡಿ, ನಾನು ನೋಡ್ತೀನಿ. ಎಷ್ಟನೇ ಬೋರ್ಡ್ ?

ಚಿಕ್ಕದೇ ಇದೆ. ಹತ್ತು, ಇಪ್ಪತ್ತು ಪೈಸೆ.

ಲಿಮಿಟ್ಟು ?

ಹನ್ನೆರಡು ರೂಪಾಯಿ. ಇಬ್ಬರಾದ್ರೆ ಅನ್‌ಲಿಮಿಟೆಡ್.

ಬಾರೀನ್‌ದಾ ಇಸ್ಪೀಟಿನ ಎಲೆ ಹಂಚುತ್ತಾ ಹೇಳಿದ, ಕೊಡು, ಕೊಡು. ಬೋರ್ಡ್ ಹಣವನ್ನು ಕೊಡು.

ತಾಪಸ್ ಮೊದಲಿಗೇ ಎಲೆ ಎತ್ತಿ ನೋಡಿ, ತುಟಿ ಕೊಂಕಿಸಿ ಹೇಳಿದ, ಪ್ಯಾಕ್ ! ಅಪರಿಚಿತ ವ್ಯಕ್ತಿ ಒಂದು ರೂಪಾಯಿ ಇಟ್ಟು ಹೇಳಿದ, ಹತ್ತು. ಅವಿನಾಶನೆಂದ, ಹತ್ತು. ಬಾರೀನ್‌ದಾನೆಂದ, ಹತ್ತು. ಆನಂತರ ಮೂರು ಜನರು ಪುನಃ, ಹತ್ತು ಹತ್ತು ಹತ್ತು. ಅದೇ ಸಮಯಕ್ಕೆ ಹೀರಾಲಾಲ್ ಒಂದು ಲೋಟ ಸೋಡಾ ಬೆರೆಸಿದ ರಮ್ ತಂದು ಹೇಳಿದ, ತೊಗೊಳ್ಳಿ ಸುನೀಲ್‌ಬಾಬು, ಮೂರು ರೂಪಾಯಿ ಹದಿನೈದು ಪೈಸೆ ಕೊಡಿ.

ನಾನೆಂದೆ, ಇದೇನಿದು ಯಾರು ತಂದುಕೊಡು ಅಂದವರು ? ನನಗೆ ಬೇಕಾಗಿರಲಿಲ್ಲ.

ಕುಡಿಯೋದಿಲ್ಲವೇ ?

ಇಲ್ಲ. ಅದಲ್ಲದೆ, ನಾನು ವ್ಹಿಸ್ಕಿ ಕುಡಿದೇ ಬಂದಿದೀನಿ, ಹಾಗಿಲ್ಲದಿದ್ದರೂ ಕುಡೀತಿರಲಿಲ್ಲ.

ವ್ಹಿಸ್ಕಿ ಮುಗಿದು ಹೋಗಿದೆ, ರಮ್ ಹಾಗೂ ಜಿನ್ ಇದೆ. ಬ್ರಾಂದಿ ಕೂಡಾ ಇದೆ. ಅದನ್ನೇ ಕುಡಿತೀರಾ ?

ಇಲ್ಲ, ನನಗಿವತ್ತು ಏನೂ ಬೇಕಿಲ್ಲ. ನೀನು ಇದನ್ನ ತೊಗೊಂಡುಹೋಗು.

ಬೆರೆಸಿಬಿಟ್ಟಿದೀನಿ. ನೀವು ಕುಡಿದೇ ಹೋದ್ರೆ, ಬೇರಿನ್ಯಾರಾದರೂ ಕುಡೀತಾರೆ. ನೀವು ದುಡ್ಡು ಕೊಟ್ಟುಬಿಡಿ.

ಬಾರೀನ್‌ದಾನ ಈ ಕೆಲಸದಾಳನ್ನ ಎರಡೂ ಕಣ್ಣುಗಳಿಂದ ನೋಡೋಕಾಗೋದಿಲ್ಲ. ಬಾಯಿ ಜಾಸ್ತಿ. ಒಮ್ಮೊಮ್ಮೆ ಹಿಡ್ಕೊಂಡು ಎರಡು ಬಾರಿಸಬೇಕು ಅಂತ ಅನಿಸುತ್ತೆ. ಆದರೆ ಆ ಹಾಳು ಮುಖ ನೋಡಿದ್ರೆ ಧೈರ್ಯ ಬರೋದಿಲ್ಲ. ಪುನಃ ಮಾತಿನ ವ್ಯಯವಾಗಗೊಡದೆ ಹಣ ತೆಗೆದುಕೊಟ್ಟು ಗ್ಲಾಸನ್ನೆತ್ತಿಕೊಂಡೆ.

ಒಂದು ಗುಟುಕು ಗುಟುಕರಿಸುತ್ತಲೇ, ಬಾಯೆಲ್ಲಾ ಕಹಿ. ನಾನೆಂದೆ, ಏನು

ಹರೀಲಾಲ, ಇದೇನಿದು ? ದುಡ್ಡೇನೋ ಚೆನ್ನಾಗೇ ಇಸ್ಕೊಳ್ತೀಯಾ. ಪುನಃ ಕಳ್ಳಭಟ್ಟಿ ಬೆರಸಿದ್ದೀಯಾ.

ಏನು ಹೇಳ್ತಿದೀರಾ ? ಶುದ್ಧವಾದದ್ದನ್ನೇ ಕೊಟ್ಟಿದೀನಿ. ನೀವು ಹಳಬರಲ್ವೆ.....

ಬಾರೀನ್‌ದಾ ಕುಹಕದ ದನಿಯಲ್ಲಿ ಹೇಳಿದ, ನಿಜ, ಹರೀಲಾಲ್ ಮಾಡೋದು ಇದೇನೇ. ಒಮ್ಮೊಮ್ಮೆ ನನಗೂ ಇದೇ ರೀತಿಯ ಮಾಲನ್ನು ಕೊಟ್ಟುಬಿಡ್ತಾನೆ. ನನಗೂ ಕಳ್ಳಭಟ್ಟಿ ಬೆರೆಸಿದ್ದಾನೇನೋ ಅಂತ ಒಮ್ಮೊಮ್ಮೆ ಅನಿಸುತ್ತೆ. ನನಗೆ ಇನ್ನೊಂದು ಗ್ಲಾಸ್ ಕೊಡು.

ಇನ್ನೊಂದು ಗುಟುಕು ಕುಡಿದಾಗ ನನಗೆ ಪುನಃ ಇಷ್ಟವಾಗಲಿಲ್ಲ. ನಾನೆಂದೆ, ನಾನಿದನ್ನ ಕುಡಿಯೋದಿಲ್ಲ ಚೆಲ್ಲಿ ಬಿಡ್ತೀನಿ.

ಅವಿನಾಶ ಕೈಚಾಚಿ ಹೇಳಿದ, ಬಿಸಾಕ್ಬೇಡ, ನನಗೆ ಕೊಡು. ಅವನು ಗ್ಲಾಸ್ ಎತ್ತಿಕೊಂಡು ಒಂದೇ ಗುಟುಕಿಗೆ ಪೂರ್ತಿ ಕುಡಿದು ಎಡ ತೋಳನ್ನೆತ್ತಿ ತುಟಿ ಒರೆಸಿಕೊಂಡ. ಅವಿನಾಶನ ಹಣೆ ತುಂಬಾ ಬೆವರು, ಕೂದಲುಗಳು ನಿಮಿರಿದ್ದವು. ಮೂಗಿನ ಹೊಳ್ಳೆಗಳು ನಿಮಿರಿದ್ದವು. ಬೆನ್ನ ಹುರಿಯನ್ನ ನೆಟ್ಟಗೆ ಮಾಡಿಕೊಂಡು ಕುಳಿತು ಹೇಳಿದ, ಬ್ಲೈಂಡ್ ಒಂದು ರೂಪಾಯಿ ಹಿಟ್, ಒಪ್ಪಿಗೇನೆ ? ಬಾರೀನ್‌ದಾ ನಸುನಕ್ಕು ಹೇಳಿದ, ಒಪ್ಪಿಗೆ. ಅಪರಿಚಿತ ವ್ಯಕ್ತಿ ಬೇರೆ ಯಾವ ಮಾತನ್ನೂ ಆಡದವನು, ಗಂಭೀರ ದನಿಯಲ್ಲಿ ಒಪ್ಪಿಗೆ ಎಂದ.

ಸುವಿಮಲ ಹಾಗೂ ನೂರೂಲ್ ಕಿಟಕಿಯ ಬಳಿ ಮೌನವಾಗಿಯೇ ಕುಳಿತಿದ್ದರು. ನೂರೂಲ್ ಒಂದು ಸಿಗರೇಟ್ ತೆಗೆದುಕೊಂಡು ಅದನ್ನ ಎರಡು ಬೆರಳುಗಳ ಮಧ್ಯೆ ಹಿಡಿದು ಬೆಂಕಿಕಡ್ಡಿ ಚುಚ್ಚಿ, ಸಿಗರೇಟಿನ ಒಳಗಿನಿಂದ ತಂಬಾಕನ್ನು ಹೊರತೆಗೆದು, ನಂತರ ಬೇರಿನ್ನಾವುದೋ ಬೆರಸಿದ ಪುಡಿಯನ್ನ ಅದರೊಳಗೆ ತುಂಬಿಸಿದ. ನೂರೂಲ ನೆಂದ, ಏನು ಸುನೀಲ್ ಬಾಬು, ಒಂದು ದಂ ಸಿಗರೇಟ್ ಸೇದ್ತೀರಾ ? ಹೇಗೆ ?

ನಾನೆಂದೆ, ಇಲ್ಲ. ನಾನು ಗಾಂಜಾ ಸೇದೋದನ್ನ ಬಿಟ್ಟುಬಿಟ್ಟಿದೀನಿ.

ನೂರೂಲ್ ಮೆಲ್ಲನೆ ನಕ್ಕ. ಅವನ ನಗು ಬಹಳ ಮಧುರ.

ತಲೆತಗ್ಗಿಸಿ ಅವನೆಂದ, ಎಲ್ಲರೂ ಇದನ್ನೇ ಹೇಳೋದು ಬಿಟ್ಟುಬಿಟ್ಟಿದೀನಿ ಅಂತ. ಬಿಡಬೇಕಾದರೆ ತಮ್ಮನ್ನ ಕ್ವಾಲಿಫಾಯ್ ಮಾಡ್ಕೊಂಡಿದ್ದಾರಾ ಇಲ್ವಾ ಅನ್ನೋದನ್ನ ತಿಳಿದುಕೊಂಡಿರೋದಿಲ್ಲ. ಚೆನ್ನಾಗಿ ಪಟ್ಟಾಗಿ ಹಿಡ್ಕೊಂಡಿರೋದನ್ನ ಬಿಡೋದಾದ್ರು ಹೇಗೆ ? ಉಪನಿಷತ್ತಿನ ಕರ್ಮಕಾಂಡದಲ್ಲಿದೆ: "ಪರ್ಯಾಪ್ತ ಕಾಮಸ್ಯ ಕೃತಾತ್ಮನಸ್ತ ಇಹೇವ ಸರ್ವೇ ಪ್ರವೀಲಿಯುತಿ ಕಾಮಾಃ" ಅರ್ಥಾತ್ 'ಪಡಕೊಂಡ ಕಾಮ ವಿಷಯವನ್ನು ಭೋಗಿಸಬೇಕು. ಆಗಲೇ ಭೋಗ್ಯ ವಸ್ತುವಿನ ಸ್ವರೂಪ ಸ್ಪಷ್ಟವಾಗೋದು' ಅರ್ಥವಾಯ್ತಾ ? ಭೋಗ್ಯ ವಸ್ತುವಿನ ಸ್ವರೂಪ ತಿಳಿದಾಗಲೇ ಪ್ರಪಂಚದಲ್ಲಿ ಸಮಸ್ತ ಕಾಮನೆಯೂ ದೂರವಾಗಿ ಬಿಡುತ್ತದೆ. ಅದು ಬಿಟ್ಟು ಮೊದಲಿನಿಂದಲೂ ಇದನ್ನ ಕುಡಿಯೋದಿಲ್ಲ, ಅದನ್ನ ಮುಟ್ಟೋದಿಲ್ಲ, ಅದನ್ನ ಮಾಡೋದಿಲ್ಲ ಅಂದರೆ ಇದರಿಂದ ಆತ್ಮಶುದ್ಧಿಯಾಗುತ್ತದೆಯೇ ? ಪ್ರಪಂಚಕ್ಕೆ ಬಂದಿರೋದು ಸಾಧನೆ ಮಾಡಲೆಂದು. ಪೂರ್ತಿ ಸಾಧನೆಯನ್ನ ಮಾಡಿಯೇ

ಹೋಗಬೇಕು. ಮೊದಲು ಎಲ್ಲವನ್ನು ಪರೀಕ್ಷಿಸಿ ನೋಡಬೇಕು. ಯಾರು ಗಾಂಜಾ ಬಿಟ್ಟುಬಿಟ್ಟಿದೀನಿ ಅಂತಾರೋ, ಅವರು ಗಾಂಜಾ ಯಾವ ತರಹ ಇದೆ ಅನ್ನೋದನ್ನ ಅರ್ಥ ಮಾಡಿಕೊಂಡಿದ್ದಾರಾ ?

ನೂರೂಲ್ ಪ್ರತಿಯೊಂದು ಶಬ್ದವನ್ನೂ ಒತ್ತಿ ಒತ್ತಿ ಉಚ್ಚಾರಣೆ ಮಾಡುತ್ತಾನೆ. ನಾನು ಅವನ ಮಾತು ಕೇಳಿ ಸ್ವಲ್ಪ ನಕ್ಕೆ. ಸುವಿಮಲನೆಂದ, ಬೇಡ, ಸುನೀಲನಂತೂ ಗುಂಡು ಹಾಕೋದನ್ನ ಒಂದು ಚೂರೂ ಬಿಡೋದಿಲ್ಲ. ಆದರೆ ನೀನೇ ನೋಡ್ತಾ ಇದೀಯಲ್ಲ. ಅವನು ಕೃಶವಾಗಿದ್ದಾನೆ. ಮುಖ ಬತ್ತಿಹೋಗಿ ಅಮಾವಾಸ್ಯೆ ತರಹ ಆಗಿಹೋಗಿದೆ. ಅವನ ಗುಳಿಬಿದ್ದ ಗಲ್ಲ ನೋಡು. ಹಿಂದೆ ಅವನ ಮುಖ, ಪಂಜಾಬಿನ ಮೂಲಂಗಿಯಂತೆ ಕೆಂಪಗಿತ್ತು. ಗಾಂಜಾ ಸೇದೀ ಸೇದಿ ಈ ಪರಿಸ್ಥಿತಿ ಉಂಟಾಗಿದೆ. ಅದಕ್ಕೆ ಕಣ್ಣಿನ ಸುತ್ತು ಕಪ್ಪು ಮೂಡಿದೆ. ಒಮ್ಮೆ ಮಾರ್ಫಿಯ ತೊಗೊಂಡ ಕಾರಣ ತಲೆ ಕೂದಲೆಲ್ಲ ಉದುರಿ ಬೋಳಾಗಿದೆ...

ನಾನು ನಗುತ್ತ ಹೇಳಿದೆ, ಇರ್ಲಿ ಬಿಡೋ, ಖಂಡಿತವಾಗಿಯೂ ನಾನೆಂದೂ ಅಷ್ಟೊಂದು ಗುಂಡು ಹಾಕೋದಿಲ್ಲ. ಖಂಡಿತವಾಗಿಯೂ ನನ್ನ ಮುಖ ಅಷ್ಟೊಂದು ಕೆಟ್ಟಿಲ್ಲ. ಇವತ್ತೇ ಒಬ್ಬ ಹುಡುಗಿ ನನ್ನ ಮುಖದ ಬಗ್ಗೆ ಪ್ರಶಂಸೆ ಮಾಡಿದ್ದಾಳೆ.

ಸುವಿಮಲ ತಟ್ಟನೆ ಸರಿಯಾಗಿ ಸಾವರಿಸಿಕೊಂಡು ಕುಳಿತು ಹೇಳಿದ, ಇವತ್ತು ನೀನ್ಯಾವ ಹುಡುಗಿಯನ್ನು ಕಂಡೆಯಪ್ಪಾ ? ಇಡೀ ದಿನ ನಾನು ನಿನ್ನೊಂದಿಗೇನೇ ಇದ್ದೆ.....

ನಾನೆಂದೆ, ಬೆಳಗ್ಗೆ.

ಸುವಿಮಲ ಕಣ್ಣಗಲಿಸಿ ಜೋರಾಗಿ ಹೇಳಿದ, ಬೆಳಿಗ್ಗೆಯೇ ? ನೀನು ಬೆಳಗಾಗೆದ್ದು ಈ ನಡುವೆ ಹುಡುಗಿಯರನ್ನ ಹುಡುಕಿಕೊಂಡು ಹೋಗ್ತೀಯ ಅಂತ ಕಾಣುತ್ತೆ ? ಏನಮ್ಮಾ ಮರಿ ವಿಶೇಷ ? ನನಗೊಂದೂ ಅರ್ಥವಾಗ್ತಾ ಇಲ್ಲ ? ಹೌದೂ, ಬೆಳಗಿನ ಹೊತ್ತು ನಿನ್ನನ್ನ ನೋಡೋಕೆ ಹುಡುಗಿಯರೂ ಬರ್ತಾರಾ ?

ನಾನು ನೂರೂಲನ ಕಡೆ ತಿರುಗಿ ಪ್ರಶ್ನಿಸಿದೆ, ಸುವಿಮಲ ವಿಪರೀತ ಗುಂಡು ಹಾಕಿದಾನೆ ಅಂತ ಕಾಣುತ್ತೆ.

ನೂರೂಲ್ ಅದೇ ರೀತಿ ಮೃದುವಾಗಿ ನಕ್ಕು ಹೇಳಿದ, ತುಂಬಾ ಜಾಸ್ತಿ ಏನಿಲ್ಲಾ. ಆದರೂ ಹೀಗೆ ಆಗಿದ್ದಾನೆ. ನೀವೂ ಒಂದು ದಂ ಎಳೀತೀರಾ.

ಇಲ್ಲ ನೀವು ಸೇದಿ, ಇವತ್ತು ನನಗೆ ಮನಸ್ಸಿಲ್ಲ. ಆಲ್ಕೊಹಾಲಿನ ನಂತರ ನನಗೆ ಗಾಂಜಾ ಸಹ್ಯವಾಗೋದಿಲ್ಲ. ನಾನು ಎಲ್ಲವನ್ನು ಸ್ವಲ್ಪ ಸ್ವಲ್ಪ ರುಚಿ ನೋಡಿದ್ದೀನಿ. ಸರಿಯಾದ ಸ್ವರೂಪ ತಿಳಿದಿದ್ದೇನೋ, ಇಲ್ಲವೋ ಅನ್ನೋದು ಗೊತ್ತಿಲ್ಲ. ಆದರೂ ಅಂತಹಾ ಆಸಕ್ತಿ ಏನಿಲ್ಲ. ಇದ್ಯಾವುದರಿಂದಲೂ ನನ್ನ ಜೀವನ ಇನ್ನೂ ಸ್ವಲ್ಪ ಮುಂದೂಡಲ್ಪಡುತ್ತೆ ಅಂತ ನನಗನಿಸಿಲ್ಲ...

ಸುವಿಮಲ ತಗ್ಗಿದ ದನಿಯಲ್ಲಿ ಹೇಳಿದ, ಇವತ್ತು ಸ್ವಲ್ಪ ರುಚಿ ನೋಡು, ಜೀವನವೇ ಬದಲಾಗಿ ಬಿಡುತ್ತೆ. ನಾನು ಉತ್ತರಿಸಿದೆ, ಗಾಂಜಾ ಕುಡಿದು ಇಂದು ನಾನು ಸ್ವಪ್ನ ಕಾಣುವ ಪ್ರಮೇಯವೇನಿಲ್ಲ. ನಾನು ಇವತ್ತು ಈಗಾಗಲೇ ಬೇರೊಂದು

ಸ್ವಪ್ನವನ್ನು ಪಡೆದುಕೊಂಡಿದ್ದೇನೆ.

ನೂರೂಲನ ಮುಖ ಇನ್ನೂ ಬಾಡಿತ್ತು. ತುಂಬಾ ವಿಷಾದದ ದನಿಯಲ್ಲಿ ಅವನೆಂದ, ಇದೇ ನೋಡು ಇನ್ನೊಂದು ತಪ್ಪು. ಕನಸು ಕಾಣೋದಕ್ಕೆ ಗಾಂಜಾ ಯಾಕೆ ಸೇದಬೇಕು ? ಗಾಂಜಾ, ಗಾಂಜಾಕ್ಕೋಸ್ಕರವೇ ಸೇದಬೇಕು. ಯಾವ ರೀತಿ ಹೆಣ್ಣಿನ ಬಳಿ ಈಶ್ವರೀ ಪ್ರಕೃತೀನ ಹುಡುಕಲು ಹೋಗದೆ ಹೆಣ್ಣಿಗಾಗಿಯೇ ಹೋಗ್ತೀಯೋ ಆ ರೀತಿ ರೂಪವನ್ನ ರೂಪಾಂತರಗೊಳಿಸುವ ಯಾವೊಂದು ಪ್ರಯತ್ನವೂ ಬೇಡ. ಪ್ರತಿಯೊಂದು ಅಸ್ತಿತ್ವದಲ್ಲೂ ಸತ್ಯವಿದೆ, ಶುದ್ಧ ಸೌಂದರ್ಯವಿದೆ. ಅದನ್ನು ಇತರ ವಸ್ತುವಿನೊಡನೆ ಹೋಲಿಸುವುದಾಗಲಿ, ಬೇರೆ ಇನ್ಯಾವ ಆರೋಪವನ್ನು ಮಾಡುವುದಾಗಲಿ ಮಾಡದೆ, ಅದನ್ನು ಮೂಲದವರೆಗೂ ಆಸ್ವಾದ ಮಾಡೋದೇ ಉಚಿತ. ಇದನ್ನೇ ಆ ಮಹರ್ಷಿ ಆರುಣಿ ಶ್ವೇತಕೇತುವಿಗೆ ಹೇಳಿದ್ದು, ತ್ವಾಂ ಹೋವಾಚ ......

ಸುವಿಮಲ ಒಮ್ಮೆಗೇ ನಿದ್ದೆಯಿಂದ ಎಚ್ಚೆತ್ತವನಂತೆ ಹೂಂಕಾರ ಮಾಡಿ ಹೇಳಿದ. ಹಾ ಸುಟ್ಟುಬಿಡಿ, ಈ ಬಡ್ಡೀ ಮಗನ್ನ. ಅಪ್ಪಟ ಮುಸಲ್ಮಾನ, ಈ ನಡುವೆ ಮಾತು ಮಾತಿಗೆ ಸಂಸ್ಕೃತ ಜೋಡಿಸ್ತಾನೆ. ಏಯ್, ನೂರೂಲ್ ಬಡ್ಡೀ ಮಗನೆ, ಮುಸಲ್ಮಾನ ಬಚ್ಚಾ. ನೀನು ಇಷ್ಟೊಂದು ಸಂಸ್ಕೃತ ಉಪಯೋಗಿಸುವ ಪ್ರಮೇಯವೇನೋ ? ಒಂದು ದಿನ ಹಲ್ಲು ಮುರಿಸ್ಕೋತೀಯ, ಹೇಳಿದೀನಿ ನೋಡು. ಈಗ್ಲಾದರೂ ಅದನ್ನ ಬಿಡು.

ನೂರೂಲನೆಂದ, ನೀನು ಸುಮ್ಮನಿರು ಬಡ ಬ್ರಾಹ್ಮಣ. ಹುಗ್ಗಿ ತಿಂದೂ ತಿಂದೂ ನಿನ್ನ ರಕ್ತ ಕೂಡಾ ಹಲ್ಲಿ ತರಹ ಬಿಳಿ ಮಾಡಿಕೊಂಡಿದೀಯ. ಪುನಃ ಹಿಂದೂತನವನ್ನ ಪ್ರಾರಂಭಿಸಬೇಡ. ನನ್ನ ಹಾಗೂ ಸುನೀಲ್ ಬಾಬುವಿನ ನಡುವೆ ಜ್ಞಾನದ ಬಗ್ಗೆ ವಿಚಾರ ವಿನಿಮಯವಾಗ್ತಾ ಇದೆ. ನೀನು ಇದರ ನಡುವೆ ತಲೆ ಹಾಕೋಕೆ ಬರಬೇಡ, ಮೂರ್ಖ ?

ಸುವಿಮಲ ಕಣ್ಣು ಮಿಟುಕಿಸಿ, ಇರು ಒಂದು ದಿನ ಚೂರಿ ತೊಗೊಂಡು ನಿನ್ನ ಹೊಟ್ಟೆ ಬಗೆದು ಹಾಕಿ ಬಿಡ್ತೀನಿ. ಕೊಡು, ಕೊಡು ಸಿಗರೇಟನ್ನ ಒಂದು ಸಲ ಸೇದಿ ಕೊಡ್ತೀನಿ.

ನೂರೂಲ್ ಸಿಗರೇಟನ್ನು ಅವನಿಗೇ ಕೊಟ್ಟು, ಮೆಲುದನಿಯಲ್ಲಿ ಹೇಳಿದ, ಒಂದು ದಿನ ಇದರಲ್ಲಿ ಗಾಂಜಾ ಬದಲಿಗೆ ವಿಷ ತುಂಬಿ ನಿನಗೆ ಕೊಡ್ತೀನಿ.

ಸುವಿಮಲ ಮುಷ್ಠಿಯನ್ನು ಬಿಗಿ ಮಾಡಿ, ಬೆರಳುಗಳ ನಡುವೆ ಸಿಗರೇಟನ್ನ ತುರುಕಿಸಿಕೊಂಡು ಒಂದು ದೀರ್ಘ ದಂ ಎಳೆದುಕೊಂಡ. ಆನಂತರ ಹೊಗೆಯನ್ನು ಹೊರ ಬಿಡದೆ, ಹೊಗೆ ಬಾಯಲ್ಲಿ ತುಂಬಿಕೊಂಡೇ ಪಿಸುಗುಟ್ಟಿದ, ಕೊಡಪ್ಪ, ಅದನ್ನೇ ಕೊಡು. ನಿನ್ನ ಕೈಯಿಂದಲೇ ವಿಷ ಕುಡೀತೀನಿ. ಅಷ್ಟು ಧೈರ್ಯ ಇಲ್ಲ ಅಂತ ಅಂದ್ಕೊಂಡಿದೀಯಾ. ನೀನೇ ಒಂದು ವೇಳೆ ಕೈ ಎತ್ತಿ ಕೊಟ್ಟರೆ, ಥಟ್ಟನೆ ಎತ್ತಿ ಕುಡಿದು ಬಿಡುತ್ತೇನೆ. ಕುಡಿದು ನಾನೂ ಸಾಯ್ತೀನಿ. ನಿನ್ನನ್ನೂ ಗಲ್ಲಿಗೆ ನೇತ್ಹಾಕಿಸ್ತೀನಿ. ಆಗ ಸಮಸ್ಯೆ ಬಗೆಹರಿಯುತ್ತೆ.

ನಾನು ನೂರೂಲನಿಗೆಂದೆ, ನೀನು ಹೇಳೋದೇನೋ ಸರಿ. ಆದರೆ ವಸ್ತುವಿನ ರೂಪವನ್ನು ರೂಪಾಂತರಗೊಳಿಸದೆ ಬದುಕೋದು ತುಂಬಾನೇ ಕಷ್ಟ. ಆ ರೀತಿ ಬದುಕೋಕೆ ತುಂಬಾನೇ ಸಾಧನೆ ಅಗತ್ಯ. ಹಿಂದೆ ಆದಿಕಾಲದಲ್ಲಿ ಮನುಷ್ಯ ಸಂಕೇತಗಳನ್ನ ಪೂಜಿಸುತ್ತಿದ್ದ. ಈಗಲೂ, ಅದರ ಪ್ರಭಾವವನ್ನು ನಾವು ಕಾಣ್ತಾನೇ ಇದೀವಿ. ನದೀನ ಕಂಡಾಗಲೆಲ್ಲ ನನಗೆ ನೃತ್ಯ ಚಂಚಲೆ ಹೆಣ್ಣು ನೆನಪಿಗೆ ಬರ್ತಾಳೆ. ಅದೇ ರೀತಿ ಹೆಣ್ಣನ್ನು ಕಂಡಾಗ ನದಿಯು ನೆನಪಾಗುತ್ತೆ. ಸೂರ್ಯಕಿರಣಗಳನ್ನು ಕಂಡಾಗಲೂ ಅಷ್ಟೆ, ಸಾಣೆ ಹಿಡಿಯುವಾಗ ಹಾರೋ ಬೆಂಕಿ ಕಿಡಿ ನೆನಪಾಗುತ್ತೆ ಪುನಃ ಆ ಹಾರೋ ಕಿಡಿಗಳನ್ನು ಗಮನಿಸಿದಾಗ ಸೂರ್ಯನ ಕಿರಣ ನೆನಪಾಗುತ್ತೆ. ಈ ರೀತಿ ಹೋಲಿಕೆ ಮಾಡಿ ನೋಡ್ತಾ ನನ್ನಿಂದ ಯಾವುದನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳೋಕೆ ಸಾಧ್ಯವೇ ಆಗಿಲ್ಲ. ಇನ್ನು ಯಾವುದೇ ವಸ್ತುವಿನ ಮೂಲವನ್ನು ನನ್ನಿಂದ ಕಾಣೋದಾದ್ರು ಹೇಗೆ ಹೇಳು? ನನ್ನ ಕಣ್ಣುಗಳಂತು ಸದಾ ಚಂಚಲವಾಗಿರುತ್ತವೆ, ಬೇರೊಂದರ ಪ್ರಭಾವ ಅದರ ಮೇಲೆ ಇದ್ದೇ ಇರುತ್ತೆ. ಆದಕ್ಕೆ ಹೇಳೋದು ಮೊದಲು ತನ್ನತನದ ಅರಿವು ಒಳ್ಳೆಯದು ಅಂತ. ಹಾಗೇನಾದ್ರು ಒಂದು ವೇಳೆ ವೈಯಕ್ತಿಕವಾಗಿ ತಪ್ಪು ಅಭಿಪ್ರಾಯಗಳಿದ್ದಾಗಲೂ, ಇತಿಹಾಸದಿಂದ ಮೊದಲು ನಮ್ಮನ್ನು ನಾವೇ ಬೇರ್ಪಡಿಸಿಕೊಳ್ಳದ ಹೊರತು ವಸ್ತುವಿನ ಮೂಲದ ತನಕ ಹೋಗೋ ದಾರಿ ಗೋಚರಿಸೋದಿಲ್ಲ. ನೋಡಪ್ಪ ಹಣ್ಣನ್ನು ಬಿಡಿಸಿ ನೋಡಿದ್ರೆ ಒಳಗೆ ಬೀಜ ಇರುತ್ತೆ. ಆ ಬೀಜ ತೆಗೆದುಬಿಡಿ, ಒಳಗೇನೂ ಇರೋದೇ ಇಲ್ಲ. ಅದೇ ತರಹ ಹೂಕೋಸನ್ನೋ, ಈರುಳ್ಳೀನೋ ಪದರ ಪದರವಾಗಿ ಬಿಡಿಸ್ತ ಹೋಗಿ, ಅದರೊಳಗೂ ಏನೂ ಇರೋದಿಲ್ಲ. ಎಲ್ಲೂ ಏನೂ ಇಲ್ಲ ಅನ್ನೋದನ್ನು ತಿಳ್ಕೋಳ್ಳೋದಕ್ಕಾಗಿ ನಾವು ಪ್ರತಿಯೊಂದನ್ನು ಪ್ರತ್ಯೇಕಿಸಿ ನೋಡಲೇ ಬೇಕು.

ಹಾಗೆ ಎಲ್ಲವನ್ನೂ ನೋಡುತ್ತ ಹೋದರೆ, ಎಲ್ಲೋ ಒಂದು ಸ್ಥಿರ ಕೇಂದ್ರವನ್ನು ಇಟ್ಟುಕೊಳ್ಳುವುದು ಉಚಿತ. ಬೇಕಾಬಿಟ್ಟಿ ದೃಷ್ಟಿಯಲ್ಲಿ ನೋಡೋಕಾಗೋದಿಲ್ಲ. ಆದರೆ ಆ ಕೇಂದ್ರವನ್ನು ಏನಂತ ಕರೆಯೋದು, ಪ್ರೀತಿ ಅಂತಲೆ?

ಪ್ರೀತಿ ಏನೋ ನಿಜ. ಆದರೆ ಯಾವುದು? ಸ್ವಂತಕ್ಕೋ ಅಥವಾ ನೀವು ಹೆಣ್ಣು ಮಕ್ಕಳ ಬಗ್ಗೆ ಹೇಳ್ತಾ ಇದೀರೋ?

ತನ್ನನ್ನೇ ಪ್ರೀತಿಸೋ ವಿಷಯ ಯಾರ ಮನಸ್ಸಿನಲ್ಲೂ ಇರೋದಿಲ್ಲ. ತನ್ನನ್ನೇ ತಾನು ಪ್ರೀತಿ ಮಾಡೋದು ಅಂದ್ರೆ ಅರ್ಥ ಗೊತ್ತಾ? ಗಾಳಿಯ ಅಸ್ತಿತ್ವ ಮತ್ತು ನೀರಿನ ಬಣ್ಣ ಹಾಗೂ ಬಿಸಾಕಿದ ಬೀಜ ಇವುಗಳ ಗತಿಯ ಹಾದಿಯ ತರಹ, ಇವುಗಳ ಸರಿಯಾದ ಸುಳಿವು ತಿಳಿಯಲು ಸಾಧ್ಯವಿಲ್ಲ. ಇತರ ಅನ್ಯ ವಸ್ತುವಿನೊಂದಿಗೆ ಸಂಪರ್ಕಿಸುವುದು ಅತ್ಯಾವಶ್ಯಕ. ಆ ಅನ್ಯ ವ್ಯಕ್ತಿ ಸ್ತ್ರೀಯಾಗಿದ್ದರೇನೇ ಒಳ್ಳೆಯದು. ಸ್ತ್ರೀಯರು ಕಲ್ಲಿನ ದೇವತೆಗಳ ತರಹ, ಅವರು ವಿಚಲಿತರಾಗೋದಿಲ್ಲ. ತಮ್ಮ ಬಳಿಯೇ ತಮ್ಮನ್ನು ಪುನಃ ಪುನಃ ಪ್ರಕಾಶಗೊಳಿಸಿಕೊಳ್ಳಲೆತ್ನಿಸುತ್ತಾರೆ. ಒಮ್ಮೆ ಹಾಸಿಗೆಯಲ್ಲಿ ಮಲಗಿ ಮಗುವಿಗೆ ಜನ್ಮ ಕೊಡೋದು ತಮ್ಮನ್ನೇ ಪ್ರಕಾಶಗೊಳಿಸಿಕೊಳ್ಳುವುದು, ಇನ್ನೊಮ್ಮೆ ದೇವಸ್ಥಾನಕ್ಕೆ ಹೋಗಿ ರಹಸ್ಯವಾಗಿ

ಪ್ರಾರ್ಥಿಸುವಂತೆ. ಈ ವಿಷಯ ನನಗೆ ಇದೀಗ ಹೊಳೆಯಿತು ಗೊತ್ತಾ, ಹಿಂದೆ ಎಂದೂ ಈ ರೀತಿ ಯೋಚಿಸಿರಲಿಲ್ಲ.

ನೂರೂಲ್ ನಕ್ಕು ಹೇಳಿದ, ಗಾಂಜಾ ಸೇದದೆಯೂ ಈ ಎಲ್ಲ ವಿಷಯ ಮನಸ್ಸಿಗೆ ಅರ್ಥವಾಗುತ್ತೆ ಅಲ್ವಾ ? ಸುಮ್ಮ ಸುಮ್ಮನೆ ಅನ್ನಿಸಿ ಬಿಡುತ್ತಾ ?

ನಾನು ನಕ್ಕು ಉತ್ತರಿಸಿದೆ, ಇಷ್ಟೆಲ್ಲಾ ಗಾಂಜಾ ಸೇದಿ ಮಾತನಾಡಿದ್ದಾನೆ, ಇಲ್ಲದಿದ್ದರೂ ಸಾಧ್ಯ. ಆದರೆ ಯಾವಾಗ ನಾನು ಗಾಂಜಾ ಸೇದ್ತೀನೋ ಆಗ ನನ್ನ ಮನಸ್ಗೆ ಯಾವೊಂದು ವಿಚಾರವೂ ಹೊಳೆಯೋದಿಲ್ಲ. ಮೈ ಕೈ ನೋವು, ಗಂಟಲು ಒಣಗೋದು ಹಾಗೂ ಕಣ್ಣಲ್ಲಿ ಹಲವು ಬಣ್ಣದ ಡಿಸೈನ್‌ಗಳನ್ನು ಮಾತ್ರ ಕಾಣ್ತೀನಿ. ನೀನು ತಯಾರಿಸಿರೋ ಚಿಲುಮೆಯನ್ನ ಒಮ್ಮೆ ಕೊಡು, ಹೊಗೆ ಸೇದಿ ಕೊಡ್ತೀನಿ.

ನೂರೂಲ್ ಕೈ ಚಾಚಿ, ಇನ್ನೇನು ಮುಗಿಯಲು ಬಂದಿದ್ದ ಸಿಗರೇಟನ್ನು ಕೊಟ್ಟ. ನಾನು ಆನಂತರ ಒಂದೆರಡು ದೀರ್ಘ ಹೊಗೆ ಎಳೆದು ಜೋರಾಗಿ ಕೆಮ್ಮಿದೆ. ವಿಶೇಷವಾದ್ದೇನೂ ಕಂಡುಬರಲಿಲ್ಲ. ಕೇವಲ ಬರೀ ಸಿಗರೇಟಿನ ತಂಬಾಕು. ನಾನೆಂದೆ, ಇದರಲ್ಲಿ ಏನೂ ಇಲ್ಲ ಬರೀ ಸೋಡಾ.

ಇನ್ನೊಂದನ್ನ ಮಾಡಲಾ ?

ಇಸ್ಪೀಟಿನ ಟೇಬಲ್ಲಿನಿಂದ ಗಲಾಟೆ ಕೇಳಿ ಬಂತು. ಎಲ್ಲರಿಗಿಂತ ತಾಪಸ್‌ನ ಸ್ವರ ಜೋರಾಗಿತ್ತು. ಹಾಂ ಮೋಸಗಾರ. ನಂಬೋದಿಕ್ಕಾಗೋದಿಲ್ಲ, ಬರೀ ಮೋಸ.

ಬಾರೀನ್‌ದಾ ಗಡಸು ದನಿಯಲ್ಲಿ ಹೇಳಿದ, ಮೋಸವೇ ?

ತಾಪಸ್ ಸಿಡಿಮಿಡಿಗೊಂಡು ಹೇಳಿದ, ಇಲ್ಲ, ಮತ್ತಿನ್ನೇನು ? ನೀನು ಮೋಸ ಮಾಡ್ತಾ ಇದೀಯ. ದೇವರೇ ! ಹೀಗಾ ಮೋಸ ಮಾಡೋದು ? ನಾನೂ ಕೈ ಎತ್ತಬಹುದಿತ್ತು. ಆದರೆ ಸುಮ್ಮನೆ ನಾನು ರನ್ ತೆಗೆದುಕೊಂಡು ಕೂತ್ಕೊಂಡಿದೀನಿ. ನಾನಿನ್ನು ಆಟ ಆಡೋದಿಲ್ಲ. ನನ್ನ ಎಲ್ಲಾ ಹಣ ಮುಗಿದಿದೆ. ನಾನಿನ್ನು ಮನೆಗೆ ಹೊರಟೆ.

ಮನೆಗೆ ಹೊರಟೆಯಾ ?

ಅವಿನಾಶನೆಂದ, ಕೂತ್ಕೋಬಾರದೆ. ಎಲ್ಲಿಗೆ ಹೊರಟೆ ? ಆಟ ರಂಗೇರಿದೆ. ಹೀರಾಲಾಲ್ ನನಗಿನ್ನೊಂದು ಗ್ಲಾಸ್ ತಂದ್ಕೊಡು ನೋಡೋಣ. ತಾಪಸ್ ಎದ್ದು ಹೇಳಿದ, ಇಲ್ಲ, ನೀವು ಆಟ ಆಡಿ, ನಾನು ಹೋಗ್ತೀನಿ.

ಈಗಲೇ ಹೋಗ್ತೀಯಾ ?

ಇಷ್ಟರ ಮೇಲೆ ಮನೆಗೆ ಹೋದರೆ, ಛಾಯಾ ತುಂಬಾ ಅತ್ತು ಕರೆದು ರಂಪಾಟ ಮಾಡ್ತಾಳೆ. ಪಾಪ ಒಬ್ಳೇ ಇರ್ತಾಳೆ, ಗಂಟೆ ಹನ್ನೊಂದೂವರೆಯಾಗ್ತಾ ಬಂತು.

ಅಪರಿಚಿತ ವ್ಯಕ್ತಿ ಬೂಟಿನ ಲೇಸನ್ನು ಕಟ್ಟಿಕೊಳ್ಳುತ್ತಿದ್ದ. ಅವನೂ ಎದ್ದು ನಿಂತು ಹೇಳಿದ, ನಾನೂ ಹೋಗ್ತೀನಿ, ಪುನಃ ನಾಳೆ ಬರ್ತೀನಿ. ಅಪರಿಚಿತ ವ್ಯಕ್ತಿ ಬಹಳ ನಿಗೂಢ ವ್ಯಕ್ತಿ. ಇಷ್ಟುಹೊತ್ತು ಒಂದು ಮಾತನ್ನೂ ಆಡಿರಲಿಲ್ಲ. ಜೂಜಿನ ಪಣವನ್ನು ಹೇಳೋದೊಂದನ್ನು ಬಿಟ್ಟು. ಆತ ಬಂದದ್ದು ಕೇವಲ ಆಟವಾಡಲು ಮಾತ್ರ. ಆಟ ಮುಗಿದೊಡನೆ ಹೊರಟುಹೋದ. ಕೋಣೆಯ ಇತರ ವ್ಯಕ್ತಿಗಳ ಬಗೆಗೆ ಅವನು

ಯಾವೊಂದು ಕುತೂಹಲವನ್ನೂ ಪ್ರಕಟಿಸಿರಲಿಲ್ಲ. ನಾನು ಕಣ್ಣ ಸನ್ನೆಯಿಂದಲೇ ಪ್ರಶ್ನಿಸಿದೆ, ಯಾರೋ ಅದು ? ಅವಿನಾಶ ಬೇಸರದಿಂದ ನಿರ್ಲಿಪ್ತನಾಗಿ ಉತ್ತರಿಸಿದ, ಯಾರಿಗ್ಗೊತ್ತು ? ತಾಪಸ್ ಎಲ್ಲಿಂದಲೊ ಅವನನ್ನ ಎಳ್ಕೊಂಡು ಬಂದಿದ್ದಾನೆ.

ಬಾರೀನ್‌ದಾ ಹಣ ಎಣಿಸಿಕೊಳ್ಳುತ್ತಿದ್ದ. ಇನ್ನು ಆಟ ಆಯ್ತು ತಾನೇ ಎಂದ. ಅವಿನಾಶ ಒಂದೇ ಗುಟುಕಿಗೆ ಗ್ಲಾಸ್ ಖಾಲಿ ಮಾಡಿ ಹೇಳಿದ, ಹೌದು, ಖಂಡಿತವಾಗಿಯೂ ಆಟ ಮುಂದುವರೆಯುತ್ತೆ ನನ್ನ ಮತ್ತು ನಿನ್ನ ನಡುವೆ.

ನಾನೆಂದೆ, ಅವಿನಾಶ ನಾನಂತೂ ಈಗ ಮನೆಗೆ ಹೋಗ್ತೀನಿ. ನನಗ್ಯಾಕೋ ಇಷ್ಟವಾಗ್ತಾ ಇಲ್ಲ.

ಅವಿನಾಶ ವಿನಂತಿಸಿಕೊಂಡ, ಇಲ್ಲ ನೀನು ಹೋಗಬೇಡ. ದಯವಿಟ್ಟು ಸ್ವಲ್ಪ ಹೊತ್ತು ಕೂತ್ಕೊ, ಒಂದೆರಡು ಆಟ ಆಡೋಣ.

ಇಲ್ಲ ರಾತ್ರಿ ತುಂಬಾ ಹೊತ್ತಾಗಿಬಿಟ್ಟಿದೆ. ಈಗ ಇನ್ನು ಮನೆಗೆ ಹೋಗದಿದ್ದರೆ–

ಅವಿನಾಶನ ದನಿ ನಶೆಯಿಂದ ತುಂಬಿತ್ತು. ದನಿಯಲ್ಲಿ ಕಾರುಣ್ಯ ತುಂಬಿತ್ತು. ಅವನೆಂದ, ಅದೇನದು ಮನೆ, ಮನೆ ಅಂತ ಹೊಡ್ಕೊಳ್ತೀಯ. ಇಷ್ಟ ಇಲ್ಲ ತಾನೇ ಹೋಗು. ಅದೇ ದಿನಾ ಇದ್ದದ್ದೇ ರಗಳೆ. ಮನೆಗೆ ಹಿಂತಿರುಗೋದು, ಅದೇ ಹಳೇ ಕಂಚಿನ ತಟ್ಟೆಯಲ್ಲಿ ಅನ್ನ ತಿನ್ನೋದು, ಅಜ್ಜಿ ಮದುವೇನಲ್ಲಿ ಕೊಟ್ಟಿದ್ದ ಮಂಚದ ಮೇಲೆ ಹೋಗಿ ಮಲಗೋದು. ಓಹ್ ! ಇನ್ನು ಸಾಧ್ಯವಿಲ್ಲ. ಬೆಳಗಾಗೆದ್ದು ಶೇವ್ ಮಾಡಿಕೊಳ್ಳೋದು, ಆಫೀಸು, ಮನೆಗೆ ಹಿಂತಿರುಗೋದು. ಅಮ್ಮ ಅಪ್ಪ, ಚಿಕ್ಕಮ್ಮ ಅತ್ತೆ, ಅವರೂ, ಇವರೂ ಇವರದೇ ಬರೀ ಸುದ್ದಿ. ಕೊಡು ಬಾರೀನ್‌ದಾ ಕೊಡು, ಇಸ್ಪೀಟಿನ ಎಲೆ ಕೊಡು. ನಿನಗೋಸ್ಕರವೇ ಬದುಕಿರೋದು. ಆದರೂ ಇಲ್ಲಿಗೆ ಬಂದರೆ ಪಿತ್ತ ನೆತ್ತಿಗೇರುತ್ತೆ. ಅವಿನಾಶ್ ನೀನು ಆಡು, ಸುವಿಮಲನಂತೂ ಇದ್ದಾನೆ. ನಾನಂತೂ ಹೊರಟೆ.

ಅವಿನಾಶ ನೆಟ್ಟಗೆ ಕುಳಿತು, ಥಟ್ಟನೆ ನನ್ನ ಕೈ ಹಿಡಿದು ಕರುಣೆ ತುಂಬಿದ, ಅಳು ದನಿಯಲ್ಲಿ ಬೇಡಿಕೊಂಡ, ನಿನ್ನ ಕಾಲು ಹಿಡೀತೀನಿ, ದಮ್ಮಯ್ಯ ಅಂತೀನಿ, ಕೂತ್ಕೋಳಯ್ಯ. ಇನ್ನೊಂದು ಮೂರ್ನಾಲ್ಕು ಆಟ, ಆಮೇಲೆ ಮನೆಗೆ ಹೊರಡೋಣ. ಮನೆಗೆ ಹೋಗೋದೋ ಬೇಡ್ವೋ ಅಂತ ಯೋಚಿಸ್ತಿದೀನಿ. ಇದಾದ ಮೇಲೆ ನಿನ್ನನ್ನು ಇನ್ನೊಂದು ಜಾಗಕ್ಕೆ ಕರ್ಕೊಂಡು ಹೋಗೋಣ ಅಂತ ಇದೀನಿ. ನಿನ್ನನ್ನು ಕರ್ಕೊಂಡು ಹೋಗ್ತೀನಿ, ನೋಡುವಿಯಂತೆ ಮಜಾ.

ಸುವಿಮಲ, ನೂರೂಲ್‌ನ ಜೊತೆ ಆ ಕಡೆ ಕುಳಿತು ಗುಸುಗುಸು ಮಾತನಾಡುತ್ತಾ ಇದ್ದಾನೆ. ಅವನಿಗೆ ಬಹಳ ಮತ್ತೇರಿತ್ತು. ಬಾರೀನ್‌ದಾ ಪುನಃ ಮೂರು ಎಲೆಗಳನ್ನು ಹಂಚಿದ. ನಾನು ಮಂಚದ ಮೂಲೆಗೆ ಸರಿದು ನಿಂತುಕೊಂಡೆ, ಏಕೆಂದರೆ ಅವರಿಬ್ಬರಲ್ಲಿ ಯಾರೊಬ್ಬರ ಕೈಗಳೂ ಕಾಣಬಾರದೆಂದು.

ಅವಿನಾಶ ಕಿರುಚಿಕೊಂಡ, ಅದೇನದು ಮೊದಲು ನೀನು ಮೂರು ಎಲೆ ಹಾಕ್ಕೊಂಡಿದ್ದೆ, ಈ ಸಲ ನಾಲ್ಕೆಲೆ ? ಬಾರೀನ್‌ದಾ ನಕ್ಕು ಹೇಳಿದ, ನಿನಗೆ ಗೊತ್ತಾಯ್ತೋ ಇಲ್ಲವೋ ಅಂತ ನೋಡಿದೆ.

ಅವಿನಾಶನೆಂದ, ಬಾರೀನ್‌ದಾ ಈಗಿರೋದು ನಾವಿಬ್ಬರೇನೇ ಪೂಲ್ ಹಣವನ್ನು ಹೆಚ್ಚಿಸೋಣ. ಒಂದೋ, ಎರಡೋ ರೂಪಾಯಿ ಒಪ್ಪಿಗೇನೇ ? ಸರಿ ಹಾಗಾದ್ರೆ ಕೊಡು ನಿನ್ನ ಹಣಾನ.

ಅವಿನಾಶ ಎಲೆಗಳನ್ನು ಕೈಗೆತ್ತಿಕೊಳ್ಳದೆ ಹೇಳಿದ, ಬ್ಲೈಂಡ್. ಬಾರೀನ್‌ದಾ ಕೂಡಾ ಎಲೆ ಎತ್ತಿಕೊಳ್ಳದೆ ಹೇಳಿದ, ಒಂದು, ಎರಡು, ಮೂರು. ಅವನು ಎಲೆ ಎತ್ತದೆಯೇ ಹೇಳಿದ, ಶೋ. ಅವಿನಾಶ ಸ್ವಲ್ಪ ಚಕಿತನಾಗಿ ಕೆಂಪುಗಣ್ಣಿನಿಂದ ನೋಡಿದ. ನಾಲ್ಕು ಎಲೆಗಳ ಮಧ್ಯದಲ್ಲಿ ಶೋ. ಅವಿನಾಶ ತನ್ನ ಎಲೆಗಳನ್ನ ತಿರುಚಿ ಹಾಕಿದ. ಅವನಿಗೆ ಎಲ್ಲ ಎಗಳೇ ಬಂದಿದ್ದವು. ಬಾರೀನ್‌ದಾಗೆ ಬರೀ ರಾಣಿಗಳೇ.

ಅವಿನಾಶ ಹಣವನ್ನ ಬಾಚಿ ತೆಗೆದುಕೊಂಡು ಬಡಬಡಿಸಿದ. ನೀನು ತುಂಬಾ ವಿಚಿತ್ರ ವ್ಯಕ್ತಿ ಬಾರೀನ್‌ದಾ. ನಿನಗೆ ಅದೃಷ್ಟ ಕೈ ಕೊಟ್ಟಾಗ, ಅದು ಹೇಗೆ ಎಲೆ ನೋಡದಲೇ ಗೊತ್ತಾಗಿಬಿಡುತ್ತೆ ಹೇಳು ನೋಡೋಣ. ಬಾರೀನ್‌ದಾ ಒಣನಗೆ ನಕ್ಕು ಹೇಳಿದ, ಎಲೆ ಕುಲುಕುವಾಗಲೇ ನನಗೆ ಯಾರೋ ಪಿಸುಗುಟ್ಟಿದಂತಾಗುತ್ತೆ. ಎಲೆ ಹಂಚಿದ ಮೇಲೂ ನಾನು ಸ್ವಲ್ಪ ಹೊತ್ತು ಕುಳಿತೇ ಇರುತ್ತೇನೆ. ಏನಾದರೂ ಕೇಳುತ್ತೋ ಏನೋ ಅಂತ. ಯಾವಾಗ, ಏನೂ ಸುಳಿವು ಸಿಗೋದಿಲ್ಲವೋ ಆಗ ಸೋಲು ಗೆಲುವು ಕೂಡಾ ಖಚಿತವಾಗಿರೋದಿಲ್ಲ. ಹಿಂದಿನಿಂದ ಮನುಷ್ಯನ್ನ ಗುರುತಿಸೋದು ಕಷ್ಟ. ಆದರೆ ಎಲೆ ಆಟದಲ್ಲಿ ನಾನು ಹಿಂದಿನಿಂದಲೇ ಗುರುತಿಸಬಲ್ಲೆ.

ಏನಾದ್ರೂ ಗುರುತೂ ಗಿರುತೂ ಮಾಡ್ಕೊಂಡಿದೀಯಾ ಹೇಗೆ? ಅವಿನಾಶ ಪ್ಯಾಕ್‌ನಿಂದ ಇನ್ನೊಂದು ಎಲೆಯನ್ನು ತೆಗೆದು ಗಮನವಿಟ್ಟು ನೋಡಿದ. ಅದೆಲ್ಲ ಇಲ್ಲ ಕಣೋ ಅಂಥಾದ್ದಲ್ಲ. ನಾನಂತೂ ಜೂಜಾಡೋದಿಲ್ಲ. ನಾನು ಆಡೋದು ಇಸ್ಪೀಟ್ ಆಟ. ಹನ್ನೆರಡು ತಿಂಗಳು ಇಸ್ಪೀಟೇ ನನ್ನ ಪ್ರಪಂಚ. ಯಾವ ರೀತಿ ಪ್ರಪಂಚದಲ್ಲಿ ಇತರರು ಇನ್ನೊಬ್ಬರ ಕಣ್ಣಿಗೆ, ಕೆಟ್ಟವರಾಗಿ ಕಾಣ್ತಾರೆ ಹಾಗೆ ಆದರೆ ಅವರವರ ವಠಾರದಲ್ಲಿ ಅವರು ಒಳ್ಳೆಯವರಾಗಿದ್ದು, ಎಲ್ಲರಿಗೂ ಇಷ್ಟವಾಗಬಹುದು. ಕೆಲವೊಬ್ಬರು ಹೆಂಡತಿಯ ಮುಂದೆ ದೊಡ್ಡ ಹೆದರು ಪುಕ್ಕರಾಗಿರಬಹುದು. ಆದರೆ ವಠಾರದಲ್ಲಿ ಒಳ್ಳೆ ಹೆಸರು ಪಡೆದಿರಬಹುದು.

ಆಫೀಸಿನಲ್ಲಿ ಯಾರು ಒಂದನೇ ನಂಬರ್ ವೈಗಳ್ಳರಾಗಿರ್ತಾರೋ, ಅವರೇ ತಮ್ಮ ಕ್ಲಬ್‌ಗಾಗಿ ಜೀವ ಕೂಡಾ ಕೊಡಬಲ್ಲರು. ಅದೇ ತರಹ ಎಲ್ಲರೂ ತಮ್ಮ ತಮ್ಮ ಸ್ವಸ್ಥಳದಲ್ಲೇ ಇರುತ್ತಾರೆ. ಯಾರು ಎಲ್ಲಿ ಸೂಕ್ತ ಅನ್ನೋದನ್ನ ನೋಡಿಕೊಳ್ಳಬೇಕು. ಬಹುಪಾಲು ಜನರು ದೂರ ತೀರದ ತರಹ, ಬೂಟಾಟಿಕೆ. ಆದರೆ ಅವರನ್ನ ನೀನು ಮಂಚದ ಮೇಲೆ ಹಾಗೂ ಹಣದ ಬಳಿ ಕೂಡಿಸು, ಹೇಗೆ ರೂಪ ಬದಲಾಗುತ್ತೇಂತ ಗೊತ್ತಾಗುತ್ತೆ.

ಸಾಕು ಇನ್ನು ನೀನು ಬೈಕೊಳ್ಳೋದು ಬೇಡ. ಇಸ್ಪೀಟಿನ ಎಲೆ ಕೊಟ್ಟಿದೀನಿ, ಹಣ ಕೊಡು. ಗಮನವಿಟ್ಟು ತಿಳಿದುಕೋ. ಈ ಸಲ ನೀನು ಗೆಲ್ತೀಯೋ ಇಲ್ವೋ ಅನ್ನೋದನ್ನ.

ಆ ಸಲವೂ ಅವಿನಾಶನೇ ಹನ್ನೆರಡು ರೂಪಾಯಿ ಗೆದ್ದ. ಪುನಃ ಎಲೆ

ಹಂಬಲಾಯಿತು. ಈ ಸಲ ಬಾರೀನ್‌ದಾ ವ್ಯಂಗ್ಯವಾಗಿ, ಅಸಡ್ಡೆಯಿಂದ ಎಲೆಗಳನ್ನು ಮುಟ್ಟಿ ಹೇಳಿದ, ಈ ಸಲ ನಾನು ಗೆಲ್ತೀನಿ.

ಅವಿನಾಶ ಅಣಕಿಸುವ ದನಿಯಲ್ಲಿ 'ಹಾ' ಎಂದು ಶಬ್ದ ಮಾಡಿ ಹೇಳಿದ, ಹಾಗೋ, ನೋಡೋಣ ನಾನು ಈ ಸಲ ಸರ್ವಸ್ವವನ್ನೂ ಪಣ ಒಡ್ಡುತ್ತೇನೆ. ತೊಗೋ, ಮೊದಲನೆಯದಾಗಿ ಐದು ರೂಪಾಯಿ ಹಿಟ್.

ಬಾರೀನ್‌ದಾ ಮೃದು ದನಿಯಲ್ಲಿ ಹೇಳಿದ, ನನ್ನದೂ ಐದು.

ಹತ್ತು.

ಹತ್ತು.

ಇಪ್ಪತ್ತು.

ಇಪ್ಪತ್ತು.

ಮೂವತ್ತು.

ಮೂವತ್ತು.

ಐವತ್ತು.

ಐವತ್ತು.

ಅರವತ್ತೈದು.

ಅರವತ್ತೈದು.

ಒಂದು ನೂರು.

ಓಹ್, ಹಣ ಎಲ್ಲಿದೆ ? ಬರೀ ಬಾಯಲ್ಲಿ ಹೇಳಿದ್ರೆ ಆಗೋದಿಲ್ಲ.

ಬೋರ್ಡ್‌ನ ಮೇಲೆ ಹಣಾ ಬಿಸಾಕು.

ಕೊಡ್ತೀನಿ ಹಣ. ನೀನು ತೊಗೋ.

ಇಲ್ಲ ಬೋರ್ಡ್‌ನ ಮೇಲೆ ಹಣವಿಡದೆ ಆಟ ಸಾಗೋದಿಲ್ಲ. ಅವಿನಾಶ ಜೇಬಿಗೆ ಕೈಹಾಕಿ ಇಡೀ ದೇಹವನ್ನ ಅಲುಗಾಡಿಸಿದ. ಇನ್ನು ಹಣವಿಲ್ಲ. ಅವಿನಾಶ ನನ್ನ ಕಡೆ ತಿರುಗಿ ಹೇಳಿದ, ಏಯ್, ಸುನೀಲ್ ನಿನ್ನ ಹತ್ತಿರ ದುಡ್ಡಿದೆಯೇನೋ.

ನಾನೆಂದೆ, ಇದೆ ಕೇವಲ ಅರವತ್ತು.

ಕೊಡು. ಅದೇ ಕೊಡು.

ಬಾರೀನ್‌ದಾ ಹೇಳಿದ, ಇಲ್ಲಾಂದ್ರೆ ಇಲ್ಲ, ನಿನ್ನ ಹಣ ಮುಗಿದಿದೆ. ನಿನ್ನಾಟ ಇನ್ನ ಮುಗೀತು. ನೀನು ಪ್ಯಾಕ್ ಮಾಡಿ ಎದ್ದು ಹೊರಡು. ಆಟದಲ್ಲಿ ಸಾಲ ಮಾಡ್ಬಾರ್ದು.

ಆಹಾ ! ಸಾಲ ಹೇಳದೆ, ಒಂದು ವೇಳೆ ನಾನು ನನ್ನ ಗಡಿಯಾರಾನೋ, ಪೆನ್ನನ್ನೊ ಅಡವಿಟ್ಟು ಹಣ ತಗೊಂಡ್ರೆ ಅದರಿಂದ ನಿನಗೇನಯ್ಯ ನಷ್ಟ. ನಮ್ಮನೇಲಿ ಅದೆಲ್ಲಾ ಕಾರುಬಾರ ನಡೆಯೋದಿಲ್ಲ. ಎಲ್ಲಿಯವರೆಗೆ ಎದೆಯಲ್ಲಿ ಉಸಿರು, ಜೇಬಿನಲ್ಲಿ ದುಡ್ಡಿರುತ್ತೋ ಅಲ್ಲಿವರೆಗೂ ಆಟ ನಡೆಯುತ್ತೆ. ಮುಗಿದು ಹೋದ್ರೆ ಎದ್ದು ಹೋಗ್ತಿರಬೇಕು. ನಿಯಮಾನುಸಾರ ನೀನು ಪ್ಯಾಕ್ ಮಾಡಿ ಎದ್ದು ಹೋಗೋದು ಉಚಿತ. ಆದರೆ ನಿನಗೆ ಶೋ ಮಾಡುವ ಅವಕಾಶ ಕೊಡ್ತೀನಿ. ಜೇಬಿನಲ್ಲಿ ಏನೆಲ್ಲ ಚಿಲ್ಲರೆ ಇದೆಯೋ, ಅದನ್ನೆ ಇಟ್ಟು ಶೋ ಮಾಡು. ಗೆಲ್ಲೋದು ಈ ಸಲ ನಾನೇ.

ನೀನು ಗೆಲ್ತೀಯಾ ? ಹಾ ! ಹಾ ! ಅವಿನಾಶ ಸೂರು ಹಾರಿ ಹೋಗುವಂತೆ ನಕ್ಕ. ನೀನು ಗೆಲ್ತೀಯಾ ? ಏನಯ್ಯಾ ಇಸ್ಪೀಟಿನ ಆಟ ನಿನಗೊಬ್ಬನಿಗೇ ಗೊತ್ತಿರೋದು, ನನಗೆ ಗೊತ್ತಿಲ್ಲಾಂತ ತಿಳ್ಕೊಂಡಿದೀಯ. ಅವಿನಾಶ ಅಸಡ್ಡೆಯಿಂದ ಎಲೆಗಳ ಮೇಲೆ ಕೈಯಾಡಿಸಿದ. ಹಾ ! ನಿಧಾನ ! ನಿಧಾನ ! ಗಾಳಿಯಲ್ಲಿ ಏನೋ ತೇಲ್ತಾ ಇದೆ. ಗೊತ್ತಾಯ್ತಾ ಸುನೀಲ್, ಸರಸ್ವತಿಯ ಪೂಜೆಯ ದಿನ. ಯಾವುದೋ ಒಂದು ಮನೆಯ ಅಂಗಳದಲ್ಲಿ ಮೂರು ಜನ ಅಕ್ಕ ತಂಗಿಯರು. ಮೂರು ಜನರೂ ಹಳದಿ ಬಣ್ಣದ ಬಟ್ಟೆ ತೊಟ್ಟು, ತಲೆ ತೊಳೆದುಕೊಂಡು ಕೂದಲು ಇಳಿ ಬಿಟ್ಟು ರಸ್ತೆಯಲ್ಲಿ ಹಾರಿಕೊಂಡು ಹೋಗುತ್ತಿದ್ದಾರೆ. ಮೂರು ಜನರೂ ನೋಡಲು ಒಂದೇ ತರಹ. ಇವು ಕೂಡಾ ಹಾಗೇ. ಇಲ್ಲಿ ತ್ರಿವಳಿಗಳು ಅಂತ ಹೇಳ್ಬೇಡ. ಮೂರು ಜನ ಅಕ್ಕ ತಂಗಿಯರು ಹೇಗೆ ತ್ರಿವಳಿಗಳಾಗಲು ಸಾಧ್ಯ ? ಕೊಡು ಹಣ ಕೊಡು, ನೋಡೇ ಬಿಡೋಣ.

ಬಾರೀನ್‌ದಾನೆಂದ, ಬೇಡ ಸುನೀಲ್ ನೀನು ಹಣ ಕೊಡಬೇಡ.

ನಾನು ಸ್ವಲ್ಪ ಚಕಿತನಾಗಿ ಹೇಳಿದೆ, ನೀನು ಯಾಕೆ ಕೊಡಬೇಡ ಅಂತೀಯ ನನಗೊಂದೂ ಅರ್ಥವಾಗ್ತಾ ಇಲ್ಲ. ಆಟವಾಡಲು ಇಷ್ಟ ಆಡಲಿ ಬಿಡು. ಇಚ್ಛೆಯನ್ನ ಅದುಮಿಟ್ಟುಕೊಳ್ಳುವ ಅವಶ್ಯಕತೆ ಏನಿದೆ ?

ಸ್ವಂತ ದುಡ್ಡಿನಲ್ಲೇ ಬೇಕಾದರೆ ಆಡಲಿ.

ಅವನ ಜೇಬಿನ ಹಣ ಮುಗಿದು ಹೋಗಿದೆ. ಬೇರೆಯವರ ಜೇಬಿನಿಂದ ಹಣ ತೆಗೆದು ಆಟ ಆಡಬಹುದು. ಅದಲ್ಲದೆ ಸ್ನೇಹಿತರ ಹತ್ತಿರ ಇಸ್ಕೊಂಡರೆ ಏನೊ ತಪ್ಪು ?

ಇಲ್ಲ, ಇವೆಲ್ಲಾ ಜೂಜುಗಾರರ ಸ್ವಭಾವ. ನಾನು ಜೂಜಾಡೋದಿಲ್ಲ. ನಾನಾಡೋದು ಇಸ್ಪೀಟಿನ ಆಟ. ಹಣದಾಸೆಗೋಸ್ಕರ ನಾನು ಆಟ ಆಡೋದಿಲ್ಲ. ನಾನಂತೂ ಅವನಿಗೆ ಶೋ ಮಾಡಲು ಕೂಡಾ ಛಾನ್ಸ್ ಕೊಟ್ಟದೀನಿ. ಇದೇ ಬೋರ್ಡಿನಲ್ಲಿ ಅರವತ್ತೈದು ಎರಡು ಸಲ ಗೆದ್ದಿಲ್ವಾ ?

ಅವಿನಾಶ ಹೂಂಕರಿಸುತ್ತಾ ಎದ್ದ. ಛಾನ್ಸ್ ಕೊಟ್ರೆ ? ಏನು ದಯೆ ತೋರಿಸಿದಂತೆಯೇ ? ಹೌದು ಬರೀ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾನೆ. ಜೂಜಲ್ಲವಂತೆ, ಇಸ್ಪೀಟ್ ಆಟವಂತೆ. ಈ ಕೆಲವು ತಿಂಗಳಲ್ಲಿ ಸಾವಿರಾರು ರೂಪಾಯಿಗಳನ್ನು ಕಸ್ಕೊಂಡಿದ್ದಾನೆ. ಈಗ ನಾನೂ ಎಲೆಗಳನ್ನ ಗುರುತಿಸೋದನ್ನ ಕಲಿತುಕೊಂಡಿದೀನಿ. ಅದೇ ಭಯ ಅವನಿಗೆ.

ಬಾರೀನ್‌ದಾ ಹತಾಶ ಭಾವದಿಂದ ಹೇಳಿದ, ನನಗೇನು ಸ್ವಲ್ಪಾನೂ ಹೆದರಿಕೆ ಇಲ್ಲ. ನಾನು ಖಂಡಿತ ನಿನ್ನಿಂದ ಕಸ್ಕೊಂಡಿಲ್ಲ. ನೀನೇ ಅಷ್ಟನ್ನ ಸೋತಿರೋದು. ನಮ್ಮ ಮನೆಗೆ ಬಂದ ಮೇಲೆ, ನಮ್ಮ ನಿಯಮದ ಪ್ರಕಾರವೇ ಆಟವಾಡಬೇಕು. ಇಷ್ಟವಿಲ್ಲದಿದ್ದರೆ ಬರಲೇ ಬೇಡ. ನನಗೆ ಇನ್ನು ಬೇರೆ ಪಾರ್ಟಿಗಳಿದಾರೆ, ನಿನ್ನ ತರಹ ರಗಳೆ ಮನುಷ್ಯರ ಅವಶ್ಯಕತೆ ನನಗಿಲ್ಲ.

ಒಂದೊಂದು ದಿನವೂ ಒಂದೊಂದು ನಿಯಮ ನಿನ್ನದು. ಸ್ಮಶಾನದ ಹತ್ತಿರ ವ್ಯಾಪಾರ ಮಾಡ್ತೀಯ, ನೀನು ಒಂದನೇ ನಂಬರ್ ಶಕುನಿ. ಇವತ್ತು ನಿನ್ನ ಮೋಸ

ಕಂಡುಹಿಡಿದು ಬಿಟ್ಟೆ. ಇವತ್ತು ಕೊನೇವರೆಗೂ ಆಟ ಆಡಲೇಬೇಕು.

ಸಿಗರೇಟಿನ ಒಂದು ಖಾಲಿ ಟಿನ್ನಿನ ಡಬ್ಬದಲ್ಲಿ ಬಾರೀನ್‌ದಾ ದುಡ್ಡು ಹಾಗೂ ಚಿಲ್ಲರೆಯನ್ನಿಟ್ಟುಕೊಂಡಿದ್ದ. ಗಡಸು ಮುಖ ಮಾಡಿ ಬಾರೀನ್‌ದಾ ಅದನ್ನ ಬಲಗೈಯಿಂದ ತಬ್ಬಿ ಗಟ್ಟಿಯಾಗಿ ಹಿಡಿದುಕೊಂಡು ನಂತರ ಹೇಳಿದ, ನಿನಗೆ ಎರಡು ಸಲ ಛಾನ್ಸ್ ಕೊಟ್ಟೆ, ನೀನು ತೆಗೆದುಕೊಳ್ಳಲಿಲ್ಲ. ಇವತ್ತು ಆಟ ಮುಗೀತು.

ಬಾರೀನ್‌ದಾ ಬಲಗೈ ಮುಂದೆ ಚಾಚಿ ಬೋರ್ಡಿನ ಮೇಲಿನ ಹಣವನ್ನ ತೆಗೆದುಕೊಳ್ಳಲು ಹೋದ. ಎಚ್ಚರ ! ಅವಿನಾಶ ಒಂದು ಕ್ಷಣವೂ ತಡ ಮಾಡದೆ, ಬಿಗಿಯಾಗಿ ಅವನ ಮುಂಗೈ ಹಿಡಿದುಕೊಂಡು, ಸರಿಯಾಗಿ ಮುಷ್ಟಿ ಏಟು ಬಿಗಿದ. ಬಾರೀನ್‌ದಾ ಒಂದು ಪಕ್ಕಕ್ಕೆ ಹೋಗಿ ಬೀಳುತ್ತಲೇ, ಚಿಲ್ಲರೆ ಝಣ ಝಣ ಎಂದು ಸದ್ದು ಮಾಡುತ್ತ ನೆಲದ ಮೇಲೆ ಬಿದ್ದವು. ಇನ್ನು ಸಮಯ ವ್ಯರ್ಥ ಮಾಡದೆ ಅವಿನಾಶ ಇನ್ನೊಂದು ಏಟು ಕೊಟ್ಟು ಅವನನ್ನು ಮಂಚದಿಂದ ಬೀಳಿಸಿಬಿಟ್ಟ. ಬಾರೀನ್‌ದಾ ಬಿದ್ದರೂ ತಕ್ಷಣ ಸಾವರಿಸಿಕೊಂಡು ಎದ್ದು ನಿಂತುಕೊಂಡ.

ಸುವಿಮಲ ಹಾಗೂ ನೂರೂಲ್ ಕೂಡಾ ಎದ್ದು ನಿಂತುಕೊಂಡರು. ಅವರನ್ನು ತಡೆಯಲು ನಾನು ಅಲ್ಲೇ ಇದ್ದುದು ಒಳ್ಳೆಯದಾಯ್ತು. ಇಲ್ಲದಿದ್ದರೆ ನನ್ನಿಂದ ಅದನ್ನ ಸಹಿಸೋದಕ್ಕಾಗ್ತಿರಲಿಲ್ಲ. ಆದರೆ ಅದೇ ಕ್ಷಣದಲ್ಲಿ ನನ್ನ ಮನಸ್ಸಿಗೆ ಏನೋ ಅನ್ನಿಸಿತು. ಕೇವಲ ಇವತ್ತಿನ ಘಟನೆಯಿಂದಾಗಲ್ಲ. ಬಾರೀನ್‌ದಾ ಹಾಗೂ ಅವಿನಾಶರಲ್ಲಿ ಯಾವುದೋ ಹಿಂದಿನ ಜಗಳವಿರಬೇಕು. ಅದನ್ನ ಅವರಿಬ್ಬರೇ ಸರಿ ಮಾಡಿಕೊಳ್ಳುವುದು ಒಳ್ಳೆಯದು. ಇಬ್ಬರು ಬಲಿಷ್ಠ ಗಂಡಸರು ಎದುರುಬದುರು ನಿಂತಿದ್ದಾರೆ. ಅವರ ನಡುವೆ ಏನು ಮಾತನಾಡಲೂ ಸಾಧ್ಯವಿಲ್ಲ. ನೂರೂಲ್ ನಶೆ ತುಂಬಿದ ದನಿಯಲ್ಲಿ ಹೊಸಿಲ ಹತ್ತಿರ ಸರಿದು ನಿಂತು ಹೇಳಿದ, ನಾನು ಯಾರ ಪಕ್ಷದಲ್ಲಿಯೂ ಇಲ್ಲ. ನಾನು, ಸುವಿಮಲ ದಾರಿಕಾಣದೆ ಮೌನವಾಗಿ ನಿಂತೆವು. ಮಂಚದ ಆಚೆಯ ಬದಿಯಲ್ಲಿ ಅವಿನಾಶನ ಭಯಂಕರ ಮುಖ. ಮಂಚದ ಈ ಬದಿಯಲ್ಲಿ ಬಾರೀನ್‌ದಾ, ತುಟಿಯ ಅಂಚಿನಿಂದ ರಕ್ತ ಒಸರುತ್ತಿದೆ. ಕಬ್ಬಿಣದಂತ ಎರಡು ಕೈಗಳನ್ನು ಅವಿನಾಶನ ಕಡೆ ಚಾಚಿ ಅವನೆಂದ, ಬಾ, ನಾಯಿ...... ಅವಿನಾಶನೂ ಕ್ರೂರವಾಗಿ ಕಿರುಚಿದ, ಬಾರೋ.

ಪರದೆಯ ಹಿಂದಿನಿಂದ ಹೀರಾಲಾಲ್ ಹೊರ ಬಂದ. ಬಹುಶಃ ಊಟ ಮಾಡುತ್ತಿದ್ದನೆಂದು ಕಾಣುತ್ತದೆ. ಅವನ ಒಂದು ಕೈ ಇನ್ನೂ ಹಸಿಯಾಗಿತ್ತು. ಅವಿನಾಶನ ಮುಂದೆ ಬಂದು ನಿಂತು ಹೇಳಿದ, ಅವಿನಾಶಬಾಬು, ಇದೇನು ಮಾಡ್ತಾ ಇದೀರಿ ? ನಿಮಗೆ ಮತ್ತು ತಲೆಗೇರಿದೆ ಅಂತ ಕಾಣುತ್ತೆ. ನಡೀರಿ ಮನೆಗೆ, ಮನೆಗೆ ಹೊರಡಿ ಇನ್ನು.......

ಅವಿನಾಶ ಅವನಿಗೆ ಬಲಗೈಯಿಂದ ಒಂದು ಬಾರಿಸಿ ಹೇಳಿದ, ದೂರ ಸರಿದು ನಿಲ್ಲು.

ಬಾರೀನ್‌ದಾನೆಂದ, ಹೀರಾಲಾಲ್, ನೀನು ಸರಿದು ನಿಲ್ಲು.

ಆದರೂ ಹೀರಾಲಾಲ್ ಅವಿನಾಶನ ಒಂದು ಕೈಯನ್ನು ಗಟ್ಟಿಯಾಗಿ

ಹಿಡಿದುಕೊಂಡಿದ್ದನು. ಅಷ್ಟರಲ್ಲೇ ಏನಾಯಿತೋ ಏನೋ ಸುವಿಮಲ ಮೆಲ್ಲನೆ ಆ ಕಡೆ ಹೋಗಿ ಹೀರಾಲಾಲನಿಗೆಂದ, ಏಯ್ ನೀನ್ಯಾಕೋ ಮೈಮೇಲೆ ಕೈ ಮಾಡೋದು, ಬಿಟ್ಬಿ ಬಿಡು. ಹೀರಾಲಾಲ್ ಸುವಿಮಲನನ್ನು ಕಡೆಗಣಿಸಿ, ಎಡಗೈಯಿಂದ ಅವನನ್ನು ಜೋರಾಗಿ ತಳ್ಳಿಬಿಟ್ಟ. ನಶೆಯಿಂದಾಗಿ ಸುವಿಮಲನ ಮೈ ಬಹಳ ಹಗುರವಾಗಿತ್ತು. ಸುವಿಮಲ ಧಪ್ ಎಂದು ಬಾಗಿಲ ಬಳಿ ಹೋಗಿ ಬಿದ್ದ. ಹೀರಾಲಾಲ್ ಕೋಣೆಯ ಬಾಗಿಲು ತೆರೆದು ಆಜ್ಞಾಪಿಸುವ ದನಿಯಲ್ಲಿ ಅವಿನಾಶನಿಗೆಂದ, ಹೊರಡಿ. ಹೊರಟು ಹೋಗಿ. ಅವಿನಾಶನೆಂದ, ಸುಮ್ಮನಿರು. ಸುವಿಮಲ ನೆಲದ ಮೇಲಿನಿಂದಲೇ ಅವನಿಗೊಂದು ಒದ್ದ. ಹೀರಾಲಾಲ್ ಒಡನೆ ಪುನಃ ಸುವಿಮಲನಿಗೆ ಎಷ್ಟು ಜೋರಾಗಿ ಒದ್ದನೆಂದರೆ, ಧಪ್ ಎಂದು ಶಬ್ದ ಕೇಳಿ ಬಂತು. ಸುವಿಮಲ ಬಾಗಿಲ ಹೊರಗೆ ಹೋಗಿ ಬಿದ್ದ. ಅದೇ ಕ್ಷಣದಲ್ಲಿ ಓಡಿ ಹೋಗಿ ಪರದೆಯ ಆ ಕಡೆಯಿಂದ ಹೀರಾಲಾಲ್ ಒಂದು ಹನ್ನೆರಡು ಇಂಚಿನ ಚೂರಿ ತೆಗೆದುಕೊಂಡು ಬರುತ್ತಲೇ ಅವಿನಾಶನೂ ಥಟ್ಟನೆ ಬಾಗಿಲಿಂದ ಹೊರ ಹೊರಟು ಹೋದ.

ತಕ್ಷಣ ನನಗೆ ಆಘಾತವಾಯಿತು. ನನಗೆ ಯೋಚಿಸಲು ಅವಕಾಶ ಕೊಡದೆ ಬಾರೀನ್‌ದಾ, ತಕ್ಷಣ ತಿರುಗಿ ನನ್ನ ಕಿವಿಯ ಮೇಲೆ ಗಟ್ಟಿಯಾಗಿ ಹೊಡೆದ. ನನ್ನ ನೋವು ಹಾಗೂ ಆಶ್ಚರ್ಯದ ನಡುವೆ ಯಾವುದು ಹೆಚ್ಚಾಗಿತ್ತು ಅಂತ ಹೇಳೋದು ಕಷ್ಟ. ನಾನು ಈ ರೀತಿಯ ಆಕ್ರಮಣವನ್ನ ನಿರೀಕ್ಷಿಸಿಯೇ ಇರಲಿಲ್ಲ. ನನ್ನ ತಲೆ ಝುಂ ಎಂದಿತು. ಎಷ್ಟು ನೋವಾಗಿತ್ತೆಂದರೆ ಮೊದಲು ನಾನು ನನ್ನ ಬೆನ್ನಿಗೆ ಯಾರೋ ಚೂರಿ ಚುಚ್ಚಿದ್ದಾರೆ ಎಂದು ಅಂದುಕೊಂಡಿದ್ದೆ. ನಾನು ಎಡವಿ ಬೀಳೋದ್ರಲ್ಲಿದ್ದೆ. ಆದರೆ ಅಷ್ಟರಲ್ಲೆ ಕಿಟಕಿಯ ಸರಳುಗಳನ್ನು ಹಿಡಿದು ಸಾವರಿಸಿಕೊಂಡು ಎದ್ದು ನಿಂತೆ. ಕಣ್ಣು ತೆರೆದು ನಿಧಾನವಾಗಿ ಮೆಲ್ಲನೆ ತಲೆ ಎತ್ತಿ ನೋಡಿದೆ. ಹೊಸಿಲ ಪಕ್ಕದಲ್ಲಿ ನಿಂತಿದ್ದಾನೆ ನೂರೂಲ್. ಮುಖ ಪೆಚ್ಚಾಗಿದೆ. ಪರೀಕ್ಷಿತ ನೆಲದ ಮೇಲೆ ಪ್ರಜ್ಞೆ ಇಲ್ಲದೆ ಬಿದ್ದು ಕೊಂಡಿದ್ದಾನೆ. ಸುವಿಮಲ ಹಾಗೂ ಅವಿನಾಶರು ಇಲ್ಲ. ತೆರೆದ ಬಾಗಿಲು, ಸ್ವಲ್ಪ ದೂರದಲ್ಲಿ ನೆಲದ ಮೇಲೆಲ್ಲ ಚಿಲ್ಲರೆ ಹಣ. ಒಮ್ಮೆಗೇ ಎದುರಾಗಿ ನಿಂತಿದ್ದಾನೆ, ಬಾರೀನ್‌ದಾ. ಹಾಗೆ ನೋಡಿದ್ರೆ, ಬಾರೀನ್‌ದಾ ಶಾಂತ ಸ್ವಭಾವದ ವ್ಯಕ್ತಿ. ಈಗ ಕಲ್ಪನೆಗೂ ನಿಲುಕದ ಗಡಸುತನ ಅವನ ಮುಖದಲ್ಲಿ ಮೂಡಿತ್ತು. ಕಣ್ಣುಗಳು ಕೆಂಡ ಕಾರುತ್ತಿವೆ. ತುಟಿಯ ಹತ್ತಿರ ರಕ್ತ. ಇಷ್ಟರಲ್ಲೇ ಒಮ್ಮೆ ರಕ್ತವನ್ನ ಒರೆಸಿಕೊಳ್ಳುವ ಪ್ರಯತ್ನವನ್ನು ಮಾಡಿರಬೇಕು. ಅದಕ್ಕೆ ಬಲ ಕೆನ್ನೆಯ ಮೇಲೆ ಒಂದು ರಕ್ತದ ಕಲೆ ಇತ್ತು.

ನನಗಂತೂ ಎಂದೂ ಯಾರನ್ನೂ ಹೊಡೆಯಲು ಸಾಧ್ಯವಾಗಿರಲೇ ಇಲ್ಲ. ಜೀವನದಲ್ಲಿ ಅನೇಕರನ್ನ ಹೊಡೆಯಬೇಕು, ಕಠಿಣವಾದ ಶಿಕ್ಷೆ ಕೊಡಬೇಕೆಂದು ಅಂದು ಕೊಂಡಿದ್ದೆ. ಆದರೆ ಅವರೆಲ್ಲರೂ ನನಗಿಂತ ದೈಹಿಕವಾಗಿ ಬಲಿಷ್ಠರೋ ಅಥವಾ ಅಶಕ್ತರೋ ಆಗಿದ್ದರು. ಆದರೆ ನನಗೆ, ಸಮಾನರಾದವರನ್ನು ನಾನು ಕಂಡಿರಲಿಲ್ಲ. ಇಲ್ಲಿಯವರೆಗೂ ಯಾರ್‍ಯಾರ ಮೇಲೊ ಕೈ ಮಾಡುವ ಪ್ರಮೇಯ ನನಗೆ ಒದಗಿಬಂದಿರಲಿಲ್ಲ. ಮತ್ತು ಯಾವೊಂದು ಪ್ರಸಂಗವೂ ಒದಗಿ ಬಂದಿರಲಿಲ್ಲ.

ಆದರೂ ಹೊಡೆಯುವ ಭರದಲ್ಲಿ ಬಾರೀನ್‌ದಾ ನನಗೆ ಪುನಃ ಬಾರಿಸಿದ್ದ. ತುಂಬಾ ಜೋರಾಗೇನಲ್ಲ. ಆದರೂ ಗಲ್ಲ ಹರಿದು ಕೆನ್ನೆಯ ಮೇಲೆ ಗಾಯವಾಗಿದೆ ಎನ್ನುವುದು ನನಗರ್ಥವಾಯಿತು. ನೆಲದ ಮೇಲೆ ಒಂದು ಹನಿ ರಕ್ತ ನೋಡಿ ನನ್ನ ತಲೆ ತಿರುಗಿತು. ಈಗ ಆತ್ಮರಕ್ಷಣೆಯನ್ನು ಮಾಡಿಕೊಳ್ಳದಿದ್ದರೆ, ಇವರುಗಳು ನನ್ನನ್ನು ಸಾಯಿಸಿಯೇ ಬಿಡುತ್ತಾರೋ ಏನೋ. ಪ್ರಥಮವಾಗಿ ನನ್ನ ಮೇಲೆ ಆಕ್ರಮಣ ಮಾಡಿ, ಬಾರೀನ್‌ದಾ ನನ್ನನ್ನು ಅಶಕ್ತನನ್ನಾಗಿ ಮಾಡಿದ್ದ. ನಾನು ತಲೆ ಎತ್ತದೆಯೇ, ಬಾರೀನ್‌ದಾ ಕಡೆ ಒಂದು ಕೈಬೀಸಿದೆ. ಬಾರೀನ್‌ದಾನ ಭುಜವನ್ನ ತಳ್ಳಿ ಸ್ವಲ್ಪ ಅವನ ಮೈ ತಗುಲಿತು. ಬಾರೀನ್‌ದಾ ಥಟ್ಟನೆ ನನ್ನ ಆ ಕೈಯನ್ನ ಬಿಗಿಯಾಗಿ ಹಿಡಿದುಕೊಂಡು ಬಿಟ್ಟ. ಹಿಡಿದುಕೊಳ್ಳುತ್ತಲೇ ಅದನ್ನ ತಿರುಚಿಬಿಟ್ಟ, ಬಹಳ ಜೋರಾಗಿ.

ನಾನು ನಾಯಿಯ ತರಹ ಕುಂಯ್ ಕುಂಯ್ ಎಂದು ಜೋರಾಗಿ ಕಿರುಚಿಕೊಂಡೆ. ಬಾರೀನ್‌ದಾ ನನ್ನ ಮುಖಕ್ಕೆ ಒಂದು ಬಾರಿಸಿ ಹೇಳಿದ, ಸುಮ್ಮನಿರು. ನಂತರ ಎರಡೂ ಕೈಗಳಿಂದ, ಬಾರೀನ್‌ದಾ ನನ್ನ ಬಲಗೈಯನ್ನ ಹಿಂದೆ ಕೊಂಡು ಹೋಗಿ, ಎಷ್ಟು ಜೋರಾಗಿ ಹಿಡಿದುಕೊಂಡನೆಂದರೆ, ನನಗೆ ಸಾಯೋವಷ್ಟು ನೋವಾಯಿತು. ನಾನು ಪಿಸುಗುಟ್ಟಿದೆ, ಬಾರೀನ್‌ದಾ, ನನ್ನನ್ನ ಇನ್ನು ಹೊಡೀಬೇಡ ಬಿಟ್ಟು ಬಿಡು, ಬಿಟ್ಟು ಬಿಡು ನಿನ್ನ ಕಾಲಿಗೆ ಬೀಳ್ತೀನಿ ....

ಆಗಲೇ ನಾನೊಂದು ವಿಷಯವನ್ನ ಗಮನಿಸಿದ್ದೆ. ಬಾರೀನ್‌ದಾ ನನ್ನ ಬಲಗೈಯನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದ. ಆದರೆ ನನ್ನ ಎಡಗೈ ಆಗಲೂ ಸಂಪೂರ್ಣವಾಗಿ ಮುಕ್ತವಾಗಿತ್ತು. ಅದೂ ಕೂಡಾ ವಿವಶವಾಗಿತ್ತು. ಎಡಗೈಯಿಂದ ನಾನು ಬಾರೀನ್‌ದಾಗೊಂದು ಏಟು ಹೊಡೆಯಲು ಸಾಧ್ಯವಿತ್ತು. ಆದರೂ ನಾನು ಎಡಗೈಯನ್ನ ಎತ್ತಲೂ ಸಾಧ್ಯವಾಗಲಿಲ್ಲ. ಅದು ಯಾವ ರೀತಿ ಜೋತಾಡುತ್ತಿತ್ತೆಂದರೆ ಅದು ಯಾವ ಕೆಲಸವನ್ನೂ ಮಾಡಲು ಸಮರ್ಥವಿಲ್ಲವೇನೋ ಎಂದೆನಿಸುತ್ತಿತ್ತು. ಆ ಕೈ ನನಗೆ ಸಂಪರ್ಕವೇ ಇಲ್ಲವೇನೋ ಎಂದೆನಿಸಿತ್ತು. ನನ್ನ ಎಡಗೈ ನೂರೂಲ್‌ನ ತರಹ ವೆಚ್ಚಾಗಿ ಅಥವಾ ಪರೀಕ್ಷಿತನ ತರಹ ಪ್ರಜ್ಞೆ ಇಲ್ಲದೆ, ಆ ಹೊಡೆದಾಟದ ನಡುವೆಯೇ ಪ್ರವೇಶಿಸಲಿಚ್ಛಿಸಲಿಲ್ಲ. ತುಂಬಾ ಸ್ನೇಹ ತೋರಿಸಿದೆ ಅಲ್ವಾ ? ಎಂದ ಬಾರೀನ್‌ದಾ.

ಬಿಟ್ಟು ಬಿಡು. ನಿನ್ನೊಡನೆ ನನ್ನದೇನೂ ಜಗಳವಿಲ್ಲ. ಬಿಟ್ಟು ಬಿಡು ನಿನ್ನ ಕಾಲು ಹಿಡೀತೀನಿ.

ಹಿಡಿ, ಕಾಲು ಹಿಡಿ.

ಕೆಳಗೆ ಬಗ್ಗೋದಕ್ಕಾಗೋದಿಲ್ಲ.

ಬಾರೀನ್‌ದಾ ಕೈಯನ್ನ ಸಡಿಲಿಸಿದ. ನಾನು ನೆಲದ ಮೇಲೆ ಮೊಣಕಾಲೂರಿ ಕುಳಿತು ಅಸಹಾಯಕ ಮುಖದಿಂದ ಹೇಳಿದೆ, ಬಾರೀನ್‌ದಾ ನನ್ನನ್ನು ಅಪಮಾನ ಮಾಡಿದರೆ ನಿನಗೇನು ಲಾಭ ?

ಹಿಡಿ ಮೊದಲು ಕಾಲು ಹಿಡಿ. ಒಂದು ಸಲ ಮೂಗನ್ನ ತಾಗಿಸಿ ಬಿಡು.

ತುಂಬಾ ದುಃಖದಿಂದಾಗಿ ನನ್ನ ಹೃದಯ ಹಗುರವಾಗಿ ಬಿಟ್ಟಿತ್ತು. ನಾನು ಶಾಂತ

ಮಗುವಿನ ತರಹ ಮೂಗು ನೆಲಕ್ಕೆ ಮುಟ್ಟಿಸುತ್ತ, ಮಂಚದ ಕಾಲಿನ ತನಕ ಬಂದು, ಅದೇ ತರಹ ಮುಖವನ್ನ ಇಟ್ಟುಕೊಂಡು ಹೇಳಿದೆ, ಎಷ್ಟು ಸಲ ? ನಾನು ಇಡೀ ಕೋಣೆಯಲ್ಲಿ ಮೂಗನ್ನ ನೆಲಕ್ಕೆ ಮುಟ್ಟಿಸಲು ಸಾಧ್ಯವಿಲ್ಲ. ನೀನು ಅದನ್ನೇ ಬಯಸ್ತೀಯ ? ನಾನು ನಿನ್ನ ಕಾಲು ಹಿಡಿದು, ಕಾಲಿನ ತಳದ ಧೂಳನ್ನ ನಾಲಿಗೆಯಿಂದ ಒರೆಸಬಲ್ಲೆ, ನೀನು ಒಂದು ವೇಳೆ ಬಯಸಿದರೆ ? ಹೇಳು, ನಿನಗೇನು ಬೇಕು ? ಬದುಕುಳಿಯಲು ನಾನು ಏನು ಬೇಕಾದರೂ ಮಾಡಲು ಸಿದ್ಧ.

ಹೋಗು, ಈ ಸಲ ಹೊರಟು ಹೋಗು. ಇನ್ನೆಂದೂ ಬರಬೇಡ.

ನಾನು ಅದೇ ರೀತಿ ಶಾಂತ ಭಾವದಿಂದ ಹೇಳಿದೆ, ಇಲ್ಲಿಗೆ ಇನ್ನೊಮ್ಮೆ ಬಂದಾಗ, ನಾನೊಬ್ಬನೇ ಬರ್ತೀನಿ.

ಯಾಕೆ ಒಂಟಿಯಾಗಿ – ಗೂಂಡಾಗಳನ್ನ ಕರೆದುಕೊಂಡು, ಪೋಲೀಸರನ್ನ ಕರೆದುಕೊಂಡು – ಯಾವ ರೀತಿ ಬೇಕೋ ಆ ತರಹ ಬಾ. ಯಾರಿಗೂ ನಾನು ಕೇರ್ ಮಾಡೋಲ್ಲ.

ನಾನು ಅದೇ ತರಹ ಶಾಂತ ಭಾವದಿಂದ ಹೇಳಿದೆ, ಇಲ್ಲಿಗೆ ಇನ್ನೊಮ್ಮೆ ಬಂದಾಗ, ಒಂಟಿಯಾಗೇ ಬರುತ್ತೇನೆ.

ಮೆಟ್ಟಲುಗಳ ಹತ್ತಿರ ಬರೀ ಕತ್ತಲು. ಏನೂ ಶಬ್ದವಿಲ್ಲ. ಬೆಳಗಿನ ಹೊತ್ತು ಇಲ್ಲಿ ವ್ಯಾಪಾರ ನಡೆಯುತ್ತೆ. ಅದೇ ಸದ್ದು ಗದ್ದಲ ಗಲಾಟೆಯ ವಿಷಯ, ಮನಸ್ಸಿಗೆ ನೆನಪಾದೊಡನೆ, ಈಗಿನ ನಿಶ್ಶಬ್ದ ಎಷ್ಟೊಂದು ತೀವ್ರ ಅಂತ ಮನಸ್ಸಿಗನಿಸಿತ್ತು. ಅದಲ್ಲದೆ ಈಗ ನನ್ನ ತಲೆಯಲ್ಲಿ ಏನೊಂದು ಶಬ್ದವೂ ಹೋಗುವುದಿಲ್ಲ. ಕೆಳಗಡೆ ಹೀರಾಲಾಲ್ ಕತ್ತಿ ಮಸೆಯುತ್ತಿದ್ದಾನೆ. ಅವನ ಕೈನ ಚೂರಿ ಕಾಣಿಸ್ತಾ ಇಲ್ಲ. ನನ್ನನ್ನು ನೋಡಿ ಹೀರಾಲಾಲ್ ಪಕಪಕನೆ ಹಲ್ಲು ತೋರಿಸಿಕೊಂಡು ನಕ್ಕ. ನಾನು ಸ್ವಲ್ಪ ನಿಂತೆ.

ನಾನು ಕೂಡಾ ಹೀರಾಲಾಲನನ್ನು ಕಂಡು ನಕ್ಕೆ. ಆನಂತರ ಒಂದೊಂದೇ ಹೆಜ್ಜೆ ಇಟ್ಟು ಇಳಿದು ಬರುವ ಹೊತ್ತಿಗೆ ನನ್ನ ಇಡೀ ಶರೀರ ಗಡ ಗಡನೆ ನಡುಗಲಾರಂಭಿಸಿತು. ನಾನೊಬ್ಬ ಪೆದ್ದ, ಅಸಾಧ್ಯದ ಕೆಲಸವನ್ನ ಮಾಡುತ್ತಿದ್ದೇನೆ ಎಂದು ನನಗನ್ನಿಸಿತು. ಹೀರಾಲಾಲ್ ತನ್ನ ಶಕ್ತಿ ಪ್ರದರ್ಶಿಸುವನೋ ಇಲ್ಲವೋ, ಗೊತ್ತಿಲ್ಲ. ಆದರೆ ಈಗ ಇಲ್ಲಿ ನಿಂತರೆ ಸಾಧ್ಯವಿಲ್ಲ. ನಾನೀಗ ಕೆಳಗಿಳಿದು ಹೋಗಲೇಬೇಕು. ನಾನು ಅಧೈರ್ಯದಿಂದ ನಕ್ಕು ಹೇಳಿದೆ, ಏನಪ್ಪಾ ಹೀರಾಲಾಲ್ ? ಹೀರಾಲಾಲ್ ವ್ಯಥೆ ತುಂಬಿದ ಸ್ವರದಲ್ಲಿ ಹೇಳಿದ, ಅದೇನು ಹಗರಣ ಮಾಡಿ ಬಿಟ್ಟಿರಿ ? ಅವನನ್ನು ದಾಟಿಕೊಂಡು ಬಂದ ಮೇಲೆ ಹೀರಾಲಾಲ್ ಸಾಧಾರಣ ದನಿಯಲ್ಲಿ ಹೇಳಿದ, ಆ ಇಬ್ಬರು ಬಾಬುಗಳೂ ಇನ್ನೂ ರಸ್ತೆಯಲ್ಲೇ ನಿಂತುಕೊಂಡಿದ್ದಾರೆ.

ಬಾಬು ! ಸ್ವಲ್ಪ ಹೊತ್ತಿನ ಮುಂಚೆ ಸುವಿಮಲನ ಬೆನ್ನಿಗೆ ಅಷ್ಟು ಜೋರಾಗಿ ಒದೆ ಕೊಟ್ಟ ಮೇಲೂ, ಈಗಲೂ ಸುವಿಮಲನನ್ನ ಹೀರಾಲಾಲ್, ಬಾಬು ಎಂದು ಕರೆದಿದ್ದ. ಎಷ್ಟೇ ಆಗಲಿ ಆಳಲ್ಲವೆ ? ಅವನಿಗೊಂದೆರಡಾಣೆ ಬಕ್ಷೀಸು ಕೊಟ್ಟು ಬಂದಿದ್ದರೆ ಒಳ್ಳೆಯದಿತ್ತು ಅಂತ ಮನಸ್ಸಿಗನ್ನಿಸಿತು.

ಹೊರಗಡೆ ಬಹಳ ಜೋರಾಗಿ ಮಳೆ ಬರುತ್ತಿತ್ತು. ಇಡೀ ರಸ್ತೆಯಲ್ಲಿ ಮಳೆಯು ಪಟ ಪಟ ಹನಿಯ ಶಬ್ದ. ನಾನು ಓಡಿ, ರಸ್ತೆ ದಾಟಿ ಆ ಕಡೆ ಗಾಡಿ ನಿಲ್ಲಿಸುವ ಕಡೆ ಬಂದೆ. ಸುವಿಮಲ ಒಂದು ಅಂಗಡಿಯ ಮುಂದೆ ಕುಳಿತುಕೊಂಡಿದ್ದ. ಅವಿನಾಶ ರೇಲಿಂಗ್ ಹಿಡಿದು ನಿಂತು ನನ್ನ ಪ್ರತೀಕ್ಷೆಯಲ್ಲೇ ನಿಂತುಕೊಂಡಿದ್ದ. ಉತ್ತೇಜಿತನಾಗಿ ಹೇಳಿದ, ನಿನಗೇನೂ ಆಗಲಿಲ್ಲ ತಾನೆ? ನಾನು ನಿನಗೋಸ್ಕರ ಇನ್ನೊಮ್ಮೆ ಬರೋಣವೆಂದುಕೊಂಡಿದ್ದೆ. ಆದರೆ ಮೆಟ್ಟಿಲಿನ ಹತ್ತಿರವೇ ಹೀರಾಲಾಲ್ ಚೂರಿ ಹಿಡಿದುಕೊಂಡು ಯಾವ ರೀತಿ ನಿಂತಿದ್ದ ಅಂದ್ರೆ-

ನಾನೆಂದೆ, ಸರಿ ಪರವಾಗಿಲ್ಲ ಬಿಡು.

ಒಂದನೇ ನಂಬರಿನ ರೌಡಿ. ನಾನು ಪೋಲೀಸಿನವರನ್ನ ಕರ್ಕೊಂಡು ಬಂದು ಅವನನ್ನ ಹಿಡಿಸ್ತೀನಿ.

ಸುವಿಮಲನಿಗೇನಾಯ್ತು?

ಏನೂ ಇಲ್ಲ. ಅವನಿಗೆ ತುಂಬಾ ಮತ್ತೇರಿದೆ. ನೀನು ಬಾರೀನ್‌ದಾಗೆ ಒಂದೆರಡೇಟು ಕೊಟ್ಟೆಯೋ ಇಲ್ಲವೋ? ಏಯ್ ನಿನ್ನ ಗಲ್ಲದಲ್ಲಿ ರಕ್ತ ಬರ್ತಾ ಇದೆ ಯಾಕೆ? ನಡಿ ಬೀಡದಂಗಡಿಯಲ್ಲಿ ಸುಣ್ಣ ತೊಗೊಂಡು ಹಚ್ತೀನಿ.

ಬೇಡ. ಬೀಡ ಸುಣ್ಣ ತಾಗಿದರೆ ಗಾಯ ಒಣಗಲು ತುಂಬಾ ತಡವಾಗುತ್ತೆ. ಇನ್ನು ಮನೆಗೆ ನಡಿ. ಆಗಲೇ ಹೇಳಿದೆ ಮನೆಗೆ ಹೋಗೋಣ ಅಂತ, ನಿನಗೋಸ್ಕರ ಇರಬೇಕಾಯಿತು.....

ಅವಿನಾಶ ತುಂಬಾ ಖುಷಿಯಾದ ದನಿಯಲ್ಲಿ ಹೇಳಿದ, ಬಾರೀನ್‌ಗೆ ನಾನೂ ಎರಡು ಸಲ ಬಿಟ್ಟೆ, ಅದನ್ನ ಅವನು ಜೀವಮಾನವಿಡೀ ಮರೆಯೋದಿಲ್ಲ. ನೀನೂ ಒಂದೆರಡು ಕೊಟ್ಟು ಬರಬೇಕಿತ್ತು?

ನಾನು ತುಂಬಾ ಚಿಂತಿತ ಹಾಗೂ ದುಃಖಿತನಾಗಿದ್ದೆ. ತಲೆಯಲ್ಲಿನ ಸಿಡಿತ ಇನ್ನೂ ಕಡಿಮೆಯಾಗಿರಲಿಲ್ಲ. ನಾನೆಂದೆ, ಇಲ್ಲ ನಾನು ಒಂಟಿಯಾಗಿ ಸಿಕ್ಕಿ ಬಿದ್ದೆ. ಅವನು ಕಿವಿಗೆ ಎಷ್ಟು ಜೋರಾಗಿ ಹೊಡೆದಿದ್ದಾನೆಂದರೆ, ಅದೂ ನಿನಗಾಗಿ ನಾನು ಹೊಡೆತ ತಿನ್ನಬೇಕಾಯ್ತು. ಅವಿನಾಶ ನನ್ನನ್ನು ಸಮಾಧಾನಗೊಳಿಸಲೆತ್ನಿಸಿದ, ನೋಡ್ತಾ ಇರು. ಬಾರೀನ್‌ದಾ ನಿನಗೆ ಹೊಡೆದಿದ್ದಾನೆ ಅಲ್ವಾ, ನಾನು ನಿನ್ನ ಸೇಡು ತೀರಿಸಿಕೊಳ್ಳದಿದ್ದರೆ ನೋಡು.

ನೀನು ಯಾವಾಗಲೂ ಏತಿ ಅಂದ್ರೆ ಪ್ರೇತೀನೇ ಮಾಡೋದು. ನೀನು ಸುವಿಮಲನನ್ನ ಕರ್ಕೊಂಡು ಹೋಗು. ನಾನು ಒಬ್ಬನೇ ಟ್ಯಾಕ್ಸಿ ಹಿಡೀತೀನಿ.

ಇರಯ್ಯ ಸ್ವಲ್ಪ. ಒಂದು ಸಿಗರೇಟ್ ಕೊಡು. ಆದರೆ ನನಗೆ ಅದೃಷ್ಟ ಖುಲಾಯಿಸಿತ್ತು, ವ್ಯವಹಾರ ಚೆನ್ನಾಗೇ ಕುದುರಿತ್ತು. ಹೀರಾಲಾಲ್ ಒಂದು ವೇಳೆ ಚೂರಿ ಹೊರ ತೆಗೆಯದೇ ಇದ್ದಿದ್ದರೆ, ನಾನು ಅವನ ಶೋವನ್ನ ತೋರಿಸಿ ಬಿಡ್ತಿದ್ದೆ. ನಾನು ಅನ್ಕೊಂಡಿದ್ದೆ. ನೀನು ಬಾರೀನ್‌ಗೆ, ಒಬ್ಬನೇ ಅನಾಯಾಸವಾಗಿ ಸರಿ. ಸರಿ ನಾನು ಅವನ ಅಂಗಡೀನ ಸುಟ್ಟು ಹಾಕಿ ಬಿಡ್ತೀನಿ, ನಿನ್ನ ಮೈ ಮೇಲೆ ಕೈ ಮಾಡಿದಾನೆ. ನಾನು ಅವನ ಮೇಲೆ ಹೇಗೆ ಸೇಡು ತೀರಿಸ್ಕೋಳ್ತೀನಿ ಅಂದ್ರೆ –

ಇರಲಿ ಬಿಡೋ, ನೀನು ಬಾರೀನ್‌ದಾನನ್ನ ಹೊಡೆದೆ. ಅವನು ಅದರ ಪ್ರತೀಕಾರ ನನ್ನ ಮೇಲೆ ತೀರಿಸಿಕೊಂಡ. ಪುನಃ ನನ್ನನ್ನ ಹೊಡೆದದ್ದಕ್ಕೆ ನೀನು ಸೇಡು ತೀರಿಸ್ಕೊಳ್ತೀಯ, ಅವನು ನಿನ್ನ ಮೇಲಿನ ಸೇಡನ್ನ ಪರೀಕ್ಷಿತನ ಮೇಲೆ ತೀರಿಸ್ಕೊಳ್ತಾನೆ

ಅರೆ, ಪರೀಕ್ಷಿತ ಅಲ್ಲೇ ಉಳಿದು ಬಿಟ್ಟ, ಅವನಿಗೆ ಒಂದು ವೇಳೆ –

ಇರಲಿ, ಪರೀಕ್ಷಿತನಿಗೇನೂ ಆಗೋದಿಲ್ಲ. ಟ್ಯಾಕ್ಸಿ –

ನನ್ನನ್ನು ಟ್ಯಾಕ್ಸಿಯವರೆಗೆ ಹತ್ತಿಸಲು ಬಂದು ಅವಿನಾಶ ಬಾಗಿಲ ಬಳಿ ನಿಂತು ಹೇಳಿದ, ಐದು ರೂಪಾಯಿ ಇದ್ದರೆ ಕೊಟ್ಟು ಹೋಗು, ನಾನು ಫಕೀರನಾಗಿ ಬಿಟ್ಟಿದೀನಿ. ನಂತರ ನಕ್ಕು ಹೇಳಿದ, ಇವತ್ತಿನ ವ್ಯವಹಾರದಲ್ಲಿ ಎಲ್ಲಕ್ಕಿಂತ ಯಾವುದು ಚೆನ್ನಾಗಿತ್ತು ಹೇಳು ?

ಮನಸ್ಸಿಲ್ಲದಿದ್ದರೂ, ನಾನು ಕಷ್ಟಪಟ್ಟು ನಕ್ಕೆ. ಅವಿನಾಶ ಏನು ಹೇಳಬೇಕೆಂದಿದ್ದನೋ ಅದು ನನಗರ್ಥವಾಗಿತ್ತು. ನಾನೆಂದೆ, ಇನ್ನೆಂದೂ ಬಾರೀನ್‌ದಾನ ಹತ್ತಿರ ಬರೋದು ಬೇಡ.

ಓ ಸದ್ಯ ಬದುಕಿದೆವು. ಚುಂಬಕದಂತೆ ಈ ಸ್ಥಳ ನಮ್ಮನ್ನ ಎಳೀತಿತ್ತು. ಅಷ್ಟೊಂದು ಹುಚ್ಚು ಬಂದಿತ್ತು. ಇಸ್ಪೀಟಿನ ಜೂಜು ಆಡಿ ಸಮಯ ನಷ್ಟ ಮಾಡಿಕೊಳ್ಳೋದರಲ್ಲಿ ಏನೂ ಅರ್ಥವಿಲ್ಲ. ಆದ್ದರಿಂದ ಮರ್ಯಾದೆಯಾಗೆ ಅದನ್ನು ಬಿಟ್ಟು ಬಿಡಲು ಸಾಧ್ಯವಾಗ್ತಾ ಇರಲಿಲ್ಲ. ಇಲ್ಲಿಗೆ ಬರೋದನ್ನ ನಿಲ್ಲಿಸಲು ಯಾವೊಂದು ವಿಷಯವೂ ಕೂಡಾ ಮನಸ್ಸಿಗೆ ಹೊಳೆದಿರಲಿಲ್ಲ. ಉಪಾಯಕ್ಕಿಂತ ಹೊಡೆದಾಟ ಎಷ್ಟೊಂದು ಚೆನ್ನ. ಒಂದೇ ಹೊಡೆದಾಟದಲ್ಲೇ ವ್ಯವಹಾರ ಮುಗಿಯಿತು. ಇನ್ನು ಇಲ್ಲಿಗೆ ಎಂದೂ ಬರೋದು ಬೇಡ. ರಿಲೀವ್ಡ್. ಯಾವ ತರಹ ಉಪಾಯ ಮಾಡಿ ಜಗಳ ಪ್ರಾರಂಭಿಸಿದೆ ನೋಡಿದೆಯಾ ?

ಅದಕ್ಕೋಸ್ಕರ ಹೊಡೆತ ತಿನ್ನಬೇಕಾಗಿ ಬಂದದ್ದು ನನಗೆ, ಬರ್ತೀನಿ.

ಶೇಖರನ ತಾಯಿ ಬೆಳಗ್ಗೆ ಒಂಬತ್ತೂವರೆಯಿಂದ ಹನ್ನೊಂದರವರೆಗೆ ದೇವರ ಕೋಣೆಯಲ್ಲೇ ಇರುತ್ತಾರೆ. ಅದು ನನಗೆ ಚೆನ್ನಾಗಿ ಗೊತ್ತು. ಅದಕ್ಕೆಂದೇ ನಾನು ಅವರಲ್ಲಿಗೆ ಹನ್ನೊಂದರ ಸುಮಾರಿಗೆ ಹೋಗಿದ್ದೆ. ಆದರೆ ಅವರಿನ್ನೂ ದೇವರ ಕೋಣೆಯಿಂದ ಹೊರಬಂದಿರಲಿಲ್ಲ. ಶೇಖರನ ಚಿಕ್ಕ ತಂಗಿ, ತಪತಿ ನನಗೆಂದಳು, ನೀವು ಒಳಗೆ ಬಂದು ಕುಳಿತುಕೊಳ್ಳಿ.

ನಾನು ಶೇಖರನ ಕೋಣೆಗೇ ಹೋಗಿ ಕುಳಿತುಕೊಂಡೆ. ಪಾರಿತೋಷ ಈಗಾಗಲೇ ಯೂನಿವರ್ಸಿಟಿಗೆ ಹೊರಟುಹೋಗಿದ್ದ. ತಪತಿಯ ಬಿ.ಎ.ರಿಸಲ್ಟ್ ಇನ್ನೂ ಹೊರ ಬಿದ್ದಿರಲಿಲ್ಲ. ಎಂದೇ ಮನೆಯಲ್ಲೇ ಕುಳಿತು ಅವಳು ತೀರಾ ಊದಿಕೊಂಡಿದ್ದಳು. ಇನ್ನೂ ತುಂಬಾ ದಪ್ಪಗಾಗಿ ಬಿಟ್ಟರೆ, ಅವಳ ಮದುವೆಯಾಗೋದು ತುಂಬಾ ಕಷ್ಟವಾಗಿ ಬಿಡುತ್ತೆ. ಅದಲ್ಲದೆ ತಪತಿಗೆ ಅಷ್ಟಾಗಿ, ಚೆನ್ನಾಗಿ ಕಿವಿ ಕೇಳಿಸೋದಿಲ್ಲ. ಪ್ರತಿಯೊಂದು ವಿಷಯವನ್ನೂ ಅವಳ ಕಣ್ಣೆದುರೇ ನಿಂತು ಹೇಳಬೇಕು, ಹಾಗಿಲ್ಲದಿದ್ದರೆ ಅವಳಿಗೆ ಅರ್ಥವೇ ಆಗೋದಿಲ್ಲ. ಆದರೆ ಯಾವಾಗಲೂ, ಯಾರಿಗೆ

ತಾನೇ ಹುಡುಗಿಯು ಕಡೆ ನೋಡುತ್ತಾ ಕಣ್ಣನ್ನೆಯಲ್ಲೇ ಮಾತನಾಡಲು ಸಾಧ್ಯ? ಎಷ್ಟೋ ವಿಷಯಗಳು ಕಣ್ಣು ತಗ್ಗಿಸಿಕೊಂಡೇ ಹೇಳುವಂಥದ್ದು. ಅದಕ್ಕಾಗಿಯೇ ನಾನು ತಪತಿಯೊಡನೆ ಹೆಚ್ಚಾಗಿ ಮಾತನಾಡುವುದಿಲ್ಲ.

ತಪತಿ ನನ್ನನ್ನು ಕೇಳಿದಳು, ನಾನು ಚಹ ಕುಡಿತೀನೋ ಇಲ್ಲೋ ಅಂತ. ನನಗೆ ಚಹ ಕುಡಿಯೋದೇನೂ ಬೇಕಿರಲಿಲ್ಲ. ಹಾಗಂತ ಹೇಳೋದೇ ಉತ್ತಮ. ಈಗಾಗಲೇ ಆಫೀಸಿಗೆಂದು ಹೊರಟವನು ನಾನು. ಊಟ ಮಾಡಿಕೊಂಡೇ ಮನೆ ಬಿಟ್ಟಿದ್ದೆ. ಈಗಲೇ ಚಹ ಕುಡಿಯಲು ಸಾಧ್ಯವಿಲ್ಲ. ಆದರೆ ಇಷ್ಟು ದೊಡ್ಡ ವಾಕ್ಯವನ್ನ ತಪತಿಗೆ ಕೇಳೋಕಾಗೊಲ್ಲ. ಅವಳಿಗದು ಅರ್ಥವಾಗೋದಿಲ್ಲ. ಒಂದು ವೇಳೆ ಇಷ್ಟರ ಮೇಲೂ ಬಲವಂತ ಮಾಡಿದರೆ, ನಾನು ಇನ್ನೂ ದೊಡ್ಡ ವಾಕ್ಯವನ್ನು ಹೇಳಬೇಕಾದ ಪ್ರಮೇಯ ಒದಗಿಬರುತ್ತೆ. ಈ ಭಯಕ್ಕಾಗಿಯೇ ನಾನು ಮಾತನಾಡದೆ ತಲೆ ಅಲ್ಲಾಡಿಸಿ ಸಮ್ಮತಿ ಸೂಚಿಸಿದೆ. ತಪತಿ ಚಹ ತರಲು ಒಳ ನಡೆದಳು.

ಶೇಖರನ ಕೋಣೆಯ ಟೇಬಲ್ ಕ್ಲಾಕ್ ನಿಂತು ಹೋಗಿತ್ತು. ಯಾರೂ ಅದಕ್ಕೆ ಕೀಲಿ ಕೊಟ್ಟಿರಲಿಲ್ಲ. ಮೂರು ಕಾಗದಗಳು ಅವನ ಮೇಜಿನ ಮೇಲೆ ಇಡಲ್ಪಟ್ಟಿದ್ದವು. ಯಾವುದೂ ಒಡೆದಿರಲಿಲ್ಲ. ಒಂದು ಪುಸ್ತಕ, ಅರೆ ಓದಲ್ಪಟ್ಟು, ಹಾಗೆ ತಿರುಗಿಸಿಡಲ್ಪಟ್ಟಿತ್ತು. ಇದನ್ನೆಲ್ಲ ನೋಡಿ ನನ್ನ ಮೈ ನಡುಗಿತು. ಮನಸ್ಸಿನಲ್ಲಿ ಸಾವಿನ ಯೋಚನೆ ತಲೆ ಎತ್ತಿತು. ಆದರೆ ಶೇಖರ ಏಕೆ ಸಾಯ್ತಾನೆ? ಇಲ್ಲ, ಅವನು ಸಾಯುವ ಸಂಭವವೇ ಇಲ್ಲ. ನನಗೆ ಖಂಡಿತವಾಗಿ ಗೊತ್ತು. ಶೇಖರನಂತಾ ಪರೀಕ್ಷೆಯನ್ನು ಎಲ್ಲರೂ ಅವರ ಜೀವನದಲ್ಲಿ ತೆಗೆದುಕೊಂಡೇ ಇರುತ್ತಾರೆ. ಜೀವನ ಇರೋದು ಅದನ್ನ ಸಮಾಪ್ತಿಗೊಳಿಸೋದಕ್ಕಲ್ಲ. ಶೇಖರ ತುಂಬಾ ದಿನ ಬದುಕುತ್ತಾನೆ. ಅಂದರೆ ನನಗಿಂತ ತುಂಬಾ ದಿನ. ಅವಿನಾಶನಿಗಿಂತಲೂ ಖಂಡಿತವಾಗಿಯೂ ತುಂಬಾ ದಿನ. ಅವಿನಾಶನ ಮುಖ ನೋಡುತ್ತಲೇ ಗೊತ್ತಾಗುತ್ತೆ ಅವನು ದುರ್ಘಟನೆಯಲ್ಲಿ ಸಾಯಲೆಂದೇ ಹುಟ್ಟಿದ್ದಾನೆ ಅಂತ.

ಒಂದು ತಟ್ಟೆಯಲ್ಲಿ ಸ್ವಲ್ಪ ಕತ್ತರಿಸಿದ ಹಣ್ಣು ತೆಗೆದುಕೊಂಡು ಶೇಖರನ ತಾಯಿ ಒಳಬಂದರು. ಬಿಳಿ ಸೀರೆ ಉಟ್ಟ ದೊಡ್ಡ ಶರೀರ. ತಪತಿ ಅವಳ ತಾಯಿಯನ್ನೆ ಹೋಲುತಿದ್ದಾಳೆ. ಮೊದಲು ಮುಜುಗರದಿಂದ, ತಲೆ ಬಗ್ಗಿಸಿ ಕುಳಿತುಕೊಂಡಿದ್ದೆ. ಆ ನಂತರ ಎಲ್ಲಕ್ಕಿಂತ ಸಹಜ ಕೆಲಸ ನೆನಪಾಗುತ್ತಲೇ, ನಾನು ಸಂತಸಗೊಂಡು, ಥಟ್ಟನೆ, ಕುರ್ಚಿ ಬಿಟ್ಟೆದ್ದು ಅವರ ಕಾಲು ಮುಟ್ಟಿ ನಮಸ್ಕರಿಸಿ ಪ್ರಶ್ನಿಸಿದೆ, ಚಿಕ್ಕಮ್ಮ ನಿಮ್ಮ ಆರೋಗ್ಯ ಈಗ ಹೇಗಿದೆ?

ಚೆನ್ನಾಗೇ ಇದೆ. ತುಂಬಾ ದಿನವಾಯ್ತು ನಿನ್ನ ನೋಡಿ. ನೀನು ಹೇಗಿದೀಯಪ್ಪಾ?

ಚೆನ್ನಾಗಿದೀನಿ ನಾನು.....

ನಿಮ್ಮಪ್ಪ, ನಿಮ್ಮಮ್ಮ ಎಲ್ಲಿದ್ದಾರೆ ಈಗ?

ಅವರು ಬಹರಾಂಪುರದಿಂದ ಕೆಲವು ದಿನಗಳ ಹಿಂದೆ ಬಂದು ಚಿಕ್ಕಪ್ಪನ ಮನೇಲಿ ಇಳ್ಕೊಂಡಿದಾರೆ. ನಮ್ಮ ಅಜ್ಜನವರ ಆರೋಗ್ಯ ಚೆನ್ನಾಗಿಲ್ಲ, ಅದಕ್ಕೆ.

ಏನಾಗಿದೆ?

ಸ್ಟ್ರೋಕ್ ತರಹ, ಪಿ.ಜಿ. ಯಲ್ಲಿದ್ದಾರೆ. ಎಲ್ಲರಿಗೂ ತುಂಬಾ ಯೋಚನೆಯಾಗಿ ಬಿಟ್ಟಿದೆ. ನಾನು ಕೆಲವು ದಿನದಿಂದ ಆಸ್ಪತ್ರೆಗೆ ಸುತ್ತಾಡ್ತಾ ಇದೀನಿ. ಬಿಡುವೇ ಸಿಗೋದಿಲ್ಲ.

ನಿನ್ನ ಗಲ್ಲಕ್ಕೆ ಗಾಯವಾಗಿದೆ, ಏನಾಯ್ತು?

ಓ ಅದೇನೂ ಇಲ್ಲ. ನಿನ್ನೆ ಅವಸರವಾಗಿ ಟ್ಯಾಕ್ಸಿ ಹತ್ತೋಕೆ ಹೋಗಿ ಥಟ್ಟನೆ..... ನಿಮ್ಮಜ್ಜನ ವಯಸ್ಸು ಎಷ್ಟಾಗಿರಬಹುದು? ಬಹುಶಃ ಎಪ್ಪತ್ತೈದರ ಹತ್ತಿರ ಇರಬೇಕು ಅಲ್ವಾ? ರೀಟೂವಿನ ಮದುವೆಯಲ್ಲಿ ಅವರನ್ನ ಒಂದು ಸಲ ಕಂಡಿದ್ದೆ. ಒಳ್ಳೇ ಆರೋಗ್ಯವಾಗಿದ್ದರು. ಅವರೇ ನಿನ್ನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದು. ನಿಮ್ಮಪ್ಪನ ಅಪ್ಪ ಅಲ್ವಾ? ಹೌದು, ನಮ್ಮಜ್ಜ ಬಹಳ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡುಬಿಟ್ಟರು. ನಾನು ಕಣ್ಣಲ್ಲೂ ನೋಡಿಲ್ಲ. ನಮ್ಮ ಅಜ್ಜನ ಹತ್ತಿರದ ಸಂಬಂಧಿಕರು ಇವರು.

ಇರಲಿ ಬಿಡು. ಏನೇ ಆಗಲಿ, ಅವರನ್ನ ಎಲ್ಲರೂ ಚೆನ್ನಾಗೇ ನೋಡಿಕೊಂಡಿದೀರ. ಕೇವಲ ನೀನೊಬ್ಬನೆ ಕೊನೇ ಮೊಮ್ಮಗ. ನಿನ್ನ ಮದುವೆ ನೋಡೋಕ್ಕಾಗಲಿಲ್ಲ. ನೀನಿನ್ನು ಮದುವೆ ಯಾಕೆ ಮಾಡ್ಕೊಂಡಿಲ್ಲ?

ಮಾತುಕಥೆ ಸಂಪೂರ್ಣವಾಗಿ ಬೇರೆ ಕಡೆ ಸಾಗಿತ್ತು. ಇದಕ್ಕಾಗಿ ನಾನು ಬಂದಿರಲಿಲ್ಲ. ಶೇಖರನ ತಾಯಿಯ ಮುಖದಲ್ಲಿ ಭಯ ಅಥವಾ ಉದ್ವೇಗವೇನೂ ಕಂಡು ಬರುತ್ತಿರಲಿಲ್ಲ. ಪಾರಿತೋಷನಂತೆ ಸ್ವಲ್ಪ ಅಭಿಮಾನ. ತಪತಿಯ ತರಹ ಅವರೇನು ಕಿವುಡರಲ್ಲ. ಆದರೆ ಪ್ರತಿಯೊಂದು ಮಾತನ್ನು ನನ್ನ ಕಣ್ಣಲ್ಲಿ ಕಣ್ಣಿಟ್ಟು ಹೇಳುತ್ತಿದ್ದರು. ನಾನು ಮಳೆಯಲ್ಲಿ ನೆನೆದ ಚೆಕ್ಕಿನ ತರಹ, ಮನಸ್ಸನ್ನ ಒಮ್ಮೆ ಜೋರಾಗಿ ಕೊಡವಿಕೊಂಡು ಹೇಳಿದೆ, ಚಿಕ್ಕಮ್ಮ ಶೇಖರನ ವಿಷಯ ಏನಾದರೂ ತಿಳೀತೇ?

ಅವರು ಸ್ವಲ್ಪ ಹೊತ್ತು ಸುಮ್ಮನೇ ಕುಳಿತಿದ್ದರು. ಅನಂತರ ಮೆಲ್ಲನೆ ನಿಧಾನವಾಗಿ ಹೇಳಿದರು, ನನ್ನ ಮನಸ್ಸಿಗನಿಸುತ್ತೆ ಅವನೆಲ್ಲೋ, ಹೊರಗೇ ಹೋಗಿರಬೇಕು. ಮೊನ್ನೆ ದಿನ, ಮಧ್ಯಾಹ್ನ ಆಫೀಸಿನಿಂದ, ಹೊರ ಹೊರಡುವ ಮೊದಲು, ಅವನು, ಕೋ – ಆಪರೇಟಿವ್‌ನಿಂದ ಐನೂರು ರೂಪಾಯಿ ತೆಗೆದುಕೊಂಡಿದ್ದಾನಂತೆ. ಆದರೆ ನಮಗೊಂದು ವಿಷಯಾನೂ ತಿಳಿಸಿಲ್ಲ. ಅದಲ್ಲದೆ ಟೆಲಿಫೋನ್ ಕೂಡಾ ಮಾಡಿಲ್ಲ. ಜೊತೆಗೆ ಬಟ್ಟೇ ಬರೇನೂ ತೊಗೊಂಡು ಹೋಗಿಲ್ಲ. ಈ ರೀತಿ ಏಕಾಏಕಿ ಜನ ಹೋಗೋದು ಸನ್ಯಾಸಿಯಾಗೋಕೆ ಮಾತ್ರ.

ನಾನು ಶುಷ್ಕನಗೆ ನಕ್ಕು ಹೇಳಿದೆ, ಏನೇ ಹೇಳಿ, ಶೇಖರ ಸನ್ಯಾಸಿ ಆಗೋ ಅಂಥಾ ಹುಡುಗನೇನಲ್ಲ.

ಮಾತಾಡಿ ಮುಗಿಸುತ್ತಲೇ, ನಾನು ತಪ್ಪು ಮಾಡಿದೆ ಅಂತ ನನಗನ್ನಿಸಿತು. ತಾಯಂದಿರಿಗೆ ಈ ರೀತಿ ಹೇಳಿದರೆ, ಇಷ್ಟವಾಗೋದಿಲ್ಲ. ಪ್ರತಿಯೊಬ್ಬ ತಾಯಿಯೂ, ಬಹುಶಃ ಇಚ್ಛಿಸೋದು ತನ್ನ ಮಗ ಸಾಧು ಸನ್ಯಾಸಿಯಾಗಲೀಂತ. ಆದರೆ ಸನ್ಯಾಸಿ ತರಹ ಎಲ್ಲವನ್ನೂ ಬಿಟ್ಟು ಬಿಡಬೇಕೂಂತಲ್ಲ. ಜೀವನದಲ್ಲಿದ್ದುಕೊಂಡೇ, ಒಂದು ಒಳ್ಳೇ ಹುಡುಗೀನ ನೋಡಿ, ಮದುವೆ ಮಾಡಿಕೊಂಡು ನೌಕರಿಯಲ್ಲಿ ಉನ್ನತಿ

ಹೊಂದಿ, ಸಾಧು ಸನ್ಯಾಸಿಯ ತರಹ ಇರಲಿ ಅಂತ. ಆದರೆ ಆಡಿದ ಮಾತನ್ನು ಪುನಃ ಈಗ ಹಿಂತಿರುಗಿ ಪಡೆಯಲು ಸಾಧ್ಯವಿಲ್ಲ.

ಚಿಕ್ಕಮ್ಮ ಎಂದಳು, ಕೆಲವು ದಿನಗಳಿಂದ ಅವನು ಹೇಳ್ತಾನೆ ಇದ್ದ, ನಾನು ಬೇರೇನೇ ಇರಬೇಕೂಂತ ಮಾಡಿದೀನಿ ಅಂತ. ನಾನಂತೂ ಅದಕ್ಕೆ ಎಂದೂ ಅಡ್ಡಿ ಬಂದಿರಲಿಲ್ಲ. ಸುಮ್ಮನೆ ಯಾಕಪ್ಪಾ ಅಂತ ಮಾತ್ರ ಪ್ರಶ್ನಿಸಿದ್ದೆ. ಮಕ್ಕಳು ಮದುವೆ ಮಾಡ್ಕೊಂಡು, ಹೊಂದಾಣಿಕೆಯಾಗದಿದ್ದಾಗ, ಅಮ್ಮ ಅಪ್ಪನಿಂದ ದೂರ ಇರ್ತಾರೆ, ಅದು ಸಹಜ. ಆದರೆ ಅವನಿಗೆ ಮನೇನಲ್ಲಿ ಯಾರೂ ಏನೊಂದೂ ಅಡಚಣೆ ಉಂಟು ಮಾಡದೇ ಇದ್ದಾಗಲೂ, ಯಾಕೆ ಅವನು ಹೊರಟು ಹೋಗೋದಕ್ಕೆ ಆಸೆ ಪಟ್ಟನೋ ಅರ್ಥವಾಗ್ತಿಲ್ಲ. ನಿನಗೇನಾದ್ರೂ ಗೊತ್ತಾ?

ಅವನಿಗೇನೂ ತೊಂದ್ರೆಯಾಗೋದಿಲ್ಲ ಅಂತ ಗೊತ್ತಿದೆ. ಅವನಿಗೇನಾದ್ರೂ ತೊಂದ್ರೆಯಾಗಿದ್ದರೆ, ಸುಳಿವು ಸಿಕ್ಕಿ ಬಿಡುತ್ತಿತ್ತು. ಇವತ್ತು ದೇವರ ಕೋಣೆಯಲ್ಲಿ ಇದನ್ನ ತಿಳಿಯಲೆಂದೇ ಕುಳಿತಿದ್ದೆ. ನನ್ನ ಮನಸ್ಸಿಗನಿಸ್ತಾ ಇದೆ. ಅವನು ಎಲ್ಲೇ ಇರಲಿ ಚೆನ್ನಾಗಿದ್ದಾನೆ ಅಂತ. ಆದರೆ ಮನೆ ಬಿಟ್ಟು ಹೋಗಬೇಕು ಅಂತ ಹೋಗಿದ್ದರೆ, ಅದು ಅವನ ಸ್ನೇಹಿತರಿಗ್ಯಾರಿಗಾದ್ರೂ ಗೊತ್ತಿರುತ್ತೆ. ನೀನು ನನ್ನ ಹತ್ತಿರ ಏನೂ ಮುಚ್ಚಿಡ್ತಾ ಇಲ್ಲ ತಾನೇ?

ನಾನು ಮೊಜಾಯಿಕ್ ಮಾಡಿದ ನೆಲದ ಕಡೆ ನೋಡುತ್ತಲಿದ್ದೆ. ತಕ್ಷಣ, ಒಂದು ವಿಷಯ ಮನಸ್ಸಿಗೆ ಹೊಳೆಯಿತು. ಒಂದು ವೇಳೆ ಶೇಖರ ಮನೆ ಬಿಟ್ಟೇ ಹೊರಟು ಹೋಗಬೇಕು ಅಂತ ಅಂದುಕೊಂಡಿದ್ದರೆ ಅವನಿಗೆ ತನ್ನ ಬಗ್ಗೆ ಒಂದಿನಿತೂ, ಸ್ವಾರ್ಥ ಭಾವನೆ ಇಲ್ಲ. ಅದಲ್ಲದೆ ಶೇಖರನ ಮನೆಯ ಆರ್ಥಿಕ ಸ್ಥಿತಿಯೂ ಉತ್ತಮವಾಗೇ ಇತ್ತು. ಮನೆಯ ಕೆಳಗಿನ ಸಾಲದಂಗಡಿಯಿಂದ ಬಾಡಿಗೆ ಬರುತ್ತೆ, ಅಲ್ಲದೆ ಡೈಮಂಡ್ ಹಾರ್ಬರ್‌ನಲ್ಲಿ ತೋಟದ ಮನೆ ಬೇರೆ ಇದೆ. ಅದನ್ನ ಅಮೆರಿಕನ್ ಕಂಪೆನಿಗೆ ಬಾಡಿಗೆ ಕೊಟ್ಟಿದ್ದಾರೆ. ಶೇಖರ, ಒಂದು ವೇಳೆ ಹೊರಟು ಹೋದರೂ ಅದರಿಂದ ಆರ್ಥಿಕ ಪರಿಸ್ಥಿತಿ ಏನೂ ಹದಗೆಡೋಲ್ಲ. ಶೇಖರ ಒಂದು ವೇಳೆ ನಾಗಪುರ ಅಥವಾ ಕಾನಪುರದಲ್ಲಿ ಕೆಲಸ ಸಿಕ್ಕು ಬೇರೆಯೇ ಇದ್ದರೆ, ಅದೊಂದು ರೀತಿಯದಾಗುತ್ತಿತ್ತು. ಆದರೆ ಕಲಕತ್ತೆಯಲ್ಲೇ ಅವನು ಬೇರೆ ಇರೋದು ಹೇಗೆ ಸಾಧ್ಯ? ಮದುವೆಯಾಗದೆ, ಅಮ್ಮನೊಡನೆ ಜಗಳವಾಡದೆ, ಬೇರಿನ್ಯಾವ ಕಾರಣವೂ ಇಲ್ಲದೆ ಯಾವ ಗಂಡಸೂ ಬೇರೆ ಇರೋದಿಲ್ಲ. ನಾನು ಉತ್ತರಿಸಿದೆ, ಇಲ್ಲ ಚಿಕ್ಕಮ್ಮ ಖಂಡಿತವಾಗಿಯೂ ನನಗೇನು ಗೊತ್ತಿಲ್ಲ.

ಶೇಖರನ ತಾಯಿ, ಈ ಸಲ ಸಂಪೂರ್ಣವಾಗಿ, ಕಟ್ಟುನಿಟ್ಟಾಗಿ ಮಾತನಾಡಿದರು. ಗಂಟಲಿನ ಧ್ವನಿ ತೀವ್ರವಾಗಿತ್ತು, ಸುನೀಲ್, ನನಗೆ ಮಾತುಕೊಡು. ಈ ತರಹ ಅಡ್ಡನಾಡಿಯಾಗಿದ್ದುಕೊಂಡು ನಿನ್ನ ದೇಹಾನ ಕೆಡಿಸಿಕೊಳ್ಳೋದಿಲ್ಲಂತ?

ಚಕಿತನಾಗಿ ಕೇಳಿದೆ, ನಾನಾ? ಆನಂತರ ನಕ್ಕು ಹೇಳಿದೆ, ಚಿಕ್ಕಮ್ಮ ನಾನಂತೂ ಏನೂ ಮಾಡಿಲ್ಲ. ಶೇಖರ ನಮ್ಮ ನಡುವೆ, ಸ್ವಲ್ಪ ಒಂದು ಥರಾ ಮನುಷ್ಯ. ಅವನು ಕ್ರಮೇಣ ಸರಿಯಾಗ್ತಾನೆ. ನೀವ್ಯಾಕೆ ಅಷ್ಟೊಂದು ಯೋಚನೆ ಮಾಡ್ತೀರಾ?

ಶೇಖರನ ವಿಷಯ ಹಾಗಿರಲಿ, ನೀನು ನನಗೆ ಯಾವೊಂದು ದುಃಖವನ್ನೂ ಕೊಡೋದಿಲ್ಲ ಅಂತ ಮಾತುಕೊಡು.

ಚಿಕ್ಕಮ್ಮ ನಾನು ಎಂದೂ ನಿಮಗೆ ದುಃಖವನ್ನು ಕೊಡೋದಿಲ್ಲ. ನಾನು ಶೇಖರನಿಗೆ.....

ನಾನು ನಿನಗಾಗಿಯೇ ಇಂದು ನಿನ್ನನ್ನು ಕರೆಸಿದ್ದು. ನಿಮ್ಮಮ್ಮ ಇರೋದು ಬೇರೆ ಕಡೆ. ನಾನು ನಿನ್ನ ತಾಯಿಯಂತೆ. ಅದಂತೂ ಖಂಡಿತ. ಆದರೆ ನಾನು ಎಂದೂ..... ನೀನು ಇವತ್ತು ನನಗೊಂದು ಮಾತು ಕೊಡ್ತೀಯಾ? ಸ್ವಲ್ಪ ಒಳಗಡೆ ಬಾ. ತಪತಿ ಅದೇ ಸಮಯಕ್ಕೆ ಚಹವನ್ನು ತೆಗೆದುಕೊಂಡು ಬಂದಳು. ಚಿಕ್ಕಮ್ಮ ಎಂದಳು, ಇರು, ಕೋಣೆಗೆ ಬಂದು ಚಹ ಹಾಗೂ ಸಿಹಿ ತಿನ್ನುವಿಯಂತೆ. ನನ್ನ ಜೊತೆ ಬಾ. ಚಪ್ಪಲಿಯನ್ನು ಬಿಚ್ಚಿ ಈಗಲೇ ಬಾ.

ಚಿಕ್ಕಮ್ಮ ಮೊದಲು ದೇವರ ಕೋಣೆಗೆ ಕರೆದುಕೊಂಡು ಹೋದಳು. ಬರೀ ಬಿಳಿ ಅಮೃತ ಶಿಲೆಯಿಂದಲೇ ಕಟ್ಟಲ್ಪಟ್ಟ ಚಿಕ್ಕ ಕೋಣೆ. ಶಾಂತ ವಾತಾವರಣ, ಅರಳಿದ ಹೂ ಹಾಗೂ ಚಂದನದ ಸುವಾಸನೆ. ದೇವರ ಕೋಣೆಗೆ ಹೋಗಲು ನನಗ್ಯಾವಾಗಲೂ ಇಷ್ಟ. ಕಣ್ಣೆರಡೂ ತೆರೆದೇ ಇದ್ದೆ. ಚಿಕ್ಕಮ್ಮನ ಮುಖಭಾವ ಧುಮುಗುಡುತ್ತಿತ್ತು. ಶೇಖರನ ಬಗ್ಗೆ ಮಾತನಾಡುತ್ತಿದ್ದಾಗ, ಅವಳು ಉದಾಸೀನ ಪೆಚ್ಚುಮೋರೆ ಹಾಕಿಕೊಂಡಿದ್ದಳು. ಆದರೆ ನನ್ನ ವಿಷಯಕ್ಕಾಗಿ ಅವಳ ಮುಖ ಮುದುಡಿತ್ತು. ಏನೋ ಇದೀಗ ಕಣ್ಣುಗಳಿಂದ ಕಣ್ಣೀರು ಸುರಿಯುತ್ತೇನೋ ಅನ್ನೋ ರೀತಿ. ಅಳದೇ ಇದ್ದರೇನೇ ಒಳ್ಳೆಯದು. ಬೇರೆಯವರು ಅಳೋದನ್ನ ನೋಡಿದರೆ, ನನಗೂ ಕಣ್ಣೀರು ಸುರಿಸಬೇಕು ಅಂತ ಅನ್ನಿಸುತ್ತೆ. ಅದಂತೂ ಬಹಳ ಅಸಹ್ಯ.

ಚಿಕ್ಕಮ್ಮ ಹೇಳಿದಳು, ನೀನು ನನ್ನ ಮಾತನ್ನ ನಡೆಸಿಕೊಡ್ತೀಯ ತಾನೇ. ನೀನು ಬಂಗಾರದಂಥ ಹುಡುಗ. ಜನಾರ್ದನನ ಕಾಲು ಮುಟ್ಟಿ ಆಣೆ ಮಾಡು. ಗೊತ್ತೂ ಗುರಿಯಿಲ್ಲದೆ ಇನ್ನು ಅಲೆದಾಡೋದಿಲ್ಲ ಅಂತ, ಅಪ್ಪ ಅಮ್ಮನಿಗೆ ತೊಂದ್ರೆ ಕೊಡೋದಿಲ್ಲ ಅಂತ. ಇನ್ನು ಮುಂದೆ ಅತ್ಯಾಚಾರ, ಅನಾಚಾರ ಮಾಡಿ ಜೀವನವನ್ನು ಹಾಳು ಮಾಡಿಕೊಳ್ಳೋದಿಲ್ಲಂತ ಹೇಳು.

ನಾನು ಕಾಲು ಮಡಿಚಿಕೊಂಡು ಕುಳಿತುಕೊಂಡೆ. ಬಂಗಾರದ ಕಟ್ಟಿನ, ಮಂಟಪದಲ್ಲಿಟ್ಟಿದ್ದ ಲಕ್ಷ್ಮೀನಾರಾಯಣರ ಮುಂದೆ, ಪ್ಯಾಂಟು ಹಾಕಿಕೊಂಡು ದೇವರ ಕೋಣೆಗೆ ಹೋಗಿ ಕುಳಿತುಕೊಳ್ಳೋದಕ್ಕಾಗುತ್ತದೆಯೇ? ತೊಡೆಯ ಹತ್ತಿರ ಹಿಡಿದುಕೊಂಡಂತಾಗುತ್ತಿತ್ತು. ಕತ್ತು ಹೊರಳಿಸಿ ಒಮ್ಮೆ ಚಿಕ್ಕಮ್ಮನ ಕಡೆ ನೋಡಿದೆ. ನನಗೆ ಏನನ್ನಾದರೂ ಹೇಳಬೇಕೆಂದೆನಿಸಿತು. ನಾನೆಂದೆ, ಚಿಕ್ಕಮ್ಮ ನಾನು ಆಣೆ ಮಾಡಲು ಇಷ್ಟಪಡೋದಿಲ್ಲ. ಒಮ್ಮೆ ಆಣೆ ಇಟ್ಟರೆ ಮುರಿಯೋಕೆ ನನಗಿಷ್ಟವಿಲ್ಲ. ಅದಲ್ಲದೆ ಆಣೆ ಮಾಡಿ ಪ್ರಮಾಣ ಮಾಡಲೂ ನನಗೆ ಇಷ್ಟವಿಲ್ಲ. ಏಕಂದ್ರೆ ನನ್ನ ವಯಸ್ಸು ಈಗ ಮೂವತ್ತು. ನಾನು ನನ್ನ ಮಟ್ಟಿಗೆ ಎಷ್ಟು ಸಾಧ್ಯವೋ ಅಷ್ಟನ್ನು ನನ್ನ ಜೀವನದ ಬಗ್ಗೆ ಅರ್ಥ ಮಾಡಿಕೊಂಡಿದ್ದೇನೆ. ಒಂದು ವೇಳೆ ಅರ್ಥ ಮಾಡಿಕೊಳ್ಳದಿದ್ದರೆ, ಬೇರಿನ್ಯಾರೂ ನನಗದನ್ನ ಅರ್ಥ ಮಾಡಿಸಲೂ ಸಾಧ್ಯವಿಲ್ಲ.

ಅದಲ್ಲದೆ ಖಂಡಿತವಾಗಿಯೂ ನಾನು ನನ್ನ ಜೀವನವನ್ನು ಹಾಳು ಮಾಡಿಕೊಳ್ಳಲು ಇಷ್ಟಪಡುವುದಿಲ್ಲ. ನಾನು ನನ್ನ ಜೀವನವನ್ನು ಪ್ರತಿಕ್ಷಣವೂ, ಶುದ್ಧವಾಗಿ ಹಾಗೂ ಒಳ್ಳೆಯ ರೀತಿಯಲ್ಲಿ ಜೀವಿಸಲು ಬಯಸುತ್ತೇನೆ. ನಾನು ಆ ತರಹದ ಕೆಲಸವೆಲ್ಲ ಮಾಡಿ ಖಂಡಿತವಾಗಿಯೂ, ನನ್ನ ಮನಸ್ಸನ್ನು ಅಪವಿತ್ರ ಮಾಡಿಕೊಳ್ಳೋದಿಲ್ಲ. ಇದಕ್ಕಾಗಿ ನಾನು ನನ್ನದೇ ಆದ ಹಾದಿಯನ್ನು ಹುಡುಕಿಕೊಳ್ಳಲೇಬೇಕು. ಇದಕ್ಕಾಗಿ ನಾನು ಅಪ್ಪ, ಅಮ್ಮ, ದೇವರು, ಆಫೀಸಿನ ಸಾಹೇಬರು, ಭಾರತ ಸಂವಿಧಾನ ಇದ್ಯಾವುದರ, ಮನಸ್ಸಿಗೆ ಹಿಡಿಸದ ಮಾತನ್ನ ಕೇಳೋದಿಲ್ಲ. ನಾನು ಇನ್ನು ಅನೇಕ ಹಾದಿಗಳಲ್ಲಿ ನಡೆಯಬೇಕಾಗಿದೆ.

ಆದರೆ ಚಿಕ್ಕಮ್ಮನ ಉದ್ವೇಗದ ಮುಖದ ಕಡೆ ನೋಡಿ ಇವನ್ನೆಲ್ಲ ಹೇಳೋಕಾಗೋದಿಲ್ಲ ಎಂದೆನಿಸಿತು. ಅಮ್ಮ ಚಿಕ್ಕಮ್ಮ ಅತ್ತೆ ಇವರೆಲ್ಲರಿಗೂ ನಾನು ಕಾಲು ಮುಟ್ಟಿ ನಮಸ್ಕರಿಸುತ್ತೇನೆ. ಥಟ್ಟನೆ ಅವರೇನಾದ್ರೂ ಕಂಡರೆ ಕೈಯಲ್ಲಿನ ಪೂರ್ತಿಯಾಗ್ತೀರೋ ಸಿಗರೇಟನ್ನು ಬಿಸಾಡಿ ಬಿಡಬೇಕಾಗುತ್ತೆ. ಅವರ ಹತ್ತಿರ, ಈ ರೀತಿಯ ಮಾತುಗಳನ್ನು ಹೇಳೋಕಾಗೋದಿಲ್ಲ. ಅವರಿಗೆ ಇವೆಲ್ಲ ಬರೀ ದೊಡ್ಡ ದೊಡ್ಡ ಮಾತುಗಳು. ಇದನ್ನ ಅವರು ಗಮನಕ್ಕೆ ತೆಗೆದುಕೊಳ್ಳೋದಿಲ್ಲ. ನನಗೆ ಯಾವಾಗಲೂ ಅವರನ್ನೆಲ್ಲಾ ಸಂತೋಷವಾಗಿಟ್ಟಿರಬೇಕು ಅಂತಲೇ ಆಸೆ. ಚಿಕ್ಕಮ್ಮನ ವ್ಯಾಕುಲ ಮುಖವನ್ನು ಒಂದು ವೇಳೆ ಒಂದು ಕ್ಷಣಕ್ಕಾದರೂ ಸಂತೋಷಪಡಿಸಲು ಸಾಧ್ಯವಾದರೆ, ಅಷ್ಟೇ ಹೆಚ್ಚು. ಒಂದು ಕ್ಷಣದ ಖುಷಿಯೂ ಕೂಡಾ ಜೀವನದಲ್ಲಿ ಕಡಿಮೆ ಏನಲ್ಲ. ಆದ್ದರಿಂದ ಏನು ಬೇಕಾದರೂ ಸಾಧಿಸಬಹುದು. ನಿನ್ನೆ ಬಾರೀನ್‌ದಾನ ಕಾಲು ಹಿಡಿದಿದ್ದೆ. ಇವತ್ತು ಲಕ್ಷ್ಮೀ ಜನಾರ್ದನರ ಕಾಲನ್ನು ಹಿಡಿಯಲು ಸಾಧ್ಯವಿಲ್ಲವೇ ?

ನಾನು ಬಗ್ಗಿ ಕೈ ಮುಂದೆ ಮಾಡಿದೆ. ಅದೇ ಕ್ಷಣದಲ್ಲಿ, ಆಶ್ಚರ್ಯ, ನನ್ನ ಮನದಲ್ಲಿ ಜಮುನಾಳ ಮುಖ ನೆನಪಿಗೆ ಬಂತು. ಮೂರು ವರ್ಷದ ಹಿಂದೆ ಮದುವೆ ಮನೆಯಲ್ಲಿ, ಉತ್ಸವದ ನಡುವೆ, ಮೆಟ್ಟಿಲಿನ ಮೇಲೆ ನಿಂತ ಅವಳ ಪವಿತ್ರ ಮುದ್ದು ಮುಖ, ಪಾರಿವಾಳದ ತರಹ ತೀಕ್ಷ್ಣ, ಸರಳ ಕಣ್ಣುಗಳು. ಆ ಕಣ್ಣುಗಳು, ನೀಲಕಾಂತ ಮಣಿಯ ಕಡೆ ದಿಟ್ಟಿಸಿ ನೋಡುವ ತರಹ, ಆ ಪ್ರಪಂಚವನ್ನು ನೋಡುತ್ತಿವೆ. ಜಮುನಾಳ ವಿಷಯ ನೆನಪಾದೊಡನೆ ಥಟ್ಟನೆ ನನ್ನ ಮನಸ್ಸಿಗೆ ಹಿತವೆನಿಸಿತು. ನಾನು ದೇವರಿಗೆ ನಮಸ್ಕರಿಸಿ, ವಿನೀತಭಾವದಿಂದ ಹೇಳಿದೆ, ಚಿಕ್ಕಮ್ಮ ನಾನು ಮಾತುಕೊಡ್ತೀನಿ. ನಾನು ಯಾರಿಗೂ ತೊಂದ್ರೆ ಮಾಡೋದಿಲ್ಲ ಹಾಗೂ ಯಾವೊಂದು ಅತ್ಯಾಚಾರ ಅನಾಚಾರವನ್ನು ಮಾಡೋದಿಲ್ಲ. ನಾನು ಶೇಖರನನ್ನು ಮರಳಿ ತಂದುಕೊಡುತ್ತೇನೆ.

ಮಧ್ಯಾಹ್ನ ಮೂರರ ಸಮಯದಲ್ಲಿ, ಆಫೀಸಿಗೆ ಸುವಿಮಲ ಪುನಃ ಬಂದು ಕುಳಿತಿದ್ದಾನೆ. ಬಹಳ ಮನಸ್ಸಿಟ್ಟು ಕೆಲಸ ಮಾಡುತ್ತಲಿದ್ದೆ, ಅರ್ಥಾತ್, ಮೇಜಿನ ತುಂಬಾ, ಕಾಗದ ಪತ್ರಗಳನ್ನು ಹರಡಿಕೊಂಡು, ಸಿಗರೇಟಿನ ಹೊಗೆ ಬಿಡುತ್ತ, ಪೆನ್ಸಿಲ್

ಕೈಗೆತ್ತಿಕೊಂಡು ಬರೆಯುತ್ತಲಿದ್ದೆ. ಈ ಸಮಯದಲ್ಲೇ ಸುವಿಮಲ ಬಂದದ್ದು. ಅವನನ್ನು ನೋಡಿ ಇಂದು ನಾನು ಸ್ವಲ್ಪ ಸಿಡಿಮಿಡಿಗೊಂಡೆ. ಸುವಿಮಲನದು, ಒಂದು ರೀತಿಯ ಸ್ವಭಾವ. ಹಿಂದಿನ ದಿನದ ವಿಷಯವನ್ನೇ ಎತ್ತಿಕೊಂಡು, ಅದರ ಬಗ್ಗೆಯೇ ಮಾತನಾಡೋದು. ಅದಲ್ಲದೆ ಇಂದು ನಾನು ಸುವಿಮಲನೊಂದಿಗೆ ಎಲ್ಲಿಗೂ ಹೋಗೋದಿಲ್ಲ. ನಾನಿವತ್ತು ಆಸ್ಪತ್ರೆಗೆ ಹೋಗಲೇಬೇಕು. ಅಲ್ಲದೆ ಅಮ್ಮ ಬೇರೆ ಚಿಕ್ಕಪ್ಪನ ಮನೆಗೆ ರಾತ್ರಿ ಊಟಕ್ಕೆ ಬರಬೇಕೆಂದು ಹೇಳಿಕಳಿಸಿದ್ದಾಳೆ.

ಸುವಿಮಲ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಲೇ ಹೇಳಿದ, ನಿಜ ಕಣೋ, ಬಾಗಿಲ ಎದುರು ನಿನ್ನ ರಿಸೆಪ್‌ಷನಿಸ್ಟ್ ಕಾಣಿಸಲಿಲ್ಲ. ಆಫೀಸು ಭಣಭಣ ಅನ್ನಿಸ್ತಾ ಇದೆ.

ನಾನು ಸನ್ನೆ ಮಾಡಿ ಅವನನ್ನು ಸುಮ್ಮನಿರುವಂತೆ ಹೇಳಿದೆ. ಮೂಲೆಯ ಮೇಜಿನ ಗೋವಿಂದ ಬಾಬುಗಳು, ಹೊರಗಿನ ಡ್ಯೂಟಿ ಮುಗಿಸಿಕೊಂಡು ಬಂದು, ಇದೀಗ ಕೆಲಸ ಆರಂಭಿಸಿದ್ದರು. ಗೋವಿಂದ ಬಾಬುಗಳು ಸ್ವಲ್ಪ ಸೀರಿಯಸ್ ಸ್ವಭಾವದ ವ್ಯಕ್ತಿ. ಖಂಡಿತವಾಗಿಯೂ ಅವರಿದನ್ನೆಲ್ಲ ಇಷ್ಟಪಡೋದಿಲ್ಲ. ಆತ ಪುನಃ ಬಹುಶಃ ಭಾವನವರ ಬಳಿ ಏನೆಲ್ಲ ಬಾಡಿ ಚುಚ್ಚುತ್ತಾರೋ ಯಾರಿಗೆ ಗೊತ್ತು? ಏನೋ ಕೈ ಅಲ್ಲಾಡಿಸಿ ನಟಿಕೆ ಮುರಿಯುವ ಭಂಗಿ ಮಾಡಿ ಹೇಳಿದೆ, ಓ! ಎಷ್ಟೊಂದು ಕೆಲಸ ಸೇರಿಕೊಂಡು ಬಿಟ್ಟಿದೆ. ಇವತ್ತು ಅದನ್ನೆಲ್ಲ ಪೂರ್ತಿ ಮಾಡಿ ಮುಗಿಸಲೇಬೇಕು.

ಬರೀ ವಿಜ್ಞಾಪನೆಯ ಲೇಖನ ಬರೆಯೋದಷ್ಟೆ ಅಲ್ವಾ. ಇದೂ ಒಂದು ಕೆಲಸ ಅಲ್ವೇ ?

ನಾನು ವಿಷಾದದ ನಗೆ ನಕ್ಕು ಹೇಳಿದೆ, ಕೆಲಸದ ಬಗ್ಗೆ ನಿನಗೇನು ಗೊತ್ತಾಗುತ್ತೆ? ಇಡೀ ದಿನ ಮನೇನಲ್ಲಿ ಆರಾಮವಾಗಿದ್ದು ಮಧ್ಯಾಹ್ನವಾದರೆ ಹರಟೆ ಹೊಡೆಯೋಕೆ ಹೊರಟುಬಿಡ್ತೀಯ. ಇರು ಚಹ ಕುಡಿಯುವಿಯಂತೆ.

ಮೇಜಿನ ಮೇಲಿನ ಕರೆಗಂಟೆಯನ್ನು ಎರಡು ಸಾರಿ ಒತ್ತಿ ಟ್ರೆಂಟ್ರೆಂ ಎಂದು ಶಬ್ದ ಮಾಡಿದೆ. ಗಂಟೆ ಬಾರಿಸಿ ಯಾರನ್ನಾದರೂ ಕರೆಯಲು ನನಗೆ ತುಂಬಾ ಇಷ್ಟ. ಅಲ್ಲೇ ಎದುರುಗಡೆ, ಬಾಗಿಲ ಹತ್ತಿರವೇ ಝುರಿಸಿಂಗ್ ಕುಳಿತುಕೊಳ್ಳುತ್ತಾನೆ. ನೇರವಾಗಿ ಕುಳಿತ ಅವನ ತಲೆ ನನಗೆ ಕಾಣಿಸುತ್ತೆ. ದನಿಯನ್ನು ಎತ್ತರಿಸದೇ ಅವನನ್ನು ಕೂಗಿದರೂ, ಅವನಿಗದು ಕೇಳಿಸಿಯೇ ಕೇಳುತ್ತೆ. ಆದರೆ ಕರೆಗಂಟೆ ಒತ್ತೋದೇ ಇಲ್ಲಿನ ನಿಯಮ. ಕರೆಗಂಟೆ ಕೇಳಿ ಝುರಿಸಿಂಗ್, ಬಂದು ಮೇಜಿನೆದುರು ನಿಂತಾಗ, ಮಾತನಾಡದಿದ್ದರೆ ಚೆನ್ನಾಗಿರೋದಿಲ್ಲ. ಅವನನ್ನ ನೋಡುತ್ತಲೇ ಏನು ಹೇಳಬೇಕೆಂದು ಗೊತ್ತಾಗೋದಿಲ್ಲ. ಮುಖ ಕೆಳಗೆ ಮಾಡಿ, ಏನೋ ಕೆಲಸ ಮಾಡುತ್ತಿರುವಂತೆ, ಅದೇ ಭಂಗಿಯಲ್ಲೇ ಕುಳಿತಿರಬೇಕು. ನಂತರ ಮುಖವೆತ್ತಿ, ಕನಸಿನಿಂದ ಎಚ್ಚೆತ್ತಂತೆ, ಅದೇ ಸ್ವರದಲ್ಲಿ ಹೇಳಬೇಕಾಗುತ್ತದೆ, ಓ ನೀನಾ ಕೇಳಿಲ್ಲಿ. ಈ ರೀತಿ ಮಾಡೋದ್ರಿಂದ ಏನೋ ಒಂದು ರೀತಿ ಹೆಚ್ಚುಗಾರಿಕೆ ಉಂಟಾಗುತ್ತದೆ. ಇತರರನ್ನು ಅವಹೇಳನ ಮಾಡಿದಷ್ಟು ನಮ್ಮ ಹೆಚ್ಚುಗಾರಿಕೆ ಹೆಚ್ಚುತ್ತೆ ಅನ್ನೋದು ಈ ನೌಕರಿಯಲ್ಲಿ ನನಗರ್ಥವಾಗಿದೆ. ಅದೂ ಅಲ್ಲದೆ ಗಂಟೆ ಬಾರಿಸುವುದರೊಂದಿಗೇ

ಆ ಕಡೆ ವನಮಾಲಿ ಬಾಬುಗಳೂ ಕೂಡಾ ಈ ಸಲ ಕರೆದವರು ಯಾರು ಅಂತ ನೋಡಲು ಹೆಚ್ಚು ಕಾತುರರಾಗಿ ಎಚ್ಚರವಹಿಸಿ ನೋಡ್ತಾರೆ.

ಏನೇ ಬೇಕಿದ್ದರೂ ಕೂಡಾ, ನಾನಂತೂ ಎದ್ದು ಅವರ ಬಳಿ ಹೋಗೋದಿಲ್ಲ. ಅವರೇ ಕರೆಯಲಿ ಅಂತ ಕೂತಿರ್ತೇನೆ. ಕಾರಣ ಅವರಿಗಿಂತ ನಾನು ಹೆಚ್ಚು ಸಂಬಳ ಪಡೆಯುತ್ತೇನೆ. ಒಮ್ಮೊಮ್ಮೆ ಅವರ ಕೋಣೆಗೆ ಹೋಗಿ, ಅವರ ಮೇಜಿನೆದುರು ಕುರ್ಚಿಯಲ್ಲಿ ಕುಳಿತು, ಮುಖದಲ್ಲಿ ಇಲ್ಲದ ನಗು ತುಂಬಿಕೊಳ್ಳಬೇಕು. ಅದೂ ಕೂಡ ಟೆಕ್ನಿಕಲ್. ಹಿಂದೆ ಸರಕಾರಿ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದಾಗ, ನನ್ನೆದುರೇ ಅಸಿಸ್ಟೆಂಟ್ ಸೆಕ್ರೆಟರಿಯ ಕೋಣೆ ಇದ್ದುದು. ಯಾವಾಗ ಕರೆಗಂಟೆ ಸದ್ದು ಕೇಳಿ ಬಂದಾಗಲೂ, ನಾವೊಂದು ಹತ್ತು ಜನ ಬಹಳ ಎಚ್ಚರವಾಗಿರುತ್ತಿದ್ದೆವು. ಆ ಮುದುಕ ಪೇದೆ ಅರೆ ಬೆಳಕಿನ ಕೋಣೆ ಹೊಕ್ಕಾಗ, ಗಂಭೀರ ಮುಖದಿಂದ ನಾಯಿಯ ತರಹ, ಬೇಗನೇ ಓಡಿ ಹೋಗಿಬಿಡುತ್ತಿದ್ದ. ಹೊರ ಬರುವಾಗ ನಗುಮುಖದ ಆನೆಯ ತರಹ ಜೋಲಾಡುತ್ತಾ ಅಲ್ಲಾಡುತ್ತಾ, ಮೇಜಿನೆದುರು ಬಂದು ಹೇಳ್ತಿದ್ದ, ಸುನೀಲ್‌ಬಾಬು ಡ್ರಗ್ ಕಂಟ್ರೋಲಿನ ಫೈಲನ್ನು ತೊಗೊಂಡು ಹೋಗಿ, ನಿಮ್ಮನ್ನ ಸಾಹೇಬರು ಕರೀತಿದ್ದಾರೆ. ಚಕ್ರವರ್ತಿ ಸಾಹೇಬರ ಮೈ ಬಣ್ಣ ಯಾವ ರೀತಿ ಅಂದರೆ ಒಂದು ವೇಳೆ ರಾತ್ರಿಯ ಹೊತ್ತಿನಲ್ಲಿ ಅವರನ್ನ ಅವರ ಸ್ವಂತ ಮಕ್ಕಳೇ ಏನಾದ್ರೂ ನೋಡಿದ್ರೆ ಕತ್ತಲಲ್ಲಿ ಅವರು ಮೂರ್ಛೆ.ಬೀಳೋದಂತೂ ಖಂಡಿತ. ಸದ್ಯ, ಆ ಕೆಲಸ ಬಿಟ್ಟು ನಾನು ಬದುಕಿದೆ.

ಝುರಿಸಿಂಗ್‌ಗೆ ಹೇಳಿದೆ, ಹೋಗಿ ಚಹ ಹಾಗೂ ಬ್ರೆಡ್ ಟೋಸ್ಟ್ ತೆಗೆದುಕೊಂಡು ಬಾ. ಗೋವಿಂದ ಬಾಬು ನೀವೂ ಚಹ ಕುಡೀತೀರ ತಾನೆ? ಮೂರು ಕಪ್ ತೊಗೊಂಡು ಬಾ.

ಗೋವಿಂದ ಬಾಬುಗಳು ಎದ್ದು ಸ್ವಲ್ಪ ಹೊರ ಹೋಗುತ್ತಲೇ ಸುವಿಮಲನೆಂದ, ಉಫ್ ನಿನ್ನೆ ಅವಿನಾಶನಿಗೋಸ್ಕರ, ಸುಮ್ಮ ಸುಮ್ಮನೆ ಯಾವ ತರಹ ಒದೆ ತಿನ್ನಬೇಕಾಗಿ ಬಂತು. ಇನ್ನೂ ಸೊಂಟ ಹಿಡ್ಕೊಂಡೇ ಇದೆ.

ನಾನೆಂದೆ – ನನಗೂ ಅಷ್ಟೇ ಬಲಗೈ ತುಂಬಾ ನೋವಾಗ್ತಾ ಇದೆ. ಆದರೆ ನಿನ್ನೆ ನೀನೇ ಹೊಡೆದಾಟವನ್ನು ಮುಂದುವರೆಸಿದವನು.

ನಾನೇ ? ಖಂಡಿತವಾಗಿಯೂ ಇಲ್ಲ. ಅವರ ಜಗಳ, ಅವರಿಂದ ನನಗೇನಾಗಬೇಕು.

ನೀನು ಹೀರಾಲಾಲ್‌ನಿಗೆ ಏಕೆ ಹೊಡೆಯೋದಕ್ಕೆ ಹೋದೆ ?

ಇಲ್ಲದಿದ್ದರೆ ಅವರಿಬ್ಬರು ಏನು ಬೇಕಾದರೂ ಮಾಡಿಕೊಳ್ತಿದ್ದರು.

ನಾನು ?

ನಿನಗೆ ತುಂಬಾ ಮತ್ತೇರಿತ್ತು. ಈಗ ನಿನಗೆ ಯಾವುದೂ ಸರಿಯಾಗಿ ನೆನಪಿಲ್ಲ. ಇರಲಿ ಬಿಡು. ಆ ವಿಷಯ ಈಗ ಬೇಡ, ಶೇಖರನನ್ನ ಒಂದಿಷ್ಟು ಹುಡುಕೋದಕ್ಕಾಗಲಿಲ್ಲವಲ್ಲ ?

ನಾನೆಲ್ಲಿಗೆ ಹೋಗಲಿ, ಈಗ ತಾನೇ ನಾನು ಮನೆಯಿಂದ ಹೊರಟು ಬರ್ತಾ ಇದೀನಿ.

ನಿಜ ಶೇಖರನಂತೂ ಒಮ್ಮೆಗೇ ನಾಪತ್ತೆಯಾಗಿ ಬಿಟ್ಟಿದ್ದಾನೆ.

ವೀಣಾಳ ಬಳಿ ಏನಾದ್ರೂ ಹೋಗಿ ವಿಚಾರಿಸಿದಿಯಾ ? ನಡಿ ಹೋಗೋಣ.

ನಾನು ಬರೋದಿಲ್ಲ. ನೀನೇ ಹೋಗು.

ಒಬ್ಬನೇ ಹೋದರೆ ನಾನು ವೀಣಾಳ ಬಲೆಗೆ ಸಿಕ್ಕಿ ಬೀಳಬೇಕಾಗುತ್ತೆ. ಹುಚ್ಚಾಟ ಬೇಡ, ಇಬ್ಬರೂ ಸೇರಿ ಜೊತೆಯಾಗೇ ಹೋಗಬಹುದು.

ನನಗೆ ಇವತ್ತು ಪುರುಸೊತ್ತಿಲ್ಲ. ನಾನು ಇವತ್ತು ಆಸ್ಪತ್ರೆಗೆ ಹೋಗಲೇಬೇಕು. ದಾದಾಮೊಶಾಯ್‌ರವರನ್ನು ನೋಡಿಕೊಂಡು ಬರಬೇಕು. ನಿನ್ನೇನೇ ನಾನು ಹೋಗಿ ಬರಬೇಕಿತ್ತು. ಒಂದು ವೇಳೆ ಕೊನೇಲಿ ನೋಡಲಾಗದಿದ್ದರೆ... ಇವತ್ತು ಸ್ವಲ್ಪ ಉತ್ತಮವಾಗಿದ್ದಾರೆ ಅಂತ ಹೇಳಿದರು.

ನಿನಗ್ಯಾವ ಅಜ್ಜನೋ ? ಚಾಣಕ್ಯನ ಬಗ್ಗೆ ಪುಸ್ತಕ ಬರೀತಿದ್ದರಲ್ಲ ಅವರೇನಾ ?

ಹೌದು.

ಅವರ ಕುಟುಂಬ ಬಹಳ ವಿದ್ಯಾವಂತ ಕುಟುಂಬ ಅಲ್ವಾ !

ಹೌದು. ನಿನ್ನಂತೆ ಅವರದು ಅಂಥಾ ಹೇಳಿಕೊಳ್ಳೊ ಅಂತ ಜಮೀನ್ದಾರಿ ವಂಶವೇನಲ್ಲ. ಈಗ ಬಿಡು ನಿಮ್ಮ ಜಮೀನ್ದಾರೀಕೇನೂ ಉಳಿದಿಲ್ಲ.

ಸರಿ ಸರಿ, ಅವರ ತರಹ ಪಂಡಿತ ವಂಶದ ಹುಡುಗನಾಗಿ ನೀನು ಕೂಡಾ ಅಂಥಾ ಓದೂ ಬರಹ ಏನೂ ಮಾಡಿಲ್ಲ. ನಿನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ನೋಡುತ್ತಲೇ ನನಗೆ ಎಮ್ಮೆಯು ನೆನಪಾಗುತ್ತೆ. ಸತ್ಯಾಂಶ ಹೇಳ್ತಿದೀನಿ ಅಂತ ಬೇಜಾರು ಮಾಡಿಕೊಳ್ಳಬೇಡಪ್ಪ......

ಆಫೀಸಿನಿಂದ ಹೊರ ಬರುವ ಮೊದಲು ಸುವಿಮಲ ಪ್ರಶ್ನಿಸಿದ, ನೀನು ಆಸ್ಪತ್ರೆಗೆ ಹೋಗಲೇಬೇಕೇ ?

ನಾನೆಂದೆ, ಹೌದು, ನೀನೂ ನನ್ನ ಜೊತೆ ಬಾ.

ಸುವಿಮಲ ಬೇಸರವನ್ನು ನಟಿಸಿ ಹೇಳಿದ, ಆಸ್ಪತ್ರೆಗೆ ಹೋಗೋಕೆ ನನಗೆ ಅಸಹ್ಯ. ಅದಲ್ಲದೆ ನರ್ಸುಗಳ ಸೌಂದರ್ಯ ಚರ್ಚೆ ಮಾಡೋಕೂ ನನಗೆ ಅಷ್ಟಾಗಿ ಬರೋದಿಲ್ಲ. ಇವತ್ತು ಹೋಗದಿದ್ದರೆ ಅಂಥಾದ್ದೇನು ಆಗೋದಿಲ್ಲ. ನಡಿ, ವೀಣಾಳ ಹತ್ತಿರ ಹೋಗಿ ನೋಡಿ ಬರೋಣ.

ಯಾಕೆ ಸುಮ್ಮನೆ ಪೀಡಿಸ್ತೀಯಾ, ನಾನಾಗಲೇ ಹೇಳಲಿಲ್ಲವಾ ನಾನಿವತ್ತು ಹೋಗಲೇ ಬೇಕು ಅಂತ. ನಾನು ಒಂದು ದಿನಾನೂ ಹೋಗಿಲ್ಲ. ಕೇವಲ ಕರ್ತವ್ಯಕ್ಕಾಗಲ್ಲ, ನಾನು ದಾದಾಮೊಶಾಯ್‌ರನ್ನು ಒಂದು ಸಲ ನೋಡಲೇಬೇಕು. ಎಂಟು ವರ್ಷದಿಂದ ನಾನವರನ್ನು ನೋಡಿಲ್ಲ. ಕೆಲವು ದಿನ ಅವರು ಕಾಶಿಯಲ್ಲಿದ್ದರು. ಆಮೇಲೆ ಆರು ತಿಂಗಳಿಂದ ಬಹರಾಂಪುರದಲ್ಲಿ ಇದ್ದರೂ, ನಾನವರನ್ನು ಆಗಲೂ ನೋಡೋಕಾಗಿಲ್ಲ.

ಈಗ ಹೇಗೆ ಹೋಗ್ತೀಯಾ ? ಟ್ರಾಮ್, ಬಸ್‌ಗಳಲ್ಲಿ ಬಹಳ ಗದ್ದಲವಿರುತ್ತೆ.

ನಿನ್ನೆ ಕೂಡಾ ನಿನ್ನಿಂದಾಗಿಯೇ ಹೋಗಲಾಗಲಿಲ್ಲ.

ನನ್ನಿಂದಾಗಿಯೇ ?

ಸುವಿಮಲ ಲೈಟಿನ ಕಂಬಕ್ಕೆ ಒರಗಿ ನಿಂತುಕೊಂಡ. ಆಮೇಲೆ ಅಸಹಾಯಕನಾಗಿ ಹೇಳಿದ, ನಾನೀಗ ಇಲ್ಲಿಂದ ಎಲ್ಲಿಗೆ ಹೋಗಲಿ ?

ನಾನು ಸುವಿಮಲನನ್ನೇ ದಿಟ್ಟಿಸಿದೆ. ಸುವಿಮಲನದು ಸುಂದರವಾದ ಮುಖ. ಗಡ್ಡವನ್ನು ನುಣುಪಾಗಿ ಬೋಳಿಸಿಕೊಂಡಿದ್ದಾನೆ. ಬೆಳ್ಳಗಿನ ಕೆನ್ನೆಗಳಲ್ಲಿ ಒಂದು ರೀತಿಯ ಹೊಳಪಿದೆ. ಎಣ್ಣೆ ಹಚ್ಚಿದ, ಮಿಂಚುವ ಕರಿ ಕೂದಲು. ಶುಭ್ರವಾದ ಸ್ವಚ್ಛ ಬಿಳಿ ಪಂಚೆ ಹಾಗೂ ಜುಬ್ಬ ಹಾಕಿಕೊಂಡಿದ್ದಾನೆ. ಸದ್ಯಕ್ಕೆ ಅವನಿಗೀಗ ಏನೊಂದೂ ಕೆಲಸವಿಲ್ಲ. ಹೋಗಲು ಯಾವ ಸ್ಥಳವೂ ಇಲ್ಲ. ಸುವಿಮಲನ ಮುಖದಲ್ಲಿ ಒಂದು ರೀತಿಯ ಕಾರುಣ್ಯವಿದೆ. ಸ್ವಲ್ಪ ನಿರಾಶೆಯ ಧ್ವನಿಯಲ್ಲಿ ಅವನೆಂದ, ನೀನು ಹೊರಟುಹೋದರೆ, ನಾನೊಬ್ಬನೇ ಏನೋ ಮಾಡಲಿ ? ಸಂಜೆ ವೇಳೆ ಚೆನ್ನಾಗೇನೋ ಇರುತ್ತೆ. ಇವರೆಲ್ಲ ಎಲ್ಲಿಗೆ ಹೋಗ್ತಾರೆ ? ಇವರೆಲ್ಲ ಹೋಗ್ತಿಲ್ಲ ಬರ್ತಿದಾರೆ ? ಸಂಜೆ ಹೊತ್ತು ಒಂಟಿಯಾಗಿ ಹೇಗೆ ಸಮಯ ಕಳೆಯಲಿ ? ಒಂಟಿಯಾಗಿ ಯಾರಾದ್ರೂ ಸಿನೇಮಾಗೆ ಹೋಗ್ತಾರಾ ? ಒಂಟಿಯಾಗಿ ಮೈದಾನದಲ್ಲಿ ಹೋಗಿ ಕೂತ್ಕೊಳ್ಳೋದಿಕ್ಕಾಗುತ್ತದೆಯೇ ? ಎಲ್ಲರೂ ಮನೆಗೆ ಹಿಂತಿರುಗುವವರೇ ? ಇಡೀ ದಿನ ಕೆಲಸ ಮಾಡಿ ಜನರು ಸಂಜೆ ಹೊತ್ತಿಗೆ ಮನೆಗೆ ಹಿಂತಿರುಗುತ್ತಾರೆ. ನಾನು ಇಡೀ ದಿನ ಮನೇನಲ್ಲಿದ್ದು, ಸಾಯಂಕಾಲವಾದೊಡನೆ ಹೊರ ಹೊರಡ್ತೀನಿ. ಹರಟೆ ಹೊಡೆಯೋದಲ್ಲದೆ ಮತ್ತಿನ್ನೆಲ್ಲಿಗೆ ಹೋಗಲಿ ?

ನೀನು ಈ ಸಲ ಯಾವುದಾದ್ರೂ ಕೆಲಸ ಗಿಲಸಕ್ಕೆ ಸೇರ್ಕೊ.

ಕೆಲಸ ಮಾಡದೇ ಏನು ? ಈಗ ತಾನೇ ರಷಿಯಾದ ಸಹಕಾರಿ ಕೃಷಿ ಕ್ರಾಂತಿಯ ಬಗ್ಗೆ ಒಂದು ಪುಸ್ತಕವನ್ನು ಕಳೆದ ತಿಂಗಳು ಅನುವಾದ ಮಾಡಿದೆ. ಜೀವ ತಿಂದು ಹೋಯ್ತು. ಆದ್ರೂ ಏನೇ ಹೇಳು ನಾಲ್ಕು ನೂರು ರೂಪಾಯಿ ಗಿಟ್ಟಿಸಿದೆ.

ಕಮ್ಯೂನಿಸ್ಟರು ನಿನಗೆ ಕೆಲಸ ಕೊಟ್ಟೇ ಕೊಡ್ತಾರೆ. ನಿನ್ನ ತರಹ ಒಬ್ಬ.....

ಯಾರು ಹಣ ಕೊಡ್ತಾರೋ ನಾನವರ ಕೆಲಸ ಮಾಡಲು ಸಿದ್ಧ. ರಷಿಯಾದ ಕೃಷಿ ಕ್ರಾಂತಿಯದೇ ಆಗಲಿ ಅಥವಾ ಅಮೇರಿಕೆಯ ಪತ್ತೇದಾರಿ ಕಥೆಯೇ ಆಗಲಿ ನನಗದೆಲ್ಲ ಒಂದೇ. ಅನುವಾದ ಮಾಡುವ ಕೆಲಸದ ವಿಷಯದಿಂದ ಹೇಳ್ತಿದೀನಿ. ಇನ್ನೇನು ಮತ್ತೆ ಕೇಳು, ಇವತ್ತು ಮಲಗಿಕೊಂಡಿದ್ದಾಗ ಸ್ವತಃ ಒಂದು ಲೇಖನವನ್ನು ಬರೆದಿದ್ದೆ. ಥಟ್ಟನೆ ಒಳಗಿನಿಂದ ಪಟಪಟನೆ ಹೊರಬಂತು. ನನಗನ್ನಿಸಿತ್ತು ಆಗಲೇ ಮನೆಯಿಂದ ಹೊರ ಹೊರಟು ಬಿಡಬೇಕು ಅಂತ. ಯಾವುದೋ ಒಂದು ಸ್ಥಳದಲ್ಲಿ ಗುಂಪಿನಲ್ಲಿ ಸೇರಿ, ಲೇಖನದ ವಿಷಯವನ್ನು ಸ್ವಲ್ಪ ಹೊತ್ತು ಮರೆಯಲೇಬೇಕು. ಕೆಲವು ಕ್ಷಣ ಮರೆಯದಿದ್ದರೆ, ನಾನು ಲೇಖನದ ಬಗ್ಗೆ ಯೋಚಿಸಲು ಸಾಧ್ಯವಾಗೋದಿಲ್ಲ. ಒಬ್ಬನೇ ಒಂಟಿಯಾಗಿ ಕುಳಿತುಕೊಂಡರೂ ನನ್ನ ಬಗ್ಗೇನೇ ಯೋಚಿಸ್ತಿರ್ತೀನಿ. ಈಗ ನನಗೆ ಬೇಕಾಗಿರೋದು ಗುಂಡು ಹಾಕಿ ಸ್ವಲ್ಪ ಯೋಚನೆ ಮಾಡೋದು. ವೇಶ್ಯಾಗೃಹಕ್ಕೆ ಹೋಗಿ ಸಿಕ್ಕಿ ಹಾಕೊಳ್ಳೋದು ಅಥವಾ ಜೂಜಿನಲ್ಲಿ ತೊಡಗುವುದು. ಈ ತರಹ ಉತ್ತೇಜನಕಾರಿಯಾದಂತೆ ಮತ್ತೇರಿಸುವ ವಿಷಯವಾಗದಿದ್ದರೆ ನಾನದನ್ನು

ಮರೆಯಲು ಸಾಧ್ಯವೇ ಇಲ್ಲ. ವೇಶ್ಯೆಯ ಬದಲು ಒಂದು ವೇಳೆ ಯಾರಾದರೂ ಒಳ್ಳೆ ಹೆಂಗಸಿನ ಜೊತೆ, ಬೇರೇನಿಲ್ಲ ಬೇಕೆನಿಸಿದಂತೆ ಮಾತುಕತೆಯಾಡಲು ಅವಕಾಶ ಸಿಕ್ಕರೆ ಸಾಕು ನಾನು ಅದಕ್ಕೆಲ್ಲಾ ಸಿದ್ಧ. ಗುಂಡು ಹಾಕೋದರ ಬದಲು ಕಾಡಿಗೆ ಹೋಗಿ ಬೇಟೆ ಆಡು ಅನ್ನು ಅದಕ್ಕೂ ಸಿದ್ಧ. ಲೇಖನವನ್ನು ಚೆನ್ನಾಗಿಸಲೆಂದೇ ಲೇಖನದ ಬಗ್ಗೆ ಸ್ವಲ್ಪ ಹೊತ್ತು ನಾನು ಮರೆಯುವುದು ಉಚಿತ. ಮತ್ತು ಮರೆಯಲು ನನಗೆ ಸ್ವಲ್ಪ ಮತ್ತೇರಿಸುವ ಉತ್ತೇಜನಬೇಕು, ಇಲ್ಲದಿದ್ದರೆ ಮರೆಯೋದಿಕ್ಕಾಗೋದಿಲ್ಲ. ಬರೆಯೋದು ತುಂಬಾ ಕ್ರಿಯಾತ್ಮಕ ವಿಷಯ. ಶಿಲ್ಪಿಗಳಿಗೆ ಮಾದರಿ ಬೇಕು, ಗಾಯಕರಿಗೆ ತಬಲದವನು ಬೇಕು – ಇದನ್ನೆಲ್ಲಿ ಜನ ಅರ್ಥ ಮಾಡಿಕೊಂಡಿದ್ದಾರೆ. ಆದರೆ ಲೇಖಕರಿಗೆ ಏನೂ ಬೇಕಿಲ್ಲ ಅಂತ ಅಂದುಕೊಂಡು ಬಿಟ್ಟಿದ್ದಾರೆ? ಅವರ ಜಾಣತನ ನೋಡಿದೆಯಾ?

ನೀನು ನನ್ನನ್ನು ಯಾಕೆ ಪೀಡಿಸ್ತಾ ಇದೀಯ? ನಾನು ಇದಕ್ಕೆಲ್ಲ ಹೊಣೆಯೇ?

ಖಂಡಿತವಾಗಿಯೂ, ನೀನು ನನ್ನನ್ನು ಒಂಟಿಯಾಗಿ ಬಿಟ್ಟು ಆಸ್ಪತ್ರೆಗೆ ಹೋದರೆ ಯಾವ ಪುರುಷಾರ್ಥ ಸಾಧಿಸಿದಂತೆ?

ಅಂ! ನನ್ನನ್ನು ಬಿಟ್ಟು ಬೇರಿನ್ನಾರೂ ಇಲ್ಲವೇ ಇಲ್ಲವೇನೋ? ಅವಿನಾಶ ಅಥವಾ ಪರೀಕ್ಷಿತರನ್ನು ಹುಡ್ಕೊಂಡು ಹೋಗು....

ಆಫೀಸು ಬಿಟ್ಟುಬಿಟ್ಟಿದೆ. ಅವರು ನನಗಿನ್ನೆಲ್ಲಿ ಸಿಗ್ತಾರೆ? ಹೊರಗಡೆ ಪ್ರತಿಯೊಂದು ಬಾರ್‌ನಲ್ಲೂ ಅವರನ್ನು ಹೋಗಿ ಹುಡುಕಿಕೊಂಡು ಬರಲೇ? ನನಗೆ ನೀನೆಂತ ಮನುಷ್ಯ ಸಿಕ್ಕಿದೆ ಅಂದ್ರೆ, ನನ್ನ ಹತ್ರ ದುಡ್ಡಿದ್ದಿದ್ದರೆ ಯಾವುದೋ ಒಂದು ಹೆಂಡದ ಅಂಗಡೀಗೆ ಹೋಗಿ ಕೂತ್ಕೋತಾ ಇದ್ದೆ. ಏನೂ ಇಲ್ಲ, ನೋಡಿಲ್ಲಿ ನನ್ನ ಜೇಬು ಖಾಲಿ.

ನನ್ನ ಹತ್ತಿರವೂ ಇವತ್ತು ದುಡ್ಡಿಲ್ಲ. ಬಂಧು-ಬಾಂಧವರನ್ನು ಬಿಟ್ಟು ಬೇರಿನ್ಯಾರಾದರ ಹತ್ತಿರ ಹೋಗಬಾರದೇ? ನಿನಗಿನ್ನು ಬೇರೆ ಯಾರೂ ಪರಿಚಯದವರಿಲ್ಲವೇ?

ಜನ ಯಾಕಿಲ್ಲಾ? ಜನರೇನೋ ಬೇಕಾದಷ್ಟಿದ್ದಾರೆ. ಆದರೆ ಅವರೆಲ್ಲ ಯಾವ ತರಹ ಗೊತ್ತಾ? ವೆಜಿಟೆಬಲ್ ಕಟ್‌ಲೆಟ್ ತರಹ. ನೋಡೋಕೆ ಸದಾ ಒಂದೇ ತರಹ. ಒಳಗೆ ಟೊಳ್ಳು. ಒಂದು ವೇಳೆ ಪ್ರದೀಪ್ ಬಾಬುಗಳ ಮನೆಗೆ ಹೋದ್ರೆ ಅವರು ಹಾಗು ಅವರ ಹೆಂಡತಿ ಎಷ್ಟು ಮಾತಾಡ್ತಾರೆ ಗೊತ್ತಾ. ಚಹ ಕುಡಿಸ್ತಾರೆ. ಆದರೆ ಅದೇ ವೆಜಿಟೆಬಲ್ ಕಟ್‌ಲೆಟ್ ತಿಂದ ರುಚಿ. ಪ್ರದೀಪ್ ಬಾಬುಗಳ ಬದಲಿಗೆ ರತನ ಬಾಬುಗಳ ಮನೆಗೆ ಹೋದರೂ ಅದೇ.....

ನಾನು ಒಳಗೊಳಗಿನಿಂದಲೇ ಅಸ್ವಸ್ಥನಾಗುತ್ತಿದ್ದೆ. ನಾನೆಂದೆ, ನೀನು ಒಂದಿಷ್ಟು ಪ್ರೇಮಗೀಮಾನಾದ್ರೂ ಮಾಡೋ ಪ್ರಯತ್ನ ಮಾಡಬಾರದೆ? ಅದರಿಂದ ಸಮಯಾನಾದ್ರೂ ಕಳೆಯುತ್ತೆ. ಆ ನಿನ್ನ ಟೆಲಿಫೋನ್ ಆಪರೇಟರ್ ಏನಾದಳು?

ನೋಡಬೇಕು. ನಾಳೆ ಸ್ವಲ್ಪ ಅರುಣನ ಆಫೀಸಿಗೆ ಹೋಗಿ ನೋಡಿ ಬರ್ತೀನಿ.

ನೀನು ಇವತ್ತು ಕಾಫೀ ಹೌಸೋ, ಟಿಫನ್ ರೂಮಿಗೋ ಹೋಗಿ ಯಾರಾದ್ರೂ

ಸಿಕ್ತಾರಾ ಅಂತ ಯಾಕೆ ನೋಡಬಾರ್ದು? ಪ್ಲೀಸ್ ಇವತ್ತು ಒಂದು ದಿನ ನೀನು ನನ್ನನ್ನು ಬಿಟ್ಟು ಬಿಡಮ್ಮ......

ಗುಂಪಿನಲ್ಲಿ ಟ್ರಾಮ್ ಹತ್ತುವ ಪ್ರಯತ್ನವನ್ನು ಮಾಡದೆ ನಾನು ನಡೆದುಕೊಂಡೇ ಪಿ.ಜಿ. ಆಸ್ಪತ್ರೆಗೆ ಹೋಗಲು ನಿಶ್ಚಯಿಸಿದೆ. ರಸ್ತೆ ಬಿಟ್ಟು ಅಡ್ಡದಾರಿ ಹಿಡಿಯಲು ಮೈದಾನದ ಒಳಹೊಕ್ಕೆ. ಸಿಗರೇಟ್ ಸೇದುತ್ತ ಮನಸ್ಸಿನಲ್ಲೇ ತೀರ್ಮಾನಿಸಿಕೊಂಡೆ. ಈ ಮೂರು ಸಿಗರೇಟ್ ಸೇದೋದರೊಳಗಾಗಿ ನಾನು ಅಲ್ಲಿಗೆ ಹೋಗಿ ಮುಟ್ಟಬೇಕು. ನನಗೆ ನಾನೇ ಈ ರೀತಿ ವಾಕಿಂಗ್ ಸ್ಪರ್ಧೆ ಏರ್ಪಡಿಸಿಕೊಂಡು, ದಾಪುಗಾಲು ಹಾಕುತ್ತ ಬಿರುಸಿನಿಂದ ನಡೆಯತೊಡಗಿದೆ. ತಣ್ಣಗಿನ, ತೇವ ಮಿಶ್ರಿತ ಗಾಳಿ ಬೀಸುತ್ತಲಿತ್ತು.

ಆಸ್ಪತ್ರೆಯ ಮಹಾದ್ವಾರದ ಬಳಿಯೇ ಭಾವನವರು ಸಿಕ್ಕರು. ಅವರು ಬಿರುಸಿನಿಂದ ಬೇಗ ಬೇಗನೇ ಹೊರ ಬರುತ್ತಿದ್ದರು. ನನ್ನನ್ನು ನೋಡುತ್ತಲೇ ಅವರೆಂದರು, ನೀನು ಬಂದು ಬಿಟ್ಟೆಯ, ನಡಿ ನಿಮ್ಮಮ್ಮನಿಗೆ ಈ ವಿಷಯ ತಿಳಿಸಬೇಕು. ದಾದಾಮೊಶಾಯ್ ಕೆಲವು ಕ್ಷಣಗಳ ಹಿಂದೆ ತೀರಿಕೊಂಡರು. ತುಂಬಾ ಯಾತನೆಯನ್ನೇನು ಪಡಲಿಲ್ಲ. ಮಾತಾಡ್ತಾನೆ ಕಣ್ಣು ಮುಚ್ಚಿದರು. ಸಾಯೋ ಮೊದಲು ನಿನ್ನ ವಿಷಯಾನೇ ಹೇಳ್ತಾ ಇದ್ದರು.

ನಾನು ತಟ್ಟನೆ ನಿಂತು ಬಿಟ್ಟೆ. ಭಾವನವರನ್ನ ಕಂಡೂ, ಸಿಗರೇಟನ್ನು ಬಿಸಾಡಲು ಮರೆತು ಬಿಟ್ಟಿದ್ದೆ. ನಂತರ ಮೆಲ್ಲನೆ ತಿಳಿಯದಂತೆ ಅದನ್ನು ಹಿಂದಿನಿಂದ ಬಿಸಾಡಿ ಬಿಟ್ಟೆ.

ಇವತ್ತು ಯಾವ ವಾರ? ಇವತ್ತು ಬುಧವಾರ, ಇವತ್ತು ಸಂಗೀತ ಶಾಲೆಗೆ ರಜೆ. ಇವತ್ತು ನಾನು ಸ್ಮಶಾನಕ್ಕೆ ಹೋಗಬೇಕಾಗುತ್ತೆ.

ಬಹಳ ಚಿಕ್ಕ ವಯಸ್ಸಿನಿಂದಲೂ ಅಪ್ಪನೊಂದಿಗೆ, ನನಗೆ ಒಂದು ರೀತಿಯ ದೂರತ್ವವೇ ಬೆಳೆದು ಬಂದಿತ್ತು. ನನ್ನ ಸ್ನೇಹಿತ ತಪನನನ್ನು ನೋಡ್ತಿದ್ದೆ, ಅವನು ಅವರಪ್ಪನನ್ನು ಅಪ್ಪಾಜೀ ಎಂದು ಕರೆಯುತ್ತಿದ್ದ. ಅಪ್ಪಾಜಿ ನೀವು ನನಗೆ ಒಂದು ಏರ್‌ಗನ್ ತಂದು ಕೊಡ್ತೀನಿ ಅಂತ ಹೇಳಿದ್ದಿರಿ, ತಂದು ಕೊಡ್ಲೇ ಇಲ್ಲವಲ್ಲ? ಹೌದಾ, ಸರಿ ತಂದುಕೊಡ್ತೇನೆ. ಹೀಗೆ ಏನೋ ಸ್ನೇಹಿತರು ಮಾತನಾಡುವಂತೆ ಅಪ್ಪನ ಬಳಿ ಮಾತನಾಡುತ್ತಿದ್ದ. ನಾವು ನಮ್ಮ ತಂದೆಯವರನ್ನು ಮೊದಲಿನಿಂದಲೂ, ನೀವು ಎಂದೇ ಸಂಬೋಧಿಸುತ್ತಿದ್ದೆವು. ಮನೆಯಲ್ಲಿನ ಕೊನೆಯ ಹುಡುಗನಾಗಿ, ಅಪ್ಪನ ಪ್ರೀತಿ ಪಡೆಯೋ ಬದಲು, ನಾನು ಅವರನ್ನು ದೂರ ಬಿಟ್ಟುಬಿಟ್ಟಿದ್ದೆ. ಅಪ್ಪ ಮೊದಲಿನಿಂದಲೂ, ಸ್ವಲ್ಪ ಗಂಭೀರ ಸ್ವಭಾವದವರು. ಅದಲ್ಲದೆ ಯಾವ ವಿಷಯದಲ್ಲೇ ಆಗಲಿ, ಅವರು ತಮ್ಮ ಅಭಿಪ್ರಾಯವನ್ನು ಎಂದೂ ಬದಲಾಯಿಸುತ್ತಿರಲಿಲ್ಲ. ಆದ್ದರಿಂದಲೇ ನನಗೂ ಅವರೊಡನೆ ಮಾತನಾಡಲು ಯಾವೊಂದು ಉತ್ಸಾಹವೂ ಇರುತ್ತಿರಲಿಲ್ಲ. ಓಣಿಯ ಹುಡುಗರೊಂದಿಗೆ, ರಥೋತ್ಸವ ನೋಡಲು, ಹೋಗಲೋ ಬೇಡವೋ ಅಂತ ಅಪ್ಪನನ್ನು ಕೇಳಿದರೆ, ಅವರು ಕೇವಲ ಸಂಕ್ಷಿಪ್ತವಾಗಿ, ಹೇಳಿ ಬಿಡುತ್ತಿದ್ದರು, 'ಬೇಡ'. ಅನಂತರ ಈ

ವಿಷಯದ ಬಗ್ಗೆ ಏನೊಂದೂ ಮಾತನಾಡಲು ಇಷ್ಟವಿಲ್ಲವೆನ್ನುವಂತೆ, ಅವರು ತಮ್ಮ ಮುಖವನ್ನು ಬೇರೆ ಕಡೆ ತಿರುಗಿಸಿಕೊಂಡು ಬಿಡುತ್ತಿದ್ದರು. ಒಮ್ಮೆ ಶಾಲೆಯ ನಾಟಕದಲ್ಲಿ ನಾನು ಪಾತ್ರವನ್ನು ಪಡೆದುಕೊಂಡಿದ್ದೆ. ಇಶಾಖಾನನ ಪಾತ್ರ. ರಿಹರ್ಸಲ್ ಬಹಳ ಚೆನ್ನಾಗಿಯೇ ನಡೆದಿತ್ತು. ನಾಟಕವನ್ನು ನಿರ್ದೇಶಿಸಿದವರು ನಮ್ಮ ಚರಿತ್ರೆಯ ಮಾಸ್ತರರು. ಆಗ ಅಪ್ಪ ಹೇಳಿದ್ದರು, ಬೇಡ ಬೇಡ ಅವನು ಪಾರ್ಟು ಮಾಡೋದೇಕೆ ? ಅಂದಿಗೇ ನನ್ನ ರಿಹರ್ಸಲ್ ಮುಗಿದಿತ್ತು. ನಾಟಕದ ದಿನ ನಾನು ಕಣ್ಣಿನಲ್ಲಿ ನೀರು ತುಂಬಿಕೊಂಡು ಪ್ರೇಕ್ಷಕರಲ್ಲಿ ಒಬ್ಬನಾಗಿ ಕುಳಿತುಕೊಂಡಿದ್ದೆ. ಚಿಕ್ಕಂದಿನಲ್ಲಿ, ಅಪ್ಪನ ಈ ಗಾಂಭೀರ್ಯ ಹಾಗೂ ಕಠಿಣ ಸ್ವಭಾವದಿಂದಾಗಿ, ಅಪ್ಪನನ್ನು ಕಂಡರೆ ನನ್ನಲ್ಲಿ ತುಂಬಾ ಹೆದರಿಕೆ, ಹಾಗೂ ಭೀತಿ ಮನೆಮಾಡಿತ್ತು. ಬೇರೆಯವರಿಗೆಲ್ಲರಿಗಿಂತ, ಅಪ್ಪನ ಧೋರಣೆ, ಸ್ವಭಾವ ಬಹಳ ವ್ಯತಿರಿಕ್ತವಾಗಿತ್ತು. ಅವರು ಬಹಳ ಕಠೋರ. ಖಂಡಿತವಾದಿಗಳಾಗಿದ್ದರು. ನಾನು ಅಪ್ಪನನ್ನು ಮಹಾಪುರುಷ ಎಂದೇ ಮನಸ್ಸಿನಲ್ಲಿ ಅಂದುಕೊಂಡಿದ್ದೆ. ಅಪ್ಪನ ಕೆಟ್ಟ ಬುದ್ಧಿ ಹಾಗೂ ಆಟಾಟೋಪ ಇವುಗಳೆಲ್ಲ ಕ್ರಮೇಣ ಕಣ್ಣಿಗೆ ಬೀಳಲಾರಂಭಿಸಿತು. ಅಪ್ಪನ ಗಾಂಭೀರ್ಯ ಕ್ರಮೇಣ, ನನ್ನ ಪಾಲಿಗೆ, ಹಾಸ್ಯಾಸ್ಪದವೆನಿಸಲಾರಂಭಿಸಿತು. ಒಮ್ಮೆ ನಾನು ಚಿಕ್ಕಪ್ಪನ ಜೇಬಿನಿಂದ ನಾಲ್ಕಾಣೆ ಬಿಲ್ಲೆ ಕದ್ದುಬಿಟ್ಟಿದ್ದೆ. ಅದನ್ನು ತಿಳಿಯುತ್ತಲೇ ಅಪ್ಪ ನನ್ನನ್ನು ಹೇಗೆ ಥಳಿಸಿದ್ದರೆಂದರೆ, ಅನಂತರ ನನಗೆ ಮೂರು ನಾಲ್ಕು ದಿನವಾದರೂ ಜ್ವರ ಬಿಟ್ಟಿರಲಿಲ್ಲ. ಆದರೆ ಅದೇ ವರ್ಷ ಚಳಿಗಾಲದಲ್ಲಿ ನಮ್ಮ ಮನೆಮಂದಿಗೆಲ್ಲ ಬಣ್ಣದ ಶಾಲುಗಳು ಬಂದವು. ಕೇವಲ ಸಣ್ಣ ಘಟನೆಯಿಂದಾಗಿ, ತಿಳಿದು ಬಂದದ್ದೇನೆಂದರೆ, ಹರಿದಾಸ ಶಾಹೂರರ ಪೋಕರಿ ಹುಡುಗನಿಗೆ, ಅಪ್ಪನ ಶಿಫಾರಸ್ಸಿನಿಂದಾಗಿ, ಪರೀಕ್ಷೆಯಲ್ಲಿ ಕುಳಿತುಕೊಳ್ಳಲು ಅನುಮತಿ ನೀಡಲಾಗಿತ್ತು. ಅದಕ್ಕಾಗಿಯೇ ನಾವು ಅಷ್ಟೊಂದು ಉಡುಗೊರೆ ಪಡೆದದ್ದು. ಇದಾದ ಮೇಲೂ ನನಗೆ ಅಪ್ಪನ ಬಗ್ಗೆ ಒಂದು ರೀತಿ ಹೇಸಿಗೆ ಉಂಟಾಗಲಿಲ್ಲ. ಆದರೆ ನಾನು ಅವರನ್ನು ಯಕಃಶ್ಚಿತ್ ಸಾಧಾರಣ ವ್ಯಕ್ತಿಯಂತೆ ಕಾಣಲಾರಂಭಿಸಿದೆ. ಹಾಗೂ ಅದರಿಂದ ನನ್ನ ಮನಸ್ಸಿನ ಭಾರವೂ ಕಡಿಮೆಯಾಯಿತು. ಅಣ್ಣ ಯಾವಾಗಲೂ ಶಾಂತ ಸ್ವಭಾವದವನು. ದಾದಾಮೊಶಾಯ್‌ರವರಿಂದ ಅಣ್ಣ ಗಣಿತ ಹಾಗೂ ಸಂಸ್ಕೃತ ಬಹಳ ಚೆನ್ನಾಗಿ ಕಲಿತುಕೊಂಡಿದ್ದ. ಅಣ್ಣ ಅಪ್ಪನ ಮಾತಿಗೆ ಎಂದೂ ಎದುರಾಡುತ್ತಿರಲಿಲ್ಲ. ಆದರೆ ನಾನು ಕ್ರಮೇಣ ತದ್ವಿರುದ್ಧವಾಗುತ್ತಾ ಬಂದೆ.

ಪಾಕಿಸ್ತಾನದ ಉದಯದ ನಂತರ, ನಾವು ಕಲಕತ್ತೆಗೆ ಬಾರದೆ, ಬಹರಾಂಪುರಕ್ಕೇ ಬಂದುಬಿಟ್ಟೆವು. ಅದಕ್ಕೆ ನಮ್ಮ ಮೈಯಲ್ಲಿ ಅಷ್ಟೊಂದು ರೆಫ್ಯೂಜಿ ವಾಸನೆ ಇಲ್ಲ. ದಾದಾಮೊಶಾಯ್ ಮೊದಲಿನಿಂದಲೂ ಬಹರಾಂಪುರದಲ್ಲಿ ಶಿಕ್ಷಕ ವೃತ್ತಿಮಾಡುತ್ತಿದ್ದರು. ಅಲ್ಲೇ ಒಂದು ಶಾಲೆಯಲ್ಲಿ ಅಪ್ಪನಿಗೂ ಒಂದು ಕೆಲಸ ಕೊಡಿಸಿ ಕೊಟ್ಟರು. ಸ್ವಲ್ಪ ದಿನಗಳಲ್ಲಿಯೇ ನಾನೂ ಎಲ್ಲರೊಡನೆ ಹೊಂದಿಕೊಂಡುಬಿಟ್ಟೆ. ನನ್ನ ಮೂವರು ಅಕ್ಕಂದಿರೂ ಬಹಳ ಸುಂದರಿಯರು. ಅಲ್ಲಿನ ಜನರ ಕುತೂಹಲ, ಸಹಾನುಭೂತಿಯನ್ನು ಪಡೆಯಲು ಹೆಚ್ಚು ದಿನ ಬೇಕಾಗಲಿಲ್ಲ. ಮೂರೂ ಜನ

ಅಕ್ಕಂದಿರು ಜಡೆ ತೂಗಿಸಿಕೊಂಡು, ಶಾಲೆಯಿಂದ ಹಿಂತಿರುಗುವಾಗ, ರಸ್ತೆಯಂಚಿನ ಹುಡುಗರೆನ್ನುತ್ತಿದ್ದರು, ಏನೇ ಹೇಳಿ ಬಂಗಾಲಿ ಹುಡುಗಿಯರು ನೋಡೋದಕ್ಕೆ ಬಹಳ ಸುಂದರವಾಗಿರುತ್ತಾರೆ. ನಾನು ಅವರ ಹಿಂದೆಯೇ ಇರುತ್ತಿದ್ದೆ. ಯಾಕೆಂದರೆ ಒಂದು ವೇಳೆ ಅಕ್ಕಂದಿರ ಅವಮಾನ ಮಾಡಲು ಬಂದರೆ, ನಾನು ಒಂದು ಕಲ್ಲನ್ನೆತ್ತಿ ಅವರೆಡೆಗೆ ಬೀಸಿ ಒಗೆಯಬೇಕೆಂದುಕೊಳ್ಳುತ್ತಿದ್ದೆ.

ಅಲ್ಲಿನ ಪ್ರತಿಷ್ಠಿತ ಪರಿವಾರದ, ಮೈತ್ರರ ದೊಡ್ಡ ಮಗ ಬಂದು ದೊಡ್ಡಕ್ಕನ್ನ ಮದುವೆ ಮಾಡಿಕೊಳ್ಳುವ ಪ್ರಸ್ತಾಪವನ್ನು ತಿಳಿಸಿದಾಗ, ಅಂದು ನಮ್ಮ ಮನೆಯಲ್ಲಿ ಸೌಭಾಗ್ಯದ ಆನಂದದ ಹೊಳೆಯೇ ಹರಿಯಿತು. ಅಪ್ಪ ಇಲ್ಲದ ಸಂಶಯ ವ್ಯಕ್ತಪಡಿಸಿ, ನಾಲಾಯಕ್ಕು ಪ್ರಶ್ನೆ ಮಾಡಿ ಮೊದಲು ದೊಡ್ಡ ರಾದ್ಧಾಂತ ಮಾಡಿಬಿಟ್ಟಿದ್ದರು. ಆದರೆ ಅಕ್ಕನಿಗೆ ಆ ತರಹದ ಒಳ್ಳೆ ವರ ಸಿಕ್ಕಿರುವಾಗ, ಅಪ್ಪನ ಮಾತನ್ನು ಒಂದು ಚೂರೂ ಲೆಕ್ಕಿಸದೆ ಅಮ್ಮ ಮುಂದುವರೆದಿದ್ದಳು. ಅನಂತರ ನನ್ನ ಕೊನೇ ಅಕ್ಕ ತಾನೇ ಮೆಚ್ಚಿ ಕಾಯಸ್ಥ ಹುಡುಗನೊಬ್ಬನನ್ನು ಮದುವೆ ಮಾಡಿಕೊಂಡಿದ್ದಳು. ಅದಕ್ಕೆ ನಾನೇ ವ್ಯವಸ್ಥೆ ಮಾಡಿಕೊಟ್ಟಿದ್ದೆ, ಅಂತಲೇ ಹೇಳಬಹುದು. ಕಲ್ಯಾಣದಾನ ಕಾಗದಗಳನ್ನು ಚಿಕ್ಕಕ್ಕನಿಗೆ ತಲುಪಿಸುತ್ತಿದ್ದವನೇ ನಾನು.

ಬಹರಾಂಪುರದಲ್ಲಿ ಶೇಖರನ ಜೊತೆ ನನ್ನ ಪರಿಚಯವಾಯ್ತು. ರಜೆಯಲ್ಲಿ ಅವನು ಬಹರಾಂಪುರದಲ್ಲಿನ ತನ್ನ ಮಾವನ ಮನೆಗೆ ಆಗಾಗ್ಗೆ ಬರುತ್ತಿದ್ದ. ಒಮ್ಮೆ ಕವಿತಾವಾಚನದಲ್ಲಿ ನಾನು ಪ್ರಥಮ ಬಹುಮಾನ ಗಿಟ್ಟಿಸಿಕೊಂಡಿದ್ದೆ. ಆಗ ಶೇಖರ, ಆಕ್ಷೇಪಣೆ ಮಾಡಿದ್ದ. ನಿನ್ನ ಗಂಟಲಿನ ದನಿ ಏನೋ ಚೆನ್ನಾಗೇ ಇದೆ. ಆದರೆ 'ರ' ಹಾಗೂ 'ಡ' ದ ಉಚ್ಚಾರಣೆಯಲ್ಲಿ ಸ್ವಲ್ಪ ದೋಷವಿದೆ. ಅಲ್ಲದೆ ನೀನು ಕಂಠಸ್ಥ ಮಾಡಿರುವ ಕವಿತೆಯ ಅರ್ಥ ನಿನಗೆ ತಿಳಿದಿದೆಯೇ ? ಅವನ ಮಾತು ಕೇಳಿ ನನಗೆ ತುಂಬಾ ರೇಗಿತ್ತು. ನಾನು ಒಂದು ಕ್ಷಣ ಅವನನ್ನು ದಿಟ್ಟಿಸಿ ಮನದಲ್ಲೇ ನಿಶ್ಚಯಿಸಿಕೊಂಡಿದ್ದೆ. ಒಂದು ವೇಳೆ ಹೊಡೆದಾಟವೇನಾದರೂ ಆದರೆ ಈ ರೋಗಿಷ್ಠ. ಸಣಕಲ ಹುಡುಗನನ್ನು ಅನಾಯಾಸವಾಗಿ, ನಾನು ಸೋಲಿಸಿ ಬಿಡಬಹುದು. ಆಗ ಇನ್ನೂ ಪದ್ಮಳ ಗರ್ಜನೆ, ಖಾನ್ ನದಿಯ ಭಯಂಕರ ಸೆಳೆತ, ಹುಟ್ಟಿದೂರನ್ನು ಬಿಟ್ಟು ಬಂದ ಸಿಟ್ಟು ನನ್ನಲ್ಲಿ ಸಂಪೂರ್ಣವಾಗಿತ್ತು. ವ್ಯಕ್ತಿಯನ್ನು ನೋಡುವ ಮೊದಲೇ ಆತ್ಮರಕ್ಷಣೆಗಾಗಿ ಶರೀರವನ್ನು ಸಿದ್ಧ ಮಾಡಿಕೊಂಡಿದ್ದೆ. ಆದರೆ ಶೇಖರನೊಡನೆ, ನನ್ನ ಸ್ನೇಹ ಬೆಳೆಯಿತು. ಬಹರಾಂಪುರದಲ್ಲಿ ಕ್ಷೀಣವಾಗಿ ಹರಿಯುವ ಗಂಗೆಯ ದಂಡೆಯ ಮೇಲೆ ಶೇಖರನೊಡನೆ ನಾನು ಅಡ್ಡಾಡಲು ಹೋಗುತ್ತಿದ್ದೆ. ಶೇಖರ ನನಗಿಂತ ಒಂದು ಕ್ಲಾಸ್ ಮುಂದೆ ಓದುತ್ತಿದ್ದ. ಆರ್ಮೇನಿಯನ್ ಇಗರ್ಜಿಯ, ಮುರುಕಲು ಬಾಗಿಲ ಬಳಿ ಕುಳಿತು ಶೇಖರ ನನಗೆ ಹೇಳುತ್ತಿದ್ದ, ನನಗೆ ಕಡಲ್ಗಳ್ಳನಾಗಿ, ಸಮುದ್ರದಲ್ಲಿ ಅಡ್ಡಾಡಿ ಬರುವ ಆಸೆ ಅಂತ. ಸಧ್ಯ ಅವನು ಆ ರೀತಿ ಮಾಡಲಿಲ್ಲ ?

ಶೇಖರನೇ ನನಗೆ ಮೊದಲು, ಕೆಟ್ಟ ಚಟವನ್ನೆಲ್ಲಾ ಕಲಿಸಿದ್ದು. ಮುಂಜಾನೆಯ ನಾಲ್ಕರ ವೇಳೆ, ಶೇಖರ ನಮ್ಮ ಮನೆಯ ಚಿಲಕ ಸರಿಸಿ, ಕಳ್ಳ ದನಿಯಲ್ಲಿ ಕರೆಯುತ್ತಿದ್ದ,

ಸುನೀಲ್ ಎದ್ದೇಳೋ. ನನಗೋ ಗಾಢವಾದ ನಿದ್ದೆ. ಸಹಜವಾಗಿ ಎಚ್ಚರವಾಗುತ್ತಿರಲಿಲ್ಲ. ಶೇಖರ ಒಂದು ಕಡ್ಡಿ ತೆಗೆದುಕೊಂಡು ತಿವಿದೂ ತಿವಿದೂ ಎಬ್ಬಿಸುತ್ತಿದ್ದ. ನಾನು ಗಡಬಡಿಸಿ ಎದ್ದು, ಏನೋ ಅದು ಎನ್ನುತ್ತಿದ್ದೆ. ಶೇಖರ ಪಿಸು ಗುಟ್ಟುತ್ತಿದ್ದ, ನಡಿ ಲಾಲಗೋಲಾ ಪ್ಯಾಸೆಂಜರ್ ಹಿಡಿದು ನಾವು ಮುರ್ಷಿದಾಬಾದ್‌ಗೆ ಹೋಗೋಣ.

ಇಡೀ ದಿನ ನದಿಯ ದಂಡೆಯ ಮೇಲೆ ಕುಳಿತಾದ ನಂತರ, ಶೇಖರನೆನ್ನುತ್ತಿದ್ದ, ಇವತ್ತು ರಾತ್ರಿ ಮನೆಗೆ ಹೋಗೋದೇ ಬೇಡ ಕಣೋ, ಇಡೀ ದಿನ ಇವತ್ತು ಸ್ಟೇಷನ್ನಿನಲ್ಲಿ ಕಳೆದು ಬಿಡೋಣ, ಎಷ್ಟು ಜನ ಅಲ್ಲಿ ಮಲಗಿಕೊಂಡಿರೋದಿಲ್ಲಾ ?

ನಾನು ಭಯಭೀತನಾಗಿ ಹೇಳ್ತಿದ್ದೆ. ಮನೇನಲ್ಲಿ ಹುಡುಕಿದ್ರೆ ?

ಹುಡುಕಲಿ ಬಿಡು. ಸಾಯೋಕೇನೂ ಹೋಗ್ತಿಲ್ಲವಲ್ಲ. ನಾಳೆ ಬೆಳಿಗ್ಗೇನೇ ಮನೆಯವರಿಗೆ ಸಿಗ್ತೀವಲ್ಲ, ಹೆಚ್ಚೂಂದ್ರೆ ಸ್ವಲ್ಪ ಬೈಗಳನ್ನ ತಿನ್ನಬೇಕಾಗಬಹುದು.

ಆನಂತರ ಶೇಖರ ನಿಶ್ಶಬ್ದವಾಗಿ ನಕ್ಕು ಹೇಳಿದ್ದ, ಒಮ್ಮೊಮ್ಮೆ ಕಟ್ಟುಪಾಡುಗಳನ್ನು ಮುರೀಬೇಕು ಗೊತ್ತಾಯ್ತಾ. ದಿನಾ ಒಂದೇ ತೆರನಾದ ಜೀವನ ನಡೆಸೋದಕ್ಕಾಗೋದಿಲ್ಲ. ದಿನಾ ಅದೇ ಸಮಯಕ್ಕೆ ಎದ್ದು, ಸರಿಯಾದ ವೇಳೆಗೆ ಊಟ ಮಾಡಿ, ಅದೇ ವೇಳೆಗೆ ಅಡ್ಡಾಡೋದು – ಇದಕ್ಕೆಲ್ಲ ಏನಾದ್ರೂ ಅರ್ಥ ಇದೆಯೇ ? ತಥ್, ನನಗಿದೆಲ್ಲ ಇಷ್ಟವಾಗೋದಿಲ್ಲ.

ಅಮ್ಮ ಆಗ ಅಸೌಖ್ಯದಿಂದ ಹಾಸಿಗೆ ಹಿಡಿದಿದ್ದರು. ಅಪ್ಪ ಅಷ್ಟಾಗಿ ಮಾತನಾಡುತ್ತಿರಲಿಲ್ಲ. ಅಕ್ಕಂದಿರಿಗೂ ಕೈತುಂಬಾ ಕೆಲಸ. ಇನ್ನು ಮನೆಯಲ್ಲಿ ನಾನೊಬ್ಬ ಅತಿರಿಕ್ತ, ಅಪ್ರಯೋಜಕ, ಪರಿತ್ಯಕ್ತ ಎನ್ನುವ ಭಾವನೆ ನನ್ನಲ್ಲಿ ಉಂಟಾಗಿ ಬಿಟ್ಟಿತ್ತು. ಮನೆಯ ಬಗ್ಗೆ ಯೋಚಿಸುತ್ತಲೇ ನನಗೆ ತೀವ್ರ ಕೋಪ ಉಕ್ಕೇರುತ್ತಿತ್ತು. ಒಮ್ಮೊಮ್ಮೆ ಅಕ್ಕ ಹೇಳುತ್ತಿದ್ದಳು, ಚೊಕ್ಕಟವಾಗಿ, ಸ್ವಚ್ಛವಾದ ಬಟ್ಟೆಯನ್ನು ಹಾಕಿಕೊಂಡಿರೋದಕ್ಕೆ ಆಗೋದಿಲ್ವೆ. ನಿನ್ನ ಬಟ್ಟೇನೋ ಬರೇನೋ, ದಿನೇ ದಿನೇ ನಿನ್ನ ಮುಖ ಹೇಗೆ ಅಸಹ್ಯವಾಗ್ತಾ ಇದೆ ನೋಡ್ಕೊ. ನಿನ್ನಿಂದ ನಮಗೆಲ್ಲ ಒಂದು ರೀತಿ ನಾಚಿಕೆ. ಆ ದಿನ ನಾನು ಅಕ್ಕನ ಮೇಲೆ ಲೋಟ ಎತ್ತಿ ಹಾಕಿ ಅವಳನ್ನು ಹೊಡೆದಿದ್ದೆ.

ರೈಲು ಲೈನಿನ ಹತ್ತಿರ ಮೂರು ನಾಲ್ಕು ಜನ, ಕೆಲವು ಮಣ್ಣಿನ ಮಡಿಕೆಗಳನ್ನಿಟ್ಟುಕೊಂಡು, ಗುಂಪಾಗಿ ಕುಳಿತಿರುತ್ತಿದ್ದರು. ನೋಡಿ ನಮಗೆ ಕುತೂಹಲವುಂಟಾಗಿ ಅಲ್ಲಿಗೆ ಹೋಗಿದ್ದೆವು. ಹೆಂಡ ಕುಡಿದು ನಾನು ಶೇಖರ ಮತ್ತರಾದೆವು. ಅದೇ ಮೊದಲು ಕುಡಿದದ್ದು. ಆಗ ನಮ್ಮ ವಯಸ್ಸು ಹದಿನಾಲ್ಕೊ, ಹದಿನೈದೊ ಇರಬಹುದು.

ಮೆಟ್ರಿಕ್ ತೇರ್ಗಡೆಯಾದ ಮೇಲೆ, ನನಗೆ ಕಲಕತ್ತೆಗೆ ಹೋಗಿ ಓದಿ ಬರೆದೂ ಮಾಡಬೇಕೆಂದು ಬಹಳ ಆಸೆ ಇತ್ತು. ಬಹರಾಂಪುರ ನನಗಿಷ್ಟವಾಗ್ತಿರಲಿಲ್ಲ. ಅದಲ್ಲದೆ ನನಗೆ ವಿಜ್ಞಾನ ಓದಲು ಒಂದಿಷ್ಟೂ ಮನಸ್ಸಿರಲಿಲ್ಲ. ಆದರೆ ನನ್ನ ಮಾತನ್ನು ಒಂದು ಚೂರೂ ಕೇಳದೆ ನನ್ನನ್ನ ಬಲವಂತವಾಗಿ, ಬಹರಾಂಪುರದ ಐ.ಕೆ.ಸಿ.ಯಲ್ಲಿ ಸೇರಿಸಿ

ಬಿಟ್ಟರು. ನಾನು ಅಮ್ಮನ ಹತ್ತಿರ ತುಂಬಾ ಕಾಡಿಬೇಡಿದೆ. ಆದರೆ ಅಮ್ಮ ನನ್ನ ಪರವಾಗಿ ಒಂದು ಚೂರೂ ಅಪ್ಪನಿಗೆ ಹೇಳಲಿಲ್ಲ. ಆಗ ಅಮ್ಮನ ಮೇಲೆ ನನಗೆ ತುಂಬಾ ಸಿಟ್ಟು ಬಂದಿತ್ತು. ಕಾಲೇಜಿಗೆ ಸ್ವಲ್ಪ ದಿನ ಹೋದ ಮೇಲೆ, ಕೆಮಿಸ್ಟ್ರಿ ಪ್ರ್ಯಾಕ್ಟಿಕಲ್‌ನಲ್ಲಿ, ಆಕಸ್ಮಾತ್ ನನ್ನ ಕೈತಾಗಿ, ಪೋರ್ಸಿಲಿನ್ ಬೀಕರ್ ಹಾಗೂ ಸಲ್ಫ್ಯೂರಿಕ್ ಆ್ಯಸಿಡ್‌ನ ಜಾರ್ ಕೈತಪ್ಪಿ ಕೆಳಗೆ ಬಿದ್ದು ಒಡೆದು ಹೋಯಿತು. ಅದಕ್ಕಾಗಿ ಕಾಲೇಜಿನಲ್ಲಿ ಇಪ್ಪತ್ತೈದು ರೂಪಾಯಿ ದಂಡ ವಿಧಿಸಿದರು. ಹಾಗೆ ನೋಡ ಹೋದರೆ ಇದರಲ್ಲಿ ನನ್ನದೇನೂ ತಪ್ಪಿರಲಿಲ್ಲ. ಸಲ್ಫ್ಯೂರಿಕ್ ಆ್ಯಸಿಡ್ ಒಂದು ವೇಳೆ ಪೂರ್ತಿಯಾಗಿ ನನ್ನ ಮೈ ಮೇಲೆ ಬಿದ್ದಿದ್ದರೆ ನಾನು ಸತ್ತೇ ಹೋಗಬಹುದಿತ್ತು. ಕೇವಲ ಬಲಗಾಲಿನ ಬೆರಳಿನ ಮೇಲೆ ಒಂದು ಹನಿ ಮಾತ್ರ ಬಿದ್ದಿತ್ತು. ಈಗಲೂ ನನ್ನ ಕಾಲ ಬೆರಳು ಸುಟ್ಟು ಬಿಳಿಯಾಗಿಯೇ ಇದೆ. ಈ ವಿಷಯ ಕೇಳಿದ ಮೇಲೆ ಅಪ್ಪ, ಸಿಟ್ಟಿನಿಂದ ಕೆಂಡಕಾರಿದ್ದರು. ಅವರ ಧೋರಣೆ ಏನೆಂದರೆ, ನನಗೆ ವಿಜ್ಞಾನದ ವಿಷಯ ಓದಲು ಇಷ್ಟವಿಲ್ಲದೆ ಬೇಕೆಂದೇ ಎಲ್ಲವನ್ನು ಬೀಳಿಸಿ ಒಡೆದು ಹಾಕಿದ್ದೇನೆ ಎಂದು ಮತ್ತು ಅಪ್ಪನನ್ನ ಈ ರೀತಿ ಹೆದರಿಸ್ತಾ ಇದೀನಿ ಅಂತ. ಅಪ್ಪ ಅಂದು ಅಮ್ಮನಿಗೆ, ಈ ಕುಲಘಾತಕ ಮಾಡಿರೋ ಕೆಲಸಕ್ಕೆ, ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಾನು ಮೂರು ದಿನ ಊಟ ಮಾಡೋದಿಲ್ಲ ಎಂದರು. ಮನೆಯಲ್ಲಿ ಎಲ್ಲರೂ ನನ್ನನ್ನು ಅವಹೇಳನದ ದೃಷ್ಟಿಯಿಂದ ನೋಡಿದ್ದರು. ಬುದ್ಧಿ ತಿಳಿದ ಮೇಲೆ ಅಂದೇ ನಾನು ಮೊದಲ ಬಾರಿ ಅಮ್ಮನ ಬಳಿ ಹೋಗಿ ಅತ್ತದ್ದು. ಅಮ್ಮನಿಗೆ ಎಷ್ಟೋ ತಿಳಿ ಹೇಳುವ ಪ್ರಯತ್ನ ಮಾಡಿದೆ, ಅಮ್ಮ ಬೇಕೆಂದೇ ನಾನು ಆ ರೀತಿ ಮಾಡಲಿಲ್ಲ. ಕ್ಲಾಸುಗಳು ಪ್ರಾರಂಭವಾದ ಮೇಲೆ ಖಂಡಿತವಾಗಿಯೂ ನನಗೆ ವಿಜ್ಞಾನ ಅಷ್ಟೇನು ಕಷ್ಟ ಅಂತ ಅನ್ನಿಸುತ್ತಿರಲಿಲ್ಲ, ಅಮ್ಮ ನೀನು ನನ್ನನ್ನ ನಂಬು.

ಅಮ್ಮ ನನ್ನನ್ನು ನಂಬಿದಳೋ, ಬಿಟ್ಟಳೋ ಆದ್ರೆ ಅಮ್ಮ ಮಾತನಾಡಲಿಲ್ಲ. ಆ ದಿನ ಅಪ್ಪ ಊಟ ಮಾಡಲಿಲ್ಲ. ಅಕ್ಕಂದಿರು ಅಪ್ಪನ್ನ ಊಟಕ್ಕೆಬ್ಬಿಸಲು ಪ್ರಯತ್ನಪಟ್ಟರು. ಆ ದಿನ ನಾನು ಉಂಡೆನೋ ಬಿಟ್ಟೆನೋ ಎನ್ನುವುದನ್ನು ಯಾರೂ ಗಮನಿಸಲಿಲ್ಲ. ಅದೇ ದಿನ, ರಾತ್ರಿ ನಾನು ಕಲಕತ್ತೆಗೆ ಓಡಿ ಬಂದೆ. ಸುಟ್ಟ ಕಾಲನ್ನು ಇಟ್ಟುಕೊಂಡೇ ಜೀವನದಲ್ಲಿ ಪ್ರಥಮ ಬಾರಿಗೆ ನಾನು ಕಲಕತ್ತೆಗೆ ಬಂದಿದ್ದೆ. ನನ್ನ ಹೃದಯದಲ್ಲಿ ಅಹಂಕಾರ ಹಾಗೂ ತೀವ್ರ ಕೋಪವಿತ್ತು. ಅದಕ್ಕೆ ಕಲಕತ್ತೆಯಲ್ಲಿ ನನಗೆ ಭಯವಾಗಲಿಲ್ಲ. ಶಿಯಾಲ್‌ದಾದಿಂದ ನಡೆಯುತ್ತ, ಬಾಗ್‌ಬಾಜಾರದ ಕಕ್ಕನ ಮನೆಗೆ ಬಂದಿದ್ದೆ. ಆನಂತರ ಏಳು ದಿನ ಜ್ವರ ಬಂದು ಮಲಗಿ ಬಿಟ್ಟಿದ್ದೆ.

ಕಕ್ಕನಿಗೆ ಸ್ವಂತ ಮಕ್ಕಳ್ಯಾರೂ ಇರಲಿಲ್ಲ. ಅದಕ್ಕೆ ಅವರು ನನ್ನನ್ನ ಬಹಳ ಪ್ರೀತಿಸುತ್ತಿದ್ದರು. ಕಕ್ಕನ ಮನೆಯಲ್ಲಿದ್ದುಕೊಂಡೇ ಕಲಕತ್ತೆಯ ಕಾಲೇಜಿಗೇ ಸೇರಿಕೊಂಡೆ. ಅಂದೇ ಬಹರಾಂಪುರದೊಂದಿಗಿನ ಸಂಪರ್ಕ ಕಡಿದು ಬಿತ್ತು. ಮೊದಲ ಎರಡು ವರ್ಷ ನಾನು ಪರೀಕ್ಷೆಯಲ್ಲಿ ತೇರ್ಗಡೆಯಾದ ನಂತರವೂ ನಾನು ಅಪ್ಪ ಅಮ್ಮನಿಗೆ ನಮಸ್ಕಾರ ಮಾಡಲು ಹೋಗಿರಲಿಲ್ಲ. ಕಕ್ಕಿ ನನಗೆ ತಾಯಿಯಿಲ್ಲದ ಕೊರತೆ ತುಂಬಿದ್ದಳು. ಕಕ್ಕಿ ನನಗೆ ದಿನದ ಕೈ ಖರ್ಚಿಗೆ ಹಣ ಹಾಗೂ ಸ್ವಾತಂತ್ರ್ಯವನ್ನು

ಕೊಟ್ಟಿದ್ದರು. ಅದಕ್ಕೆ ನಾನು ಕಕ್ಕಿಯ ಮುಂದೆ ಎಂದೂ ಸುಳ್ಳು ಹೇಳುತ್ತಿರಲಿಲ್ಲ. ಮಕ್ಕಳಾಗಲಿಲ್ಲವೆಂದು, ಕಕ್ಕ ಬಹಳಷ್ಟು ಜನ ಡಾಕ್ಟರಿಗೆ, ಕಕ್ಕಿಯನ್ನು ಪರೀಕ್ಷಿಸಲು ಕರೆದುಕೊಂಡು ಹೋಗುತ್ತಿದ್ದರು. ಮೂರನೇ ಸಲ ಆಪರೇಷನ್ ಮಾಡುವಾಗ, ಕಕ್ಕಿ ಸಾವನ್ನಪ್ಪಿದಾಗ, ಕಕ್ಕನ ಮನೆಯಲ್ಲಿ ನನ್ನ ಸುಖದ ಗೂಡು ಒಡೆದು ಹೋಯಿತು.

ಅಪ್ಪ ಇನ್ನೊಮ್ಮೆ ಎಷ್ಟು ದೊಡ್ಡ ಅನ್ಯಾಯ ಮಾಡಿಬಿಟ್ಟರೆಂದರೆ, ಅದು ನನ್ನ ಮನಸ್ಸಿನಲ್ಲಿ ಸ್ಥಿರವಾಗಿಯೇ ಉಳಿದು ಬಿಟ್ಟಿತ್ತು. ಅದಕ್ಕಾಗಿ ಅಪ್ಪನನ್ನು ನನ್ನಿಂದ ಕ್ಷಮಿಸಲು ಸಾಧ್ಯವಿಲ್ಲ. ಕೊನೆಯಕ್ಕನ ಮದುವೆ ಸಮಯದಲ್ಲಿ ಕಕ್ಕಿ ಹಾಗೂ ಕಕ್ಕ ನನ್ನನ್ನು ಬಲವಂತ ಮಾಡಿ, ಬಹರಾಂಪುರಕ್ಕೆ ಕರೆದುಕೊಂಡು ಹೋಗಿದ್ದರು. ಆನಂತರ ನಡು ನಡುವೆ ಒಮ್ಮೊಮ್ಮೆ ನಾನೂ ಬಹರಾಂಪುರಕ್ಕೆ ಹೋಗಿ ಬರಲು ಪ್ರಾರಂಭಿಸಿದೆ. ಬಿ.ಎ. ಪರೀಕ್ಷೆಯ ನಂತರ ರಜೆಯಲ್ಲಿ ನಾನು ಬಹರಾಂಪುರಕ್ಕೆ ಹೋಗಿ ಒಂದೂವರೆ ತಿಂಗಳಿದ್ದೆ. ಅದೇ ಸಮಯದಲ್ಲಿ ಗಾಯತ್ರಿಯೊಡನೆ, ನನ್ನ ಹೊಸ ಸಂಬಂಧ ಹುಟ್ಟಿಕೊಂಡಿತು. 'ಭ್ರಾತೃ ಸಂಘ'ದ ಸೆಕ್ರೆಟರಿ ನರೇನ್‌ದಾ ನನ್ನನ್ನು ತುಂಬಾ ಇಷ್ಟಪಡುತ್ತಿದ್ದರು. ಅವರ ತಂಗಿ ಗಾಯತ್ರಿ ನನಗೆ ಶಾಲೆ ಓದುವಾಗಿನಿಂದಲೂ ಪರಿಚಯ. ಆದರೆ ಆಗ ಹಾಫ್-ಪ್ಯಾಂಟ್ ಹಾಗೂ ಫ್ರಾಕಿನ ರಹಸ್ಯ ತಿಳಿಯುವುದಕ್ಕೆ ಬಹಳ ಕುತೂಹಲವಿತ್ತು. ಗಾಯತ್ರಿಯ ಬತ್ತಿಹೋದ, ಉದ್ದನೆಯ ಮುಖ ನನಗೆಂದೂ ಆಕರ್ಷಣೀಯವಾಗಿ ಕಂಡಿರಲಿಲ್ಲ. ಟೌನ್ ಕ್ಲಬ್‌ನ ಪೇದೆ ರಾಮಶರಣ ಹಾಗೂ ಅವನ ಹೆಂಡತಿಯನ್ನ ಬೇರೆಯೇ ಅವಸ್ಥೆಯಲ್ಲಿ ನೋಡಿ ಬಿಟ್ಟ ಮೇಲೆ ಅಕಾರಣವಾಗಿಯೇ ನನ್ನ ರಕ್ತ ಬಿಸಿಯಾಗಲಾರಂಭಿಸಿತ್ತು. ನಾನು ಕೊನೆಯಕ್ಕನ ಸ್ನೇಹಿತೆ, ದೊಡ್ಡ ಗಾತ್ರದ ಪಾರೂಲ್‌ದೀಯನ್ನು ಬಿಗಿಯಾಗಿ ಅಪ್ಪಿ ಹಿಡಿದುಕೊಂಡು ಬಿಟ್ಟಿದ್ದೆ. ಪಾರೂಲ್‌ದೀ ಏನೂ ಅದಕ್ಕೆ ಅಡ್ಡಿ ಬಂದಿರಲಿಲ್ಲ. ನನ್ನ ಕೆನ್ನೆಗೆ ಒಂದು ಏಟು ಕೊಟ್ಟು ಹೇಳಿದ್ದಳು, ಥೂ, ದುಷ್ಟ. ತುಂಬಾ ಕೆಟ್ಟು ಹೋಗಿದೀಯಾ ಅಲ್ವಾ ?

ಆ ಸಲ ನಾನು ಗಾಯತ್ರಿಯನ್ನ ಬೇರೆಯೇ ರೀತಿಯಲ್ಲಿ ಕಂಡೆ, ಗಾಯತ್ರಿಯಲ್ಲಿ ನಾನು ಒಬ್ಬ ರಹಸ್ಯಮಯಿಯನ್ನು ಕಂಡೆ. ಉದ್ದನೆಯ ಅಗಲ ಮುಖ. ಎತ್ತರ ಸುಮಾರು ನನ್ನಷ್ಟೆ. ಉತ್ತಮ ಸ್ವಾಸ್ಥ್ಯಶರೀರ. ಹಿಂದೆ ಎಲ್ಲಿ ಒಣಗಿದ ಕೆರೆಯನ್ನು ಕಂಡಿರುತ್ತೇವೋ ಥಟ್ಟನೆ ಒಂದು ವೇಳೆ ಅದೇ ಜಾಗದಲ್ಲಿ ಒಂದು ಹಳದಿ ಬಣ್ಣದ ಒಂದಂತಸ್ತಿನ ಮಹಡಿ ಮನೆ ಕಟ್ಟೋದನ್ನ ನೋಡಿದರೆ ಆಗ ಮನಸ್ಸಿಗೆ ಯಾವ ರೀತಿ ಖುಷಿಯಾಗುತ್ತದೋ, ಗಾಯತ್ರಿಯನ್ನ ನೋಡಿ ನನಗೆ ಅದೇ ತರಹ ಅನ್ನಿಸಿತು. ಮೆಲ್ಲಗೆ ಕಾಲೆಳೆದುಕೊಂಡು ನಡೆಯುತ್ತಿರುವಾಗ, ಮಾತನಾಡ್ತಾ ಇದ್ದರೆ, ಪ್ರತಿ ಸಲವೂ ಪ್ರತ್ಯೇಕ ಶಬ್ದವನ್ನೂ ಪ್ರತ್ಯೇಕ ಭಾವನೆಯಿಂದ ಗುರುತಿಸಲು ಸಾಧ್ಯವಾಗುವುದಿಲ್ಲ.

ಗಾಯತ್ರಿ ಕೂಡಾ, ಆ ಸಲ ಬಿ.ಎ. ಪರೀಕ್ಷೆ ಕಟ್ಟಿದ್ದಳು. ಸಂಜೆ ಹೊತ್ತು ಲೈಬ್ರರಿಯಿಂದ ಪುಸ್ತಕ ಬದಲಾಯಿಸಿಕೊಂಡು ಬರುವಾಗ, ಜೈಲು ಹತ್ತಿರದ ರಸ್ತೆಯಲ್ಲಿ ನನಗೆ ಕಾಣಸಿಗುತ್ತಿದ್ದಳು. ಗಾಯತ್ರಿಯ ಕೈಯಲ್ಲಿ ದಿನಾ ಎರಡೇ ಪುಸ್ತಕ. ಮತ್ತು ಪ್ರತಿ ದಿನವೂ ಒಂದೊಂದು ಬಣ್ಣದ ಸೀರೆ ಉಟ್ಟಿರುತ್ತಿದ್ದಳು. ಎಷ್ಟೇ ಸೆಖೆ

ಇದ್ದರೂ ಅವಳ ಮುಖದಲ್ಲಿ ಒಂದಿನಿತೂ ಬೆವರಿಲ್ಲ. ರಸ್ತೆಯಲ್ಲಿನ ಎಲ್ಲಾ ಗಾಳಿಯನ್ನು ಅವಳೊಬ್ಬಳೇ ಸೇವಿಸಿಕೊಂಡು ನಡೆದುಕೊಂಡು ಬರುತ್ತಿದ್ದಾಳೆಯೋ ಏನೋ ಎನ್ನುವಂತೆ. ನಾನು ಮೊದಲ ದಿನ ಚಕಿತನಾಗಿ ಅವಳನ್ನೇ ನೋಡುತ್ತಲಿದ್ದೆ, ಹತ್ತಿರ ಹೋಗಿ ಮಾತನಾಡಿಸಲೋ ಬೇಡವೋ ಅಂತ ಯೋಚಿಸುತ್ತಲಿದ್ದೆ. ನನ್ನನ್ನು ಕಂಡು ಪರಿಚಯದ ನಗೆ ನಕ್ಕು ಹತ್ತಿರ ಬಂದಿದ್ದಳು. ಅನಂತರ ಪ್ರತಿ ದಿನ ಗಾಯತ್ರಿಯ ಜೊತೆ ನಾನು ಅಡ್ಡಾಡಲು ಪ್ರಾರಂಭಿಸಿದೆ.

ಗಾಯತ್ರಿಯ ಜೊತೆ ನಾನು ಅಷ್ಟಾಗಿ ಹೆಚ್ಚು ಮಾತನಾಡುತ್ತಿರಲಿಲ್ಲ. ಹೃದಯದಲ್ಲಿ ಏನೋ ಒಂದು ರೀತಿಯ ಕಂಪನವಿರುತ್ತಿತ್ತು. ಗಾಯತ್ರಿಯ ಜೊತೆ ನಾನು ಸಂಜೆ ತಿರುಗಾಡಲು ಹೋಗುತ್ತಿದ್ದುದು ನನ್ನ ಪರಮ ಸೌಭಾಗ್ಯ. ನಾನಿದಕ್ಕೆ ಯೋಗ್ಯನೇ ? ಎಂದು ನನಗನ್ನಿಸತೊಡಗಿತು. ಒಬ್ಬ ಪೂರ್ಣ ಯುವತಿ ನನ್ನೊಡನೆ ಗಂಗಾ ತೀರದಲ್ಲಿ ಸೂರ್ಯಾಸ್ತಮಾನ ನೋಡಲು ಬರಲೊಪ್ಪುತ್ತಾಳೆ. ಇದನ್ನು ಪಡೆಯಲು ನಾನು ಯೋಗ್ಯನಿರಲಿಲ್ಲ ಅಂತ ಕಾಣುತ್ತೆ. ಈ ವಯಸ್ಸಿನಲ್ಲಿ ಹುಡುಗಿಯಿಂದ ಅವಹೇಳನ, ಅಪಮಾನ ಪಡೆಯಲೆಂದೇ ಮನಸ್ಸು ಉನ್ಮತ್ತವಾಗಿರುತ್ತದೆ. ಗಾಯತ್ರಿ ನನಗೆಂದಿದ್ದಳು, ನಾನು ನಿನಗೆ ಸತೀನಾಥ ಭಾದುರಿಯವರ 'ಜಾಗರೀ' ಪುಸ್ತಕವನ್ನು ಓದಲು ಕೊಡ್ತೀನಿ. ಪುಸ್ತಕ ಓದಿ ನಿನಗೆ ಅಳು ಬಂತೋ ಬಿಡ್ತೋ ಅನ್ನೋದನ್ನ ನನಗೆ ಹೇಳಬೇಕು. ಯಾಕೇಂದ್ರೆ ಇದರಿಂದ ನಮ್ಮಿಬ್ಬರ ನಡುವೆ ಒಮ್ಮತವಿದೆಯೋ ಇಲ್ವೋ ಅನ್ನೋದು ತಿಳಿಯುತ್ತೆ. ನಾನಂತು ಪುಸ್ತಕ ಓದಿ ಕಣ್ಣೀರಿಟ್ಟಿದ್ದೀನಿ. ಪುಸ್ತಕ ಚೆನ್ನಾಗಿದೆ ಓದು ಅಂತ ಅಣ್ಣನಿಗೂ ಶಿಫಾರಸ್ಸು ಮಾಡಿಕೊಟ್ಟೆ. ನಮ್ಮಣ್ಣನೋ ಕಣ್ಣು ಮಿಟಕಿಸದೆ, ಒಂದೇ ಸಲಕ್ಕೆ ಓದಿ ಮುಗಿಸಿ, ಪರವಾಗಿಲ್ಲ, ಚೆನ್ನಾಗಿ ಬರ್ದಿದ್ದಾರೆ ಅಂತ ಹೇಳಿದ. ಆದರೂ ಪುಸ್ತಕ ಓದೋದ್ರಿಂದ ಏನಾದರೂ ಅರ್ಥವಾಗಲು ಸಾಧ್ಯವೇ ?

'ಜಾಗರಿ'ಯನ್ನು ಈ ಮೊದಲೇ ನಾನು ಓದಿದ್ದೆ ಹಾಗೂ ಓದುತ್ತಿದ್ದಂತೆಯೇ ಅತ್ತಿದ್ದೆ ಕೂಡಾ. ಓದಿ ಎಷ್ಟು ಜೋರಾಗಿ ಅತ್ತಿದ್ದೆ ಎಂದರೆ ಪಕ್ಕದ ಕೋಣೆಯಿಂದ ಅಳು ಕೇಳಿ ಕಕ್ಕಿ ಓಡಿ ಬಂದಿದ್ದಳು ಕೂಡಾ. ಆದರೆ ಗಾಯತ್ರಿಯ ಎದುರು ಥಟ್ಟನೆ ನನಗೆ ಆ ವಿಷಯವನ್ನು ಹೇಳಲು ನಾಚಿಕೆಯಾಗಿತ್ತು. ಆ ವಿಷಯನ್ನ ಆಗಲೇ ಹೇಳಿಬಿಟ್ಟರೆ, ಆಗ ಗಾಯತ್ರಿಯ ಮನಸ್ಸಿನೊಂದಿಗೆ ನನ್ನ ಮನಸ್ಸು ಸೇರಿದಂತೆಯೇ. ಗಾಯತ್ರಿಗೆ ಇನ್ನೂ ಅನೇಕ ವಿಷಯಗಳನ್ನು ನನ್ನಿಂದ ಹೇಳಲು ಸಾಧ್ಯವಾಗಲಿಲ್ಲ. ಯಾವುವೆಂದರೆ, ಯಾಕೆ ನೀನು ಯಾವಾಗಲೂ ಕಣ್ಣಿಗೆ ಕಾಡಿಗೆಯನ್ನು ಹಚ್ಚಿಕೊಂಡೇ ಇರುತ್ತೀಯಾ ? ಅಲ್ಲದೆ ಯಾವುದೇ ವಿಷಯ ಮಾತನಾಡುವಾಗ ನಿನ್ನ ಕಣ್ಣುಗಳೆರಡೂ ಆ ರೀತಿ ಏಕೆ ನಗುತ್ತಿರುತ್ತವೆ ? ಒಮ್ಮೊಮ್ಮೆ ನಡೆಯುವಾಗ ನನ್ನ ಮೈ ನಿನ್ನ ಮೈಗೆ ತಾಗಿದಾಗ ನನ್ನ ಹೃದಯ ಏಕೆ ಡವಗುಟ್ಟುತ್ತೆ ? ಒಮ್ಮೊಮ್ಮೆ ನನ್ನ ಮುಖವನ್ನೇ ದಿಟ್ಟಿಸಿ ನೋಡಿ ನನ್ನ ಮುಖದಲ್ಲಿ ಏನನ್ನ ನೋಡ್ತೀಯಾ ? ನನ್ನ ಹಣೆಯಲ್ಲಿ ಒಂದು ಗಾಯದ ಗುರುತಿದೆ ಅದನ್ನೆ ? ಆದರೆ ಇದ್ಯಾವುದನ್ನೂ ನಾನು ಅವಳಿಗೆ ಹೇಳಲಿಲ್ಲ.

ಒಂದು ದಿನ ಗಾಯತ್ರಿಯ ಜೊತೆ ನಾನು ಅಡ್ಡಾಡುತ್ತಿದ್ದಾಗ, ಅಪ್ಪ ರಸ್ತೆಯಲ್ಲಿ

ಎದುರಾದರು. ಆಗವರು ಸಾಹೇಬರ ಮಗನಿಗೆ ಪಾಠ ಹೇಳಿ ಕೊಡಲು ಹೊರಟಿದ್ದರು. ಅಪ್ಪನನ್ನು ನೋಡುತ್ತಲೇ ನಾನು ನನ್ನ ಸಿಗರೇಟನ್ನ ಬಿಸಾಡಿ ಬಿಟ್ಟಿದ್ದೆ. ಗಾಯತ್ರಿಯನ್ನು ಈಗ ತಾನೇ ಸಂಧಿಸಿದೆ ಎನ್ನುವಂತೆ ನಾನು ಥಟ್ಟನೆ ಅವಳೊಡನೆ ಬಿ.ಎ. ಪರೀಕ್ಷೆಯ ವಿಷಯದ ಬಗ್ಗೆ ಮಾತನಾಡಲು ಪ್ರಾರಂಭಿಸಿದೆ. ಅಪ್ಪ ದೆವ್ವವನ್ನು ಕಂಡವರಂತೆ ಥಟ್ಟನೆ ನಿಂತು ಬಿಟ್ಟರು. ಆಶ್ಚರ್ಯಚಕಿತರಾಗಿ ನಮ್ಮ ಕಡೆ ನೋಡಿದರು. ಅದೇನೋ ಆ ತರಹದ ದೃಶ್ಯವನ್ನು ಸ್ವಪ್ನದಲ್ಲಿ ಕಾಣಲು ಸಾಧ್ಯವೆನ್ನುವಂತೆ, ಒಂದು ಟ್ರಕ್ ಬರುತ್ತಿದೆ ಎಂದು ಸ್ವಲ್ಪ ಸರಿದು ನಿಂತುಕೊಂಡಂತೆ ಮಾಡಿದರು. ಆದರೆ ನನಗೆ ಗೊತ್ತು ಅವರು ನಿಂತಿದ್ದು ನನ್ನ ಹಾಗೂ ಗಾಯತ್ರಿಯನ್ನ ಜೊತೆಯಲ್ಲಿ ಕಂಡು. ನನಗೊಂದು ರೀತಿಯ ಕಸಿವಿಸಿಯಾಯಿತು. ನಾನು ಏನೊಂದು ಮಾತನ್ನೂ ಆಡಲಿಲ್ಲ. ಈಗ ಪೀಕಲಾಟವೇನೆಂದರೆ, ಯಾರಾದರೂ ಸ್ವಂತ ಅಪ್ಪನನ್ನು ರಸ್ತೆಯಲ್ಲಿ ಭೇಟಿಯಾದರೆ ಏನು ಮಾಡ್ತಾರೆ? ಬೇರೆಯವರುಗಳ ತರಹ ಅಪ್ಪನನ್ನ ಹೇಗಿದ್ದೀರ ಅಂತ ಕೇಳೋದಕ್ಕಾಗೋದಿಲ್ಲ. ಗುರುತಿಸಿ, ಪರಿಚಯದ ನಗುವನ್ನು ನಗಲು ಕೂಡಾ ಸಾಧ್ಯವಿಲ್ಲ. ಪರಿಚಯವೇ ಇಲ್ಲವೆನ್ನುವಂತೆ ಮುಖವನ್ನ ತಿರುಗಿಸಿಕೊಳ್ಳಬೇಕಾಗುತ್ತೆ. ನಾನು ಕೂಡಾ ಕಣ್ಣು ತಗ್ಗಿಸಿ ರಸ್ತೆಯ ಇತರ ಜನರಂತೆ ಅಪ್ಪನ ಪಕ್ಕದಲ್ಲಿಯೇ ನಡೆದು ಹೊರಟು ಹೋದೆ. ಅದನ್ನೆಲ್ಲ ಗಾಯತ್ರಿ ಗಮನಿಸಲಿಲ್ಲ.

ಮಾರನೆಯ ದಿನ ಸಾಯಂಕಾಲ ಗಾಯತ್ರಿಯ ಮುಖ ಪೆಚ್ಚಾಗಿತ್ತು. ನನಗನ್ನಿಸಿತು – ಇಡೀ ಮಧ್ಯಾಹ್ನವೆಲ್ಲಾ ಅವಳು ಅತ್ತಿರಬೇಕು. ನನಗೆಂದಳು, ಇನ್ನು ಮುಂದೆ ಸಂಜೆ ಹೊತ್ತು ನೀನು ಈ ತರಹ ಬರಬೇಡ.

ನಾನು ಆಘಾತಗೊಂಡು ಹೇಳಿದೆ, ಯಾಕೆ?

ನಿನಗೆ ನಾಚಿಕೆಯಾಗೋದಿಲ್ಲವೇ? ನೀವೆಲ್ಲ ಒಂದೇ ತರಹ.

ಏನಾಯ್ತು?

ಗಾಯತ್ರಿ ಮ್ಲಾನವದನಳಾಗಿ ಹೇಳಿದಳು, ನನಗೆ ಖಂಡಿತವಾಗಿಯೂ ಈಗಲೇ ಮದುವೆ ಮಾಡಿಕೊಳ್ಳುವ ಮನಸ್ಸಿಲ್ಲ. ದಯವಿಟ್ಟು ಬಲವಂತ ಮಾಡ್ಬೇಡಿ.

ನನಗೆ ಆಗಲೂ ವಿಷಯವೇನೆಂಬುದು ತಿಳಿಯಲಾಗಲಿಲ್ಲ. ಆದರೂ ಆ ವಿಷಯದಿಂದ ನಾನು ನಡುಗಿಯೇ ಬಿಟ್ಟೆ. ಆಶ್ಚರ್ಯದಿಂದ ನಾನು ಕೇಳಿದೆ, ಗಾಯತ್ರಿ ವಿಷಯವಾದ್ರೂ ಏನು?

ನಿಮ್ಮಪ್ಪ ನಮ್ಮನೆಗೆ ಹೋಗಿದ್ದರು. ನಿನ್ನ ಜೊತೆ ನನ್ನ.... ಹೌದು, ನಮ್ಮಪ್ಪನಿಗೆ ಅದೇ ವಿಷಯ ಹೇಳಿದ್ದಾರೆ. ನಾನೇ ನನ್ನ ಕಿವಿಯಾರ ಕೇಳಿದ್ದೇನೆ. ಈ ವಿಷಯವನ್ನ ಸ್ವತಃ ನೀನೇ ನನಗೆ ಹೇಳಬಹುದಾಗಿತ್ತು. ಮೊದಲೇ ನಿಮ್ಮಪ್ಪನ್ನ ಯಾಕೆ ಕಳಿಸಬೇಕಿತ್ತು?

ಅವಮಾನದಿಂದ ನನ್ನ ಕಿವಿ ಹಾಗೂ ಮೂಗು ಕೆಂಪಗಾಯಿತು. ಆ ವಯಸ್ಸಿನಲ್ಲಿ ನನಗೆ ತುಂಬಾ ಅವಮಾನವಾದಂತೆ ಮನಸ್ಸಿಗೆನಿಸಿತು. ಆಗಲೇ ಕಣ್ಣಲ್ಲಿ ನೀರು ಬಂದು ಬಿಟ್ಟಿತ್ತು. ಈ ತರಹದ ಘಟನೆಯನ್ನು ನಾನು ಕನಸು ಮನಸ್ಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ. ಅಪ್ಪ ನಿನ್ನೆ ರಾತ್ರಿ ಮನೆಯಲ್ಲಿ ನನಗೇನನ್ನೂ ಹೇಳಿರಲಿಲ್ಲ. ಈ

ವಿಷಯವಾಗಿ ಮನೆಯಲ್ಲಿ ಏನೊಂದು ರಾದ್ಧಾಂತ ರಂಪಾಟವೂ ನಡೆದಿರಲಿಲ್ಲ. ನಾನು ಬಹಳ ಕಷ್ಟಪಟ್ಟು ಅಳುವನ್ನು ನುಂಗಿಕೊಂಡು ಹೇಳಿದೆ, ಗಾಯತ್ರಿ ನನ್ನನ್ನು ನಂಬು. ನನಗಿದೆಲ್ಲ ಏನೂ ಗೊತ್ತಿಲ್ಲ.

ನಿಮ್ಮಪ್ಪ ಹೇಳಿದರು, ನಾವಿಬ್ಬರೂ ಒಂದೇ ಜಾತಿ. ಹಾಗಿದ್ದಲ್ಲಿ ಈ ತರಹ ಕದ್ದು ಮುಚ್ಚಿ ಅಡ್ಡಾಡೋದೇಕೆ ? ಅದನ್ನ ನಿಲ್ಲಿಸಬೇಕಂತೆ. ಸರಿ ನಾನು ಅಂಥಾ ಅನ್ಯಾಯವನ್ನೇನು ಮಾಡಿದ್ದೀನಿ ? ಯಾರ ಜೊತೆಯಲ್ಲೇನಾದರೂ ಅಡ್ಡಾಡೋದು ಅಪರಾಧವೇ ? ಒಂದು ವೇಳೆ ನಿನ್ನ ಇಚ್ಛೆಯೂ ಇದೇ ರೀತಿಯದಾಗಿದ್ದರೆ, ನೀನು ನಿಮ್ಮಪ್ಪನ ಮುಂದೆ ಹೇಳೋ ಮೊದಲು ನನ್ನ ಮುಂದೆಯೇ ಹೇಳಬಹುದಿತ್ತು.

ನಾನು ಯಾವ ವಿಷಯವನ್ನ ಯಾರ ಮುಂದೆಯೂ ಹೇಳಿಲ್ಲ.

ನಮ್ಮಪ್ಪ ನಮ್ಮಣ್ಣ ಏನಿಲ್ಲದೇನೇ ಒಪ್ಪಿಕೊಂಡು ಬಿಡ್ತಾರೆ. ಆದರೆ ಖಂಡಿತವಾಗಿಯೂ ನನಗೆ ಮದುವೆ ಮಾಡಿಕೊಳ್ಳೋಕೆ ಸ್ವಲ್ಪವೂ ಇಷ್ಟವಿಲ್ಲ. ಇನ್ನೂ ಓದಬೇಕು, ವಿದೇಶಕ್ಕೆ ಹೋಗಬೇಕು. ಅದು ಬಿಟ್ಟು ಈಗಲೇ.....

ಗಾಯತ್ರಿ ನನ್ನನ್ನು ಕ್ಷಮಿಸಿ ಬಿಡು. ನೀನೇನು ಹೆದರಬೇಡ. ಇಡೀ ವಿಷಯವನ್ನೇ ಮರೆತುಬಿಡು.

ನಾನು ಆ ದಿನ ಮನೆಗೆ ಹಿಂದಿರುಗಿ ಬಾಗಿಲನ್ನ ದೂಡಿಕೊಂಡು ನೇರವಾಗಿ ಅಪ್ಪನ ಕೋಣೆಗೇ ಹೋದೆ. ಅಮ್ಮ ಅಪ್ಪನ ಮೊಣಕಾಲಿಗೆ ಎಣ್ಣೆ ಹಚ್ಚಿ ನೀವುತ್ತಿದ್ದಳು. ನಾನು ಅಪ್ಪನ ಕಡೆ ತಿರುಗಿ ಸಿಟ್ಟಿನಿಂದ ದನಿ ಎತ್ತರಿಸಿ ಹೇಳಿದೆ, ನೀವೇನು ಅಂದುಕೊಂಡಿದೀರಾ ? ನಿಮಗೇನು ಇಷ್ಟ ಬರುತ್ತೋ ಆ ತರಹ ಮಾಡಬಹುದೂಂತ ಅಂದುಕೊಂಡಿದೀರಾ ? ನನ್ನ ಇಚ್ಛೆ ಅನಿಚ್ಛೆಗಳಿಗೆ ಯಾವೊಂದು ಬೆಲೆಯೂ ಇಲ್ಲವೇ ?

ಅಮ್ಮ ದಡಬಡಿಸಿ ಎದ್ದು ಬಂದು ನನ್ನನ್ನು ಹಿಡಿದುಕೊಂಡು ಹೇಳಿದಳು, ಏನೋ ಮಾತಾಡ್ತಿದೀಯ ? ಹುಚ್ಚರ ತರಹ ಯಾಕೆ ಜೋರಾಗಿ ಕಿರುಚಿಕೊಳ್ತಾ ಇದೀಯ ?

ನಾನು ಅಪ್ಪನ ಕೋಣೆಯ ಬಾಗಿಲ ಚೌಕಟ್ಟಿನ ಮೇಲೆ ಕೈಯಿಟ್ಟುಕೊಂಡು, ಸಿಟ್ಟಿನಿಂದ ನಿಂತಿದ್ದೆ. ಉದ್ವೇಗದಿಂದಾಗಿ ನನ್ನ ಮುಖ ಕಣ್ಣುಗಳು ಉರಿಯುತ್ತಿದ್ದವು. ನಾನು ಆಗಲೂ ಜೋರಾಗಿಯೇ ಮಾತನಾಡಿದೆ, ಅಮ್ಮ ನೀನು ಸರಿದು ನಿಂತುಕೋ, ನರೇನ್‌ದಾರ ಮನೆಗೆ ಹೋಗಿ ಅಪ್ಪಾ ಏನು ಹೇಳಿ ಬಂದಿದಾರೆ ಅನ್ನೋದು ನಿನಗೇನಾದ್ರೂ ಗೊತ್ತಾ ಅಮ್ಮ?

ಅಪ್ಪ ಅಂದರು, ಏನೋ ನೀನು ಮದುವೆ ಮಾಡಿಕೊಳ್ಳೋದಕ್ಕೆ ಇಷ್ಟಪಡೋದಿಲ್ಲವೇ ?

ಇಷ್ಟಪಡ್ತೀನೋ ಇಲ್ಲವೋ ಅದು ನನಗೆ ಬಿಟ್ಟಿದ್ದು. ನೀನು ನನ್ನ ಮೊದಲೇ ವಿಚಾರಿಸಬಹುದಿತ್ತು.

ಮದುವೆ ಮಾಡಿಕೊಳ್ಳದೆ, ಹುಡುಗಿಯರೊಂದಿಗೆ ಅಡ್ಡಾಡೋದನ್ನ ನಾನು ಇಷ್ಟಪಡೋದಿಲ್ಲ. ಅದಲ್ಲದೆ ಈ ಮನೇನಲ್ಲಿ ಅವೆಲ್ಲ ನಡೆಯೋಕ್ಕಾಗದು.

ನಡೀಲೇಬೇಕು ಅಂತೇನಿಲ್ಲ. ಇನ್ನು ನಾನು ಈ ಮನೇನಲ್ಲಿ ಎಂದೂ ಇರೋದಿಲ್ಲ.

ಜ್ಞಾಪಕದಲ್ಲಿಟ್ಟುಕೊಳ್ಳಿ, ನಿಮ್ಮ ಚಿಕ್ಕ ಮಗ ಸತ್ತು ಹೋಗಿದ್ದಾನೆ. ನೀವು ನನ್ನ ಬಗ್ಗೆ ಯೋಚನೆ ಮಾಡೋದೇನೂ ಬೇಕಿಲ್ಲ.

ಅಮ್ಮ ಅಂದಳು, ಏನೋ ಇದು, ನೀನು ಈ ತರಹ ಮಾತನಾಡ್ತಾ ಇದೀಯ......

ಅದೇ ಎರಡನೇ ಬಾರಿ ನಾನು ಬಹರಾಂಪುರವನ್ನು ಬಿಟ್ಟು ಬಂದದ್ದು. ಆನಂತರ ನಾನು ಮನೆಯೊಂದಿಗೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಬಯಸಲಿಲ್ಲ. ಕಕ್ಕಿ ಮನೆಯಲ್ಲಿ ಆಕೆ ಬದುಕಿರೋ ತನಕ ಅಂದರೆ ಒಂದೂವರೆ ವರ್ಷ ಇದ್ದೆ. ಆದರೆ ಈ ಬಹರಾಂಪುರದಿಂದ ಅಪ್ಪ ಅಣ್ಣ ಅಮ್ಮ ಯಾರಾದರೂ ಬಂದರೆ, ಆ ಕೆಲವು ದಿನಗಳನ್ನ ನಾನು ನನ್ನ ಸ್ನೇಹಿತರುಗಳ ಮನೆಯಲ್ಲಿದ್ದೇ ಕಳೆಯುತ್ತಿದ್ದೆ. ನನ್ನ ಮೇಲೆ ಕಕ್ಕಿಗೆ ಬಹುಶಃ ಅಪರಿಮಿತ ಪ್ರೇಮವಿತ್ತು. ಯಾವಾಗಲಾದರೂ ರಾತ್ರಿ ಹೊತ್ತಾಗಿ ಮನೆಗೆ ಹಿಂತಿರುಗಿದರೆ ಕಕ್ಕಿ ದೀಪ ಹಾಕಿಕೊಂಡು ನನಗಾಗಿ ಕುಳಿತೇ ಇರುತ್ತಿದ್ದಳು. ನನಗೆನ್ನುತ್ತಿದ್ದಳು, ಈ ವಯಸ್ಸಿನಲ್ಲಿ ಹುಡುಗರು ಶಿಸ್ತುಬದ್ಧವಾಗಿರಬೇಕು. ಆಗ ನೋಡುವಿಯಂತೆ ಹೇಗೆ ಆರೋಗ್ಯ ಸುಧಾರಿಸುತ್ತೆ ಅಂತ.

ಕಕ್ಕಿಯ ಆರೋಗ್ಯ ಅಷ್ಟೇನೂ ಕೆಟ್ಟಿರಲಿಲ್ಲ. ಕೃಶವಾದರೂ ಸದೃಢವಾದ ದೇಹ. ಪ್ರತಿಯೊಂದು ಮಾತಿಗೂ ಸರಿಯಾದ ಸಮಯಕ್ಕೆ ಮುಗ್ಧವಾಗಿ ನಗುವ, ಬೇರಿನ್ಯಾವ ಹೆಂಗಸನ್ನ ನಾನು ಈವರೆಗೂ ಕಂಡಿರಲಿಲ್ಲ. ಕಕ್ಕಿ ನಗುವಾಗ ಆಕೆಯ ಕಣ್ಣು ಹಾಗೂ ಕನ್ನಡಕ ಎರಡೂ ಹೊಳೆಯುತ್ತಿದ್ದವು. ಆದರೂ ಕೇವಲ ಮಕ್ಕಳಿಲ್ಲದ ಅಪರಾಧಕ್ಕಾಗಿ ಆಸ್ಪತ್ರೆ ಸೇರಿ ಅನಾಥರಂತೆ ಸಾಯುವಂತಾಯಿತು.

ಆನಂತರ ಕಕ್ಕನ ಜೊತೆ ನನಗೆ ಹೊಂದಿಬರಲಿಲ್ಲ. ಒಂದು ದಿನ ನಾನು ಕಕ್ಕಿಯ ಮನೆ ಬಿಟ್ಟು, ಮೌಲಾಲಿಯ ಹತ್ತಿರ ಒಂದು ಮೆಸ್‌ಗೆ ಹೋಗಿ ಸೇರಿಕೊಂಡೆ. ಆ ನಂತರವೇ ಕಲಕತ್ತೆಯೊಂದಿಗೆ ನನ್ನ ಪರಿಚಯ ಗಾಢವಾದದ್ದು.

ಕಲಕತ್ತೆಯ ಪ್ರತಿಯೊಂದು ರಸ್ತೆಯನ್ನು ವಿವಿಧ ರೀತಿಯಲ್ಲಿ ಉಚ್ಚಾರಣೆ ಮಾಡಿ ನೋಡಬೇಕೆಂದಿದ್ದೇನೆ. ಈ ಅಪರಿಚಿತ, ಆತ್ಮವಿಸ್ಮೃತ ಪಟ್ಟಣದಲ್ಲಿ ಇಲ್ಲಿನ ಪಾರ್ಕ್ ಸ್ಟ್ರೀಟ್ ಹಾಗೂ ಕಾಲಾಬಾಗಾನದ ವಸತೀ, ಕ್ಯಾನಿಂಗ್ ಸ್ಟ್ರೀಟ್ ಹಾಗೂ ನ್ಯೂ ಆಲೀಪುರ್, ನೆಲಮನೆಯಲ್ಲಿನ ಅಂಗಡಿಗಳಲ್ಲಿ ಹಿಜಡಾಗಳ ಕುಣಿತ, ವೆಲ್ಲಸ್ಲೀ ಸ್ಕ್ವಾರ್‌ನ ಜೊತೆ ಜೊತೆ ಹುಡುಗರು, ಫ್ರೀ ಸ್ಕೂಲ್ ಸ್ಟ್ರೀಟ್, ಚಿತ್‌ಪುರ್, ಬೌ ಬಾಜಾರ್, ಗ್ರೇಸ್ಟ್ರೀಟ್, ಟಾಲಿಗಂಜ್, ಸರಸರನೆ ಬೆಲ್ ಇಳಿಸಿ ಬರುವ ವೇಶ್ಯೆಯರ ಗುಂಪು, ರಾತ್ರಿಯ ವೇಳೆಯಲ್ಲಿ ಟ್ಯೂಬ್‌ವೆಲ್‌ನ ಮಧ್ಯದಿಂದ ಹೊರತೆಗೆಯಲ್ಪಟ್ಟ ಕಳ್ಳಭಟ್ಟಿ ಬಾಟಲಿಗಳು, ಚೀನೀ ವಠಾರದಲ್ಲಿ ಕುಲುಕಲ್ಪಡುವ ಶಂಖದ ಅಖಾಡವನ್ನ ಹುಡುಕೋದು, ಹೌರಾಬ್ರಿಡ್ಜ್‌ನ ಕೆಳಗೆ ಆಡುವ ಜೂಜು- ಇವೆಲ್ಲದರ ಅನುಭವ ಪಡೆದು, ನಾನು ನನ್ನನ್ನೇ ಶಕ್ತ ಹಾಗೂ ಒರಟನನ್ನಾಗಿ ಮಾಡಿಕೊಳ್ಳಲಾರಂಭಿಸಿದೆ. ಇವೆಲ್ಲದರ ಬಗ್ಗೆ ತಿಳಿದಾಗಲೂ, ನನಗೊಂದಿಷ್ಟೂ ಅಸ್ವಸ್ಥತೆ ಎನಿಸಲಿಲ್ಲ. ಒಂದನ್ನ ಪಡೆಯುತ್ತಲೇ, ಬಾಕಿ ಮಿಕ್ಕವು ತಾನೇ ತಾನಾಗಿ ಬಂದು ಬಿಡುತ್ತೆ. ರಾತ್ರಿ ಹನ್ನೆರಡಕ್ಕೆ ಬೀಡದಂಗಡಿಯಲ್ಲಿ ನಿಂತು, ಬಾಂಗ್ಲಾ ಹೆಂಡವನ್ನ ಕುಡಿಯುತ್ತಿರುವಾಗ, ಅಕ್ಕ ಪಕ್ಕದಲ್ಲಿ ಇನ್ನೂ ಮೂರು-ನಾಲ್ಕು ಜನ ಕುಡಿಯುತ್ತಿರುವುದು ಕಾಣಬಹುದು.

ಅವರಲ್ಲಿಯೇ ಯಾರಾದರೊಬ್ಬರು ಮಾತಿನಲ್ಲೇ ಹೇಳಿ ಬಿಡ್ತಾರೆ, ಹಿಜಡಾ ನರ್ತನದ ಅಖಾಡಾದ ಸ್ಥಳದ ವಿಳಾಸವನ್ನು. ಮೊದಲನೇ ಸಲವೇ ಎರಡು ಸಲ ಹಿಡಿಯಲ್ಪಟ್ಟು ಹತ್ತು ರೂಪಾಯಿ ಫೈನ್ ಪೋಲೀಸ್ ಠಾಣೆಯಲ್ಲಿ ಕೊಟ್ಟು ಬಂದಿದ್ದೇನೆ. ಆಮೇಲೆ ಎಲ್ಲ ಸ್ಥಳಗಳು ಚಿರಪರಿಚಿತವಾದ ನಂತರ ಪೋಲೀಸರನ್ನ ಕಂಡೊಡನೆ ಲಂಚ ಕೊಡುವ ಮೊದಲೇ ಹಣವನ್ನ ಚಿಲ್ಲರೆ ಮುರಿಸಿ ಅವರಿಂದಲೇ ಇಸಿದುಕೊಳ್ಳುತ್ತಿದ್ದೆ.

ಈ ಎಲ್ಲ ಸ್ಥಳಗಳಿಗೆ ನಾನೂ ಶೇಖರ ಒಟ್ಟಾಗಿಯೇ ಹೋಗುತ್ತಿದ್ದೆವು. ಆದರೂ ನಮ್ಮಿಬ್ಬರ ಅಭಿಪ್ರಾಯಗಳು ಭಿನ್ನ ರೀತಿಯದಾಗಿದ್ದವು. ಶೇಖರನ ಸ್ವಭಾವದಲ್ಲಿ ಒಂದು ರೀತಿಯ ಅಸ್ಥಿರತೆ ಇದೆ. ಯಾವುದರ ಮೇಲೂ ಅವನು ತುಂಬಾ ದಿನ ತನ್ನ ಮನಸ್ಸನ್ನು ಸ್ಥಿರಗೊಳಿಸಲು ಸಾಧ್ಯವಿಲ್ಲ. ಅದಕ್ಕಾಗಿಯೇ ಏನೋ ಇವತ್ತಿನವರೆವಿಗೂ ಒಬ್ಬ ಹುಡುಗಿಯನ್ನಾದರೂ ಪ್ರೀತಿಸಲು ಸಾಧ್ಯವಾಗಿಲ್ಲ. ಹುಡುಗಿಯರ ಜೊತೆ ಶೇಖರನ ವ್ಯವಹಾರ ಏನೋ ಒಂದು ರೀತಿ ಸ್ನೇಹ ಸವರಿದಂತೆ. ಯಾವುದಾದರೂ ಸಮವಯಸ್ಕ ಹುಡುಗಿ ಅಥವಾ ವೇಶ್ಯೆಯನ್ನು ಶೇಖರ ಚುಂಬಿಸಿದಾಗಲೂ ಅದು ಒಂದು ರೀತಿಯ ಸ್ನೇಹ ಸವರಿದಂತೆಯೇ. ತುಂಬಾ ಹೊತ್ತು ಹೆಣ್ಣು ಮಕ್ಕಳ ಕಣ್ಣುಗಳನ್ನೇ ದಿಟ್ಟಿಸಿ ಹೇಳ್ತಿದ್ದ, ನೀನು ತುಂಬಾ ದುಃಖಿ. ಕಣ್ಣುಗಳ ಕಡೆ ದಿಟ್ಟಿಸಿ ಶೇಖರ ಅದ್ಯಾವ ದುಃಖವನ್ನು ಕಾಣಬಲ್ಲವನಾಗಿದ್ದನೋ, ಯಾರಿಗೆ ಗೊತ್ತು? ಶೇಖರ ಈ ಎಲ್ಲ ಸ್ಥಳಗಳಿಗೆ ಹೊಸತನವನ್ನು ಹುಡುಕಲೆಂದು ಹೋಗುತ್ತಿದ್ದ. ಯಾವುದೇ ಸ್ಥಳಕ್ಕಾದರೂ, ಅವನು ಮೊದಲ ಬಾರಿಗೆ ಹೋದಾಗ ಅತ್ಯಂತ ಸಂತೋಷವನ್ನ ಪಡೆಯುತ್ತಿದ್ದ. ಸ್ವಲ್ಪ ದಿನದಲ್ಲೇ ಪುನಃ ಹೊಸದನ್ನು ಹುಡುಕಲಾರಂಭಿಸುತ್ತಿದ್ದ. ಯಾವ ಉತ್ಸಾಹದಿಂದ ಶೇಖರ ವೈ.ಎಮ್.ಸಿ.ಯಲ್ಲಿ ಟೇಬಲ್ ಟೆನ್ನಿಸ್ ಆಟ ಆಡ್ತಿದ್ದನೋ, ಅಥವಾ ಫ್ಲಡ್ ರಿಲೀಫ್‌ನ ಸ್ವಯಂ ಸೇವಕನಾಗಿ ಅಸ್ಸಾಮಿಗೂ ಹೋಗಿದ್ದನೋ, ಸರಿಯಾಗಿ ಅದೇ ತರಹದ ಉತ್ಸಾಹ ಹಾಗೂ ಗಡಿಬಿಡಿಯಿಂದಲೇ ಚೌಬಾಜಾರಿನ ಕೆಳಗಿನ ಅಖಾಡಾದಲ್ಲಿ, ಕೆಳಗಿನ ಸ್ಮಶಾನದಲ್ಲಿ ಹೋಗಿ, ಭಿಕ್ಷುಕರೊಂದಿಗೂ ಮಲಗಿಕೊಂಡಿರುತ್ತಿದ್ದ.

ನಾನು ನನಗಾಗಿ ಒಂದು ಉಪಾಯವನ್ನ ಸಿದ್ಧಪಡಿಸಿಕೊಂಡಿದ್ದೆ. ಮನೆ-ಮಠ ಬಿಟ್ಟು ಬಂದು ನನಗೆ ಒಂಟಿತನದ ಭಾವನೆ ಬಂದು ಬಿಟ್ಟಿತ್ತು. ಆಗ ಇನ್ನೂ ಮನಸ್ಸಿಗನ್ನಿಸುತ್ತಿತ್ತು. ನಾನು ಕೇವಲ ಮನೆ-ಮಠ ಅಥವಾ ಅಪ್ಪ-ಅಮ್ಮನ್ನ ಬಿಟ್ಟು ಬಂದಿಲ್ಲ. ನಾನು ಇನ್ನೂ ಅನೇಕ ವಸ್ತುಗಳನ್ನು ಬಿಟ್ಟು ಬಂದಿದ್ದೇನೆ. ಯಾವ ಸ್ಥಳದಲ್ಲಿ ನಾನು ಹುಟ್ಟಿದ್ದೆನೋ, ಅದನ್ನೂ ನಾನು ಬಿಟ್ಟು ಬರಬೇಕಾಯಿತು. ನಮ್ಮ ಗ್ರಾಮದ ಹತ್ತಿರವೇ ದೂರದಲ್ಲಿ ಖಾನ್ ನದಿ – ಅನಂತವಾಗಿ ನಾನು ಆ ನದಿಯನ್ನು ಕಳೆದುಕೊಂಡಿದ್ದೇನೆ. ಮನೆಯ ತೀರ ಹತ್ತಿರದಲ್ಲೇ ಇತ್ತು ಮುದಿ ನಿಂಬೇ ಹಣ್ಣಿನ ಮರ – ಅದನ್ನು ಕೂಡಾ ಕಳೆದುಕೊಂಡಿದ್ದೇನೆ. ಈ ಜನ್ಮದಲ್ಲಿ ತೋತಾಪುರಿ ಮಾವಿನ ಮರದ ಕೆಳಗೆ ಇನ್ನೆಂದೂ ಓಡಿ ಹೋಗೋಕಾಗೊಲ್ಲ. ವೈಶಾಖದಲ್ಲಿ ಸ್ಮಶಾನದ ಹತ್ತಿರದ ವಟವೃಕ್ಷದಲ್ಲಿ ಇನ್ನೆಂದೂ ಹಾವಿನ ಬುಸುಗುಟ್ಟುವಿಕೆ ಕೇಳಲಾಗೋದಿಲ್ಲ. ಕಲ್ಯಾಣಿಯ ದಂಡೆಯ ಮೇಲೆ ಕುಳಿತು ನೀರಿನಲ್ಲಿ ಖಲಸೇ ಹಾಗೂ ಬಾಂಗವಾತಾ

ಮೀನುಗಳ ಆಟವನ್ನು ನೋಡೋದು, ಎದೆ ಎತ್ತರಕ್ಕೆ ಬೆಳೆದು ನಿಂತ ಪೈರುಗಳ ಮಧ್ಯೆ ನಾನು ಬಾಲ್ಯದಲ್ಲಿ ಅಡ್ಡಾಡಿದ್ದು – ಅಲ್ಲಿಗೆ ಇನ್ನೆಂದಿಗೂ ಹಿಂತಿರುಗಿ ಹೋಗುವುದಕ್ಕಾಗುವುದಿಲ್ಲ. ಕೇವಲ ಅಮ್ಮ ಅಪ್ಪನನ್ನು ಬಿಟ್ಟು ಬರೋದೊಂದೇ ಅಲ್ಲದೆ ಅನಂತವಾಗಿ ಒಂದು ನದಿ ಅಥವಾ ಒಂದು ಪ್ರಾಂತ್ಯವನ್ನ ಕಳೆದುಕೊಳ್ಳುವ ದುಃಖವೂ ಕೂಡ ಕಡಿಮೆಯದೇನಲ್ಲ. ಬಹರಾಂಪುರದಲ್ಲಿದ್ದಾಗ ಮನಸ್ಸಿಗನಿಸುತ್ತಿರಲಿಲ್ಲ. ಆದರೆ ಕಲಕತ್ತೆಗೆ ಬಂದ ಮೇಲೆ ನನಗೆ ಪ್ರಬಲವಾಗಿ ಜನ್ಮಭೂಮಿ ಹಾಗೂ ಹಳ್ಳಿಯ ವಿಷಯಗಳು, ಖರ್ಜೂರದ ರಸದ ಗಂಧ ಹಾಗೂ ನೀರಿನ ಝುಳ ಝುಳ ಶಬ್ದ ಇವು ನೆನಪಾಗುತ್ತಿದ್ದವು. ಇವನ್ನೆಲ್ಲ ಕಳೆದುಕೊಂಡದ್ದಕ್ಕಾಗಿಯೋ ಏನೋ ನಾನು ಒಮ್ಮೆಗೇ ಒಂಟಿಯಾಗಿ ಬಿಟ್ಟಿದ್ದೆ. ತುಂಬಾ ವಸ್ತುಗಳನ್ನು ಮನುಷ್ಯ ಕಳೆದುಕೊಳ್ಳುತ್ತ, ಮನುಷ್ಯ ಒಂದು ಹಂತಕ್ಕೆ ಬಂದು ಮುಟ್ಟುತ್ತಾನೆ. ಆಗ ಅವನಿಗೆ ಕಳೆದುಕೊಳ್ಳುವುದು ಏನೊಂದು ಪ್ರಭಾವವನ್ನೂ ಬೀರುವುದಿಲ್ಲ. ನಾನು ತೀರ್ಮಾನಿಸಿಕೊಂಡು ಬಿಟ್ಟಿದ್ದೆ. ನಾನು ಎಲ್ಲವನ್ನು ಕಳೆದುಕೊಂಡು ಬಿಡುತ್ತೇನೆ. ಧರ್ಮ – ಅಧರ್ಮ, ನ್ಯಾಯ – ಅನ್ಯಾಯ, ಪಾಪ- ಪುಣ್ಯ, ನಂಬಿಕೆ – ಅಪನಂಬಿಕೆ. ಹೊಸ ಸ್ಥಳದಲ್ಲಿ ಒಂಟಿಯಾಗಿ ಬದುಕಬೇಕಾಗುತ್ತದೆ. ಆಗ ಸ್ವಂತ ಇಷ್ಟ-ಕಷ್ಟಗಳಿಗನುಸಾರ ಬದುಕಲು ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳಲೇಬೇಕು. ಮೊದಲಿನಿಂದಲೂ ಪ್ರಾರಂಭಿಸಿ ನಿಧಾನವಾಗಿ ಕ್ರಮೇಣ ತನ್ನನ್ನೇ ಒಬ್ಬ ವ್ಯಕ್ತಿಯನ್ನಾಗಿ ಸಾಬೀತುಪಡಿಸಬೇಕಾಗುತ್ತದೆ. ಇದನ್ನೇ ನಾನು ಯೋಚಿಸೋದು, ಇನ್ನೇನಿಲ್ಲ.

ಇನ್ನು ಒಂದು ಒಳ್ಳೆಯ ಉಪಾಯವಿತ್ತು. ಈ ಊರಿಗೆ ನಾನು ಆಗಂತುಕ. ಆದರೂ ಯಾರೂ ನನ್ನನ್ನ ಹಳ್ಳಿಯ ಹುಡುಗನೆಂದು ಗುರುತಿಸೋದಿಲ್ಲ. ನಾನು ತೀರಾ ಪೆದ್ದನಂತೆ ಇದ್ದರೆ, ಈ ಶಹರಿನ ಜನ ನನ್ನನ್ನು ಹುರಿದು ಮುಕ್ಕಿ ಹಾಕಿಬಿಡ್ತಾರೆ ಅನ್ನೋದನ್ನು ನಾನು ನೆನಪಿನಲ್ಲಿಟ್ಟುಕೊಳ್ಳೋದು ಅಗತ್ಯ. ಯಾವ ದಿಕ್ಕಿನಿಂದ ಆಕ್ರಮಣವಿರುತ್ತೆ ಅನ್ನೋದು ಗೊತ್ತಿಲ್ಲ. ಅದಕ್ಕೆ ನಾನು ಕಣ ಕಣವಾಗಿ ಈ ಊರನ್ನ ಜಾಲಾಡಿ ಬಿಟ್ಟಿದ್ದೇನೆ. ಆ ಸಮಯದಲ್ಲಿ ನಾನು ನ್ಯೂ ಅಲಿಪುರ್‌ನ ಒಂದು ಮನೆಯಲ್ಲಿ ಟ್ಯೂಷನ್ ಹೇಳಿಕೊಡುತ್ತಿದ್ದೆ. ಅದು ಭಾರಿ ಶ್ರೀಮಂತರ ಮನೆ. ಇಂಜಿನೀಯರಿಂಗ್ ಬಿಡಿ ಭಾಗಗಳ ದೊಡ್ಡ ವ್ಯಾಪಾರ ಅವರದು. ಮಕ್ಕಳಿಗೆ ಪಾಠ ಹೇಳಿಕೊಡುವ ನೆವದಲ್ಲಿ ನಾನು ಕದ್ದು ಮುಚ್ಚಿ ಆ ಮನೆಗೆ ಬಂದು ಹೋಗುವ ಪ್ರತಿಯೊಬ್ಬರನ್ನೂ ಗಮನಿಸುತ್ತಿದ್ದೆ. ವಿದ್ಯಾರ್ಥಿಯ ತರುಣಿ ಅಕ್ಕನ ಒನಪಿನ ನಡಿಗೆ, ಜೊತೆಗೆ ಅಲ್‌ಸೇಷಿಯನ್ ನಾಯಿಯನ್ನು ಕರೆದುಕೊಂಡು ಹೊರಟಾಗ ಅವಳ ವಯ್ಯಾರ, ಮನೆಯ ಒಡೆಯ ಅಧಿಕಾರಯುತವಾಗಿ ನನ್ನ ಜೊತೆ ಹಾಗೂ ಮನೆಯ ಕೆಲಸದಾಳುಗಳ ಜೊತೆ ಯಾವ ದನಿಯಲ್ಲಿ ಮಾತುಕತೆ ಆಡ್ತಾನೇ ಅನ್ನೋದು, ಅದೇ ಆತ ಹೆಂಡತಿಯೊಡನೆ ಮಾತನಾಡುವಾಗ ಅವನ ದನಿ ಯಾವ ರೀತಿ ಬದಲಾಗಿಬಿಡುತ್ತೆ ಅನ್ನೋದು, ಟೆಲಿಫೋನಿನ ಗಂಟೆ ಬಾರಿಸಿದಾಗ ನಾಯಿ ಬೆಕ್ಕಿನ ತರಹ ಚಂಗನೆ ಓಡಿ ಹೋಗಿ ಅವನು ಯಾವ ರೀತಿ ಫೋನ್ ಎತ್ತಿಕೊಂಡು

ಮಾತಾಡ್ತಾನೆ, ಇವೆಲ್ಲವನ್ನು ನಾನು ಗಮನಿಸಿದ್ದೆ. ನ್ಯೂ ಆಲಿಪುರದಿಂದ ನೇರವಾಗಿ ನಡೆದು ಬಂದರೆ ಅಲ್ಲೇ ಹತ್ತಿರದಲ್ಲೇ ದೇಶೀ ಮದ್ಯದಂಗಡಿ. ಅಲ್ಲಿ ಆಂಗ್ಲೋ ಇಂಡಿಯನ್ ಜೊತೆ, ಗಾಡಿ ಎಳೆಯುವವನ ಜೊತೆ, ಮಧ್ಯ ವಯಸ್ಸಿನ ಕವಿ ಹಾಗೂ ಜೇಬುಗಳ್ಳರ ಜೊತೆ ನಾ ಸಮಾನನಾಗಿ ಕುಳಿತಿದ್ದೇನೆ. ಖಂಡಿತವಾಗಿ ದೊಡ್ಡವರೆಲ್ಲರೂ ಅಪ್ರಯೋಜಕರು ಹಾಗೂ ಬಡವ ಕೂಲಿ ಕಾರ್ಮಿಕರುಗಳು ತುಂಬಾ ಒಳ್ಳೆಯವರು. ಈ ತರಹ ತಪ್ಪು ಕಲ್ಪನೆ ನನಗೆ ಚಿಕ್ಕಂದಿನಲ್ಲೂ ಉಂಟಾಗಿರಲಿಲ್ಲ. ಪ್ರತಿಯೊಬ್ಬನೂ ಪ್ರತ್ಯೇಕ. ಅದಕ್ಕಾಗಿಯೇ ವಿವಿಧ ರೀತಿಯ ಪ್ರತ್ಯೇಕ ಮನುಷ್ಯರನ್ನು ನೋಡಲೆಂದೇ ನಾನು ಮತ್ತನಾಗಿ ಕುಳಿತಿರುತ್ತಿದ್ದೆ. ಮನುಷ್ಯರ ಬಗ್ಗೆ ಬ್ರಜೇಶ್ವರದಾ ಒಂದು ಮಾತು ಹೇಳಿದ್ದರು. ಬ್ರಜೇಶ್ವರದಾ ಮೆಸ್‌ನಲ್ಲಿ ನನ್ನ ಜೊತೆ ಒಂದೇ ಕೋಣೆಯಲ್ಲೇ ಇರುತ್ತಿದ್ದರು. ಉದ್ದನೆಯ ಮಧ್ಯ ವಯಸ್ಸಿನ ಗಂಡಸು. ಮೆಸ್ಸಿನ ಇತರರು ಅವರನ್ನು ಒಬ್ಬ ಪಕ್ಕಾ ಗೂಂಡಾ ಎಂದೇ ಬಲ್ಲರು. ಆದರೆ ಬ್ರಜೇಶ್ವರದಾ ವಾಸ್ತವವಾಗಿ ಒಬ್ಬ ದಾರ್ಶನಿಕ. ನಾನು ದೈವವಶಾತ್ ಅವರೊಡನೆ ಒಂದೇ ಕೋಣೆಯಲ್ಲಿರುವ ಸೌಭಾಗ್ಯವನ್ನು ಪಡೆದುಕೊಂಡಿದ್ದೆ. ಮಾರ್ಟಿನ್ ಬಾರ್ನ್ ಆಫೀಸಿನಲ್ಲಿ ಕಾರಕೂನಿಕೆ ಕೆಲಸ ಮಾಡ್ತಾರೆ. ಆದರೂ ಬ್ರಜೇಶ್ವರದಾನ ತಲೆ ಬರೀ ಜಮೀನ್ದಾರಿಗಳ ತಲೇನೆ. ಅವರಿಗೆ ಎರಡು ಹವ್ಯಾಸಗಳಿದ್ದವು. ಹಿಂದಿನ ಕಾಲದ ಪುಸ್ತಕಗಳನ್ನು ಓದುವುದು ಮತ್ತು ಸಂಜೆ ಹೊತ್ತಿನಲ್ಲಿ ಕೊಳಗೇರಿಯಲ್ಲಿ ಹೋಗಿ ಗುಂಡು ಹಾಕೋದು. ಬೆಳ್ಳಗಿನ ಮುಖ, ಒತ್ತಾದ ಕಪ್ಪು ಗುಂಗುರು ಕೂದಲುಗಳು. ಬ್ರಜೇಶ್ವರದಾ ಜುಬ್ಬ ತೊಟ್ಟು ನಸುನಗುತ್ತ ಸಂಜೆ ಹೊರಬೀಳುತ್ತಿದ್ದರು. ನನಗೆ ಹೇಳಿದ್ದರು, ಮನುಷ್ಯ ಯಾವ ತರಹ ಗೊತ್ತಾ? ನ್ಯಾಯಶಾಸ್ತ್ರದಲ್ಲಿ ಒಂದು ಮಾತಿದೆ, ತೃಣಾರಣಿ ಮಣಿ ನ್ಯಾಯ, ತೃಣ, ಅರಣಿ ಹಾಗೂ ಮಣಿ ಇವು ಮೂರೂ ಒಂದು ವಿಷಯದಲ್ಲಿ ಸಮಾನರು – ಇವು ಮೂರನ್ನು ಬೆಂಕಿ ಸುಟ್ಟು ಬಿಡುತ್ತೆ. ಆದರೆ ಅವೆಲ್ಲ ಒಂದೆಯೇ? ಅವು ಸಂಪೂರ್ಣವಾಗಿ ಬೇರೆಯವೇ ಆದುವು. ಮನುಷ್ಯನೂ ಕೂಡಾ ಅದೇ ರೀತಿ. ಎಲ್ಲರೂ ಮನುಷ್ಯರೇ, ಎಲ್ಲರಲ್ಲೂ ಅದೇ ವಾಸನೆ ಅದೇ ಅವರಲ್ಲಿನ ಸಮಾನತೆ. ವಾಸ್ತವವಾಗಿ ಎಲ್ಲರೂ ಬೇರೆ ಬೇರೆ. ಕೆಲವರು ಮನೆ ಹಾಳರು, ಕೆಲವರು ಹೆದರುಪುಕ್ಕರು. ಕೆಲವರು ದೇವತೆಗಳ ಸಂತಾನ. ಈವರೆಗೆ ದೇವತೆಗಳ ಸಂತಾನವನ್ನು ಒಂದೂ ಕಂಡಿಲ್ಲ. ಸಾಯೋ ಮೊದಲು ಸಾಧ್ಯವಾದರೆ ಒಬ್ಬರನ್ನಾದ್ರೂ ನೋಡಿ ಹೋಗಬೇಕು ಅಂತ ಆಸೆ.

ಬ್ರಜೇಶ್ವರದಾ ಒಮ್ಮೊಮ್ಮೆ ನನ್ನನ್ನು ಸಂಜೆಯ ಹೊತ್ತು ಅನೇಕ ವಿಚಿತ್ರ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಿದ್ದರು. ಒಂದು ದಿನ ಅವರ ಜೊತೆ ತೆಲಂಗಾಬಾಗಿಗೆ ಹೋಗಿ ಸೋಡಾ ಬಾಟಲಿಯ ಹೊಡೆದಾಟ ಬಡಿದಾಟದಲ್ಲಿ ಸಿಕ್ಕಿಹಾಕಿಕೊಂಡು, ಸ್ವಲ್ಪ ಹೆಚ್ಚು ಕಡಿಮೆಯಾಗಿದ್ದಿದ್ದರೆ ಪ್ರಾಣವನ್ನೆ ಕಳೆದುಕೊಳ್ಳಬೇಕಾಗುತ್ತಿತ್ತು. ಆದರೆ ಬ್ರಜೇಶ್ವರದಾ ಮಾತ್ರ ನಗುತ್ತಲೇ ಹೇಳಿದ್ದರು, ಇವೆಲ್ಲ ಏನು ಗೊತ್ತಾ? ಇವು ತಂತ್ರ ಸಾಧನೆಗಳು. ಆತ್ಮವನ್ನ ಶುದ್ಧ ಮಾಡಿಕೊಳ್ಳಲು ವೀರಾಚಾರ, ವಿಶ್ವಾಚಾರ ಎಲ್ಲವನ್ನು ಮಾಡಿನೋಡಬೇಕಾಗುತ್ತೆ. ಸುರೆಯನ್ನು ನೋಡುತ್ತಲೇ ಸೂರ್ಯ ದರ್ಶನ

ಮಾಡಬೇಕು. ಅದನ್ನೇ ಸಾಧನಾ ಅನ್ನೋದು. ಅದೇ ರೀತಿ ರಾತ್ರಿಯ ದರುಶನಕ್ಕಾಗಿ ಶರೀರದೊಳಗೆ ಸುರೆಯನ್ನು ಸುರಿದುಕೊಳ್ಳಬೇಕಾಗುತ್ತದೆ. ಎಂದು ಎದೆಯೊಳಗೆ ಮತ್ತೇರಿದ ಭ್ರಮರದ ನಿಶ್ವಾಸ ಕೇಳಿರುತ್ತದೆಯೋ, ಅಂದೇ ನಿನಗರ್ಥವಾಗುತ್ತೆ, ನಿನ್ನ ಜೀವನ ಸಾರ್ಥಕವಾಯ್ತು ಅಂತ. ಇವೆಲ್ಲ ನಿನಗೆ ಗೊತ್ತಿತ್ತಾ? ನೀನಂತೂ ಓದಿರೋದು ಕೇವಲ ಇಂಗ್ಲಿಷ್. ಆ್ಯಲ್‌ಕೆಮಿ ಗೊತ್ತಿದೆಯೇ ? ಯಾವ ರೀತಿ ಕುದಿಸಿ ಕುದಿಸಿ ಚಿನ್ನವನ್ನ ತಯಾರಿಸ್ತಾರೆ ಅನ್ನೋದು.

ನಾನೆಂದಿದ್ದೆ, ಬೃಜೇಶ್ವರದಾ ನೀವಾದರೂ ಸ್ವತಃ ಇವನ್ನೆಲ್ಲ ಮಾಡಿದ್ದೀರ ? ನಿಮಗೆ ಯಾವ ಸಿದ್ಧಿ ಲಭ್ಯವಾಗಿದೆ. ನೀವು ಹೇಗೆ ಶುದ್ಧ ಮನುಷ್ಯರಾದಿರಿ ?

ನಿಡಿದಾದ ಶ್ವಾಸವನ್ನು ಬಿಟ್ಟು ಬೃಜೇಶ್ವರದಾ ಉತ್ತರಿಸಿದರು, ಇಲ್ಲ. ನನ್ನಲ್ಲಿ ವಸ್ತುವಿರಲಿಲ್ಲ. ಇದು ಮೊದಲು ನನಗೆ ಅರ್ಥವಾಗಿರಲಿಲ್ಲ. ಕನ್ನಡಿಯ ಮೇಲೆ ಉಫ್ ಎಂದು ಉಸಿರುಬಿಟ್ಟಾಗ ಒಂದು ಸೂಕ್ಷ್ಮ ಪರದೆ ಉಂಟಾಗುತ್ತದೆ, ಅದೇ ನೀರಿನ ಮೇಲೆ ಉಫ್ ಎಂದಾಗ ಪರದೆ ಸರಿಯುತ್ತದೆ. ಮೊದಲಿಗೇ ಕನ್ನಡಿಯೋ, ನೀರೋ ಎನ್ನುವುದು ತಿಳಿಯುವುದು. ಜೀವನದಲ್ಲಿ ಅನೇಕ ಅನುಭವಗಳನ್ನು ಹೊಂದಿದ ಮೇಲೆಯೇ ಗೊತ್ತಾಗೋದು. ತಪ್ಪಾದರೂ ಚಿಂತೆಯಿಲ್ಲ, ಆದರೂ ನಾನು ಪ್ರಯತ್ನಪಟ್ಟಿದ್ದೆ.

ಕ್ರಮೇಣ ನಾನು ಈ ಎಲ್ಲ ಉಪಾಯಗಳ ತಪ್ಪನ್ನು ಕಂಡುಕೊಂಡೆ. ಇವೆಲ್ಲ ಕೇವಲ ಕಣ್ಣಿಗೆ ಮಣ್ಣೆರಚುವ ಉಪಾಯಗಳು. ನನ್ನನ್ನು ನಾನೇ ಸಿದ್ಧಪಡಿಸಿಕೊಂಡಿದ್ದೇನೆಂದು ಭಾವಿಸಿ ಕೀಳು ಸಾಮಾಜಿಕ ಪ್ರಪಂಚದಲ್ಲಿ ವ್ಯವಹರಿಸಿದ ನಂತರವೇ ನನಗೆ ತಿಳಿದುಬಂದದ್ದು, ನನ್ನ ಉಪಾಯಗಳೆಲ್ಲವು ನಿಜವಾಗಿಯೂ ಬರೀ ಮೋಸ ಹಾಗೂ ಕಪಟ ಎಂದು. ಅವೆಲ್ಲ ಅಕ್ರಮ, ಅನ್ಯಾಯಗಳ ಕೆಲಸಗಳಲ್ಲಿ ಸಿಕ್ಕಿ ಬೀಳುವ ಒಂದು ರೀತಿಯ ನಶೆ. ಆ ನಶೆಗೊಳಗಾಗಿಯೇ ನಾನು ಪರದಾಡುತ್ತಿದ್ದುದು. ಅವರವರ ಅಹಂಕಾರದ ತೃಪ್ತಿ ಅದು. ತುಂಬಾ ಆಗರ್ಭ ಶ್ರೀಮಂತರ ಸೊಫೆಸ್ಟಿಕೇಟಡ್ ಕುಟುಂಬದಲ್ಲಿ ಹೋಗಿ ಕುಳಿತಾಗ ಯಾವ ರೀತಿ ಮುಜುಗರ ಮನಸ್ಸಿಗುಂಟಾಗುತ್ತೋ ಅದೇ ರೀತಿ. ಮನಸ್ಸಿಗನಿಸುತ್ತೆ ಕಾಲಿನ ಚಪ್ಪಲಿಗೆ ಮೆತ್ತಿರೋ ಕೆಸರನ್ನ ಅವರು ಗಮನಿಸದಿರಲಿ, ಕೈಯಲ್ಲಿನ ಚಹದ ಕಪ್‌ನಿಂದ ಒಂದು ವೇಳೆ ಸ್ವಲ್ಪ ಚಹ ತುಳುಕಿ, ಬೆಲೆ ಬಾಳುವ ಕಾರ್ಪೆಟ್‌ನ ಮೇಲೆ ಬಿದ್ದರೆ, ಒಂದು ರೀತಿಯ ಕಸಿವಿಸಿ ಉಂಟಾಗುತ್ತದೆ. ಪ್ಯಾಂಟಿನ ಮುಖ್ಯ ಸ್ಥಳದಲ್ಲಿ ಗುಂಡಿ ಕಿತ್ತು ಬಂದರೆ, ಸತ್ತೇ ಹೋಗಿ ಬಿಡಬೇಕೆಂದು ಮನಸ್ಸಿಗನಿಸುತ್ತದೆ. ಆದರೆ ಅದೇ ಹೆಂಡದಂಗಡಿಯಲ್ಲಿ ಜೂಜು ಕಟ್ಟೆಗಳಲ್ಲಿ, ತೃಪ್ತಿ ಅಥವಾ ವೀಣಾರ ಮನೆಯಲ್ಲಿ, ಮಲ್ಲಿಕಾ ಬಾಜಾರಿನಲ್ಲಿ, ಹೌರಾ ಬ್ರಿಡ್ಜ್‌ನ ಕೆಳಗೆ, ಇನ್ನೆಲ್ಲೂ ಯಾವ ರೀತಿಯ ಕೃತ್ರಿಮತೆ ಹಾಗೂ ಅಪಾಥಭೂತಿತನವಿಲ್ಲ. ಅನಾಯಾಸವಾಗಿಯೇ ಕಾಲೆತ್ತಿಕೊಂಡು ಮೇಜಿನ ಮೇಲೆ ಕುಳಿತುಕೊಳ್ಳಬಹುದು, ತುಂಬಾ ಶೆಖೆ ಎನಿಸಿದರೆ ಅಂಗಿ ಕಳಚಿ ಹಾಕಿಬಿಡಬಹುದು. ಯಾವುದೇ ಸಮಯದಲ್ಲಿ ಜೋರಾಗಿ ಮಾತನಾಡಬಾರದು, ಮೆಲ್ಲಗೆ ಯಾವಾಗ ನಗಬೇಕು, ಅದನ್ನು ಕುರಿತು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಮನುಷ್ಯನಾಗಿ

ಸ್ವಾಭಾವಿಕವಾಗಿ ಉಳಿಯಲು ಸಾಧ್ಯವಾಗುವುದು ಈ ಸ್ಥಳಗಳಲ್ಲಿ ಮಾತ್ರ ಯಾಕೆ? ಇದರಲ್ಲೇನಾದರೂ ಅಡಚಣೆ ಇದೆಯೋ? ಮನೆಯೊಳಗೆ ಬೇಕಾದರೆ ಸ್ವಾಭಾವಿಕವಾಗಿರಬಹುದು.

ಸತ್ಯವಾಗಿಯೂ, ಅಹಂಕಾರವನ್ನು ಪರಿತ್ಯಾಗ ಮಾಡೋದು ಬಹಳ ಕಷ್ಟದ ಕೆಲಸ. ನೀಮ್‌ತಲಾದಲ್ಲಿ ಗಂಗೆಯ ದಡದಲ್ಲಿ ಸಂಜೆಯ ವೇಳೆಯಲ್ಲಿ ಐದು ಜನ ಚಳಿಯಲ್ಲಿ ಮುದುಡಿಕೊಂಡು ಚಿಲುಮೆಯಿಂದ ಗಾಂಜಾ ಸೇದುತ್ತಾ ಕುಳಿತಿದ್ದರು, ವೃತ್ತಾಕಾರ ಕುಳಿತು. ಮಧ್ಯದಲ್ಲಿ ಬಟ್ಟೆಯಲ್ಲಿ ಸುತ್ತಿದ ಕರ್ಪೂರದ ಬೆಂಕಿ ಹತ್ತಿ ಉರಿಯುತ್ತಲಿದೆ. ಹತ್ತಿರದಲ್ಲೇ ಕೆಲವೊಂದು ಬತ್ತಾಸುಗಳು. ಕೆಂಪು ಬಟ್ಟೆಯಲ್ಲಿ ಸುತ್ತಿದ್ದ ಚಿಲುಮೆ ಕೈಯಿಂದ ಕೈಗೆ ಸುತ್ತುತ್ತಲಿದೆ. ಹಿಂದೆ ಗಂಗೆಯ ಕಪ್ಪು ತೆರೆಗಳು. ನಾನು, ಅವಿನಾಶ ಹಾಗೂ ಶೇಖರ ಅಡ್ಡಾಡಿ, ಸುಸ್ತಾಗಿ ಅವರ ಹತ್ತಿರವೇ ದೊಪ್ಪನೆ ಕುಳಿತುಕೊಂಡೆವು. ನಾನು ಒಬ್ಬನ ಭುಜದ ಮೇಲೆ ಕೈಯಿಟ್ಟು ಹೇಳಿದೆ, ಏನಣ್ಣ ಒಂದು ದಂ ಸೇದೋಕೆ ಕೊಡ್ತೀಯಾ ತಾನೇ. ಆತ ನನ್ನನ್ನೇ ದುರುಗುಟ್ಟಿ ನೋಡಿ, ಎದ್ದು ಬಂದು ಚಿಲುಮೆಯನ್ನು ಕೈಗೆ ಕೊಟ್ಟ. ನಾನು ಜೋರಾಗಿ ಒಂದು ದಂ ಎಳೆದು ಅದನ್ನು ಅವಿನಾಶನಿಗೆ ಕೊಟ್ಟೆ. ಅವಿನಾಶ ಬಹಳ ಎಚ್ಚರಿಕೆಯಿಂದ ಕೆಂಪು ಬಟ್ಟೆಯನ್ನು ಸುತ್ತಿ, ನಿಧಾನವಾಗಿ ಸೇದಲಾರಂಭಿಸಿದ. ಅವರೆಲ್ಲರೂ ನಮ್ಮನ್ನ ಆಶ್ಚರ್ಯದಿಂದ ನೋಡಲಾರಂಭಿಸಿದರು. ಒಬ್ಬಾತನೆಂದ, ಹೀ ಬಾಬೂಗಳು ಬಹಳ ಮಜವಾಗಿ ಹೀ ಹೀ.... ಅವಿನಾಶನೆಂದ, ಮುಗಿಯಿತು. ಮತ್ತೆ ಇದೆಯಾ? ಒಬ್ಬಾತನೆಂದ, ಮತ್ತೆ ಬೇಕಾ? ಸ್ವಲ್ಪ ತಡೀರಿ. ಅವಿನಾಶನೆಂದ, ದುಡ್ಡು ತೊಗೊಂಡು ಹೋಗಿ. ಒಂದೆಂಟಾಣೆ ಹೊರ ತೆಗೆಯುತ್ತಿರುವಂತೆಯೇ ಆತ ಒಂದೇ ಓಟಕ್ಕೆ ಓಡಿದ್ದ. ಎದುರು ಕುಳಿತಿದ್ದವ, ಬಿಟ್ಟಗಣ್ಣಿನಿಂದ ದಿಟ್ಟಿಸಿ, ಒಮ್ಮೆ ಮಣ್ಣಿನಲ್ಲಿ ಉಗುಳಿ ಹೇಳಿದ, ಹೀ, ಬಾಬುಗಳು ಬಹಳ ಮಜವಾಗಿ ಹೀ. ಹೀ. ಅವರೆಲ್ಲ ಶ್ರಮಪಟ್ಟು ತಾವು ಸ್ವತಃ ಕುಡಿಯದೆ ನಮಗಾಗಿ ತುಂಬಿಸಿ ಕೊಡಲಾರಂಭಿಸಿದರು. ನಾವು ನೆಲದ ಮೇಲೆ ಅವರ ಜೊತೆ ಕುಳಿತು ಅವರ ಗುಂಪಿನಲ್ಲಿ ಒಂದಾಗಿ ಸೇರಿ ಬಿಟ್ಟೆವು. ಆದರೆ ಅದು ಸಾಧಾರಣ ಜನರ ಜೊತೆ ಸಹಜವಾಗಿ ಸೇರಿ ಹೋಗುವಂಥದ್ದಲ್ಲ. ಇದರಲ್ಲೂ ಕಪಟತನವಿದೆ. ಅಪ್ಪ ಅಮ್ಮಂದಿರ ಸೌಭಾಗ್ಯದಿಂದ ನಮ್ಮ ಮೂರು ಜನರ ಮುಖ ಬಹಳ ಮರ್ಯಾದಸ್ಥರ ತರಹ, ತಿಳಿಮೈಬಣ್ಣ ಹೊಂದಿದೆ. ಎಣ್ಣೆ ಹಚ್ಚಿದ ಮಿರಿ ಮಿರಿ ಕೂದಲು ಬೇರೆ. ಮೂರು ಜನರೂ ಒಳ್ಳೆ ಬೆಲೆ ಬಾಳುವ ಬಟ್ಟೆಬರೆ ತೊಟ್ಟಿದ್ದೇವೆ. ಅವಿನಾಶನಂತೂ ಟೆರಿಲೀನ್ ಬಟ್ಟೆ ತೊಟ್ಟಿದ್ದಾನೆ. ನಾವು ಮೂರು ಜನರು ಯಾರನ್ನ ಮರ್ಯಾದಸ್ಥರು ಅನ್ನುತ್ತಾರೋ ಆ ರೀತಿ ಇದ್ದೆವು. ಅರ್ಥಾತ್ ಯಾರು ತಾನೇ ಈ ರೀತಿಯ ಜನರೊಡನೆ, ಅವರ ಪ್ರತಿನಿಧಿಗಳೇ ಆಗಿ ಅವರ ಜೊತೆ ಹೆಗಲ ಮೇಲೆ ಕೈ ಹಾಕಿಕೊಂಡು ನೆಲದ ಮೇಲೆ ಕುಳಿತು ಒಂದೇ ಚಿಲುಮೆಯಿಂದ ಗಾಂಜಾ ಸೇದುತ್ತಾರೆ – ಇದಕ್ಕಾಗಿ ಅವರು ಒಂದೇ ಸಲಕ್ಕೆ ಬಹಳ ಕೃತಜ್ಞತಾ ಭಾವ ಪ್ರಕಟಿಸಿದ್ದರು. ನಾವುಗಳೂ ಕೂಡಾ ಅವರ ಈ ಭಾವನೆಯನ್ನು ಭೋಗಿಸಿ, ನೆಮ್ಮದಿಯಿಂದಿದ್ದೆವು. ಕೇವಲ ಅಷ್ಟೇ ಅಲ್ಲ, ಗಂಗೆಯ ದಡಕ್ಕೆ ಬಂದು ನಮಗೆ ಸ್ವಲ್ಪ

ಗಾಂಜಾ ಸೇವಿಸುವ ಆಸೆಯಾಗಿತ್ತು. ಆದರೆ ಯಾರು ಇನ್ನು ಅಂಗಡಿಗೆ ಹೋಗಿ ಕೊಂಡು ತರುವವರು ಅಥವಾ ಚಿಲುಮೆ ಸಜ್ಜುಗೊಳಿಸುವ ತೊಂದರೆ ತೆಗೆದುಕೊಳ್ಳುವವರು ? ಆದರಿಂದಾಗಿ ಹೀಗೆ ಅಷ್ಟು ಸುಲಭವಾಗಿ ಆ ಕೆಲಸವನ್ನು ಮಾಡಿಸಿಕೊಂಡಿದ್ದೆವು.

ಇದೇ ತರಹ ಇನ್ನೂ ಅನೇಕ ಸಲ ಮಾಡಿದ್ದೇವೆ. ರಾತ್ರಿ ಹನ್ನೊಂದೂವರೆ ಸಮಯ ಸೆಂಟ್ರಲ್ ಅವೆನ್ಯೂ ಬಳಿ ಬಂದು ನಿಂತಿದ್ದೇನೆ. ರಸ್ತೆ ನಿರ್ಜನವಾಗಿತ್ತು. ಒಂದೂ ಟ್ಯಾಕ್ಸಿ ಇಲ್ಲ. ಒಬ್ಬ ರಿಕ್ಷಾವಾಲಾ ಮಾತ್ರ ಸುಮ್ಮನೆ ನಿಂತುಕೊಂಡಿದ್ದಾನೆ. ಖಂಡಿತವಾಗಿಯೂ ಅವನು ಅಷ್ಟು ದೂರ ನಮ್ಮ ಮನೆತನಕ ಬರಲು ಒಪ್ಪುವುದಿಲ್ಲ. ನಾನು ಹತ್ತಿರ ಹೋಗಿ ಹೇಳಿದೆ, ಬೀಡಿ ಇದೆಯಾ ? ಬೀಡಿ ಇದ್ರೆ ಕೊಡಪ್ಪಾ. ಯಾಕೋ ಸಿಗರೇಟ್ ಸೇದೋಕೆ ಇಷ್ಟವಾಗ್ತಾ ಇಲ್ಲ. ನಿನಗೆ ಬೇಕಿದ್ರೆ ನನ್ನ ಸಿಗರೇಟ್ ತೊಗೊ. ಆತ ಚಕಿತನಾಗಿ ಹರಿದ ಜೇಬಿನಿಂದ ಟಿನ್ನಿನ ಡಬ್ಬಿ ಹೊರತೆಗೆದು, ಒಂದು ಬೀಡಿ ಕೊಟ್ಟ. ನಾನೇ ಬೆಂಕಿಕಡ್ಡಿ ಮೊದಲು ಗೀರಿ ಅವನಿಗೂ ಹತ್ತಿಸಿ ಕೊಟ್ಟೆ. ಆನಂತರ ನನ್ನದನ್ನು ಹತ್ತಿಸಿಕೊಂಡೆ. ಅವನ ಹೆಗಲನ್ನ ಮುಟ್ಟಿ ಹೇಳಿದೆ, ತುಂಬಾ ಚಳಿಯಾಗ್ತಾ ಇದೆ ಅಲ್ವಾ ? ಆತ ಆನಂತರ ತಾನೇ ಪ್ರಶ್ನಿಸಿದ, ಬಾಬು ನೀವು ಎಲ್ಲಿಗೆ ಹೋಗಬೇಕು ? ಆಮೇಲೆ ಸಂತೋಷದಿಂದ ಕೇವಲ ಎಂಟಾಣೆಗೇ ನನ್ನನ್ನ ಮನೆ ತಲುಪಿಸಿದ್ದ. ನಾನು ಹಾಕಿಕೊಂಡಿದ್ದು ಸ್ವೆಟರ್ ಹಾಗೂ ಬೆಲೆಬಾಳುವ ಪ್ಯಾಂಟ್ ಶರ್ಟು. ಹೀಗಿದ್ದೂ ನನಗೆ ಅವನ ಬೀಡಿ ಬೇಕಿತ್ತು. ಹಾಗೂ ಭಯ್ಯ ಎಂಬ ಸಂಬೋಧನೆ ಬೇರೆ. ಇದಾದ ಮೇಲೆ ನನ್ನನ್ನು ಮನೆ ತಲುಪಿಸದೇ ಅವನಿಗೆ ಬೇರೆ ಉಪಾಯವೇ ಇರಲಿಲ್ಲ. ನನ್ನ ಈ ರೀತಿಯ ವ್ಯವಹಾರಕ್ಕೆ ಆಂತರಿಕ ಅಂತ ಕರಿತಾರೋ ಅಥವಾ ಬ್ಲಾಕ್ ಮಾರ್ಕೆಟೀಯರ್ ತರಹ ಇದೂ ಒಂದು ಬೇರೆ ರೀತಿಯ ಜಾಲವೋ ಸರಿಯಾಗಿ ಅರ್ಥವಾಗಲಿಲ್ಲ. ಏತಕ್ಕೋಸ್ಕರ ಅವರ ಜೊತೆ ಆತ್ಮೀಯ ಭಾವದಿಂದ ಸೇರಬಯಸುತ್ತೇವೆ ? ಅನ್ನೋದನ್ನ ನಾವು ಮೊದಲೇ ತಿಳಿದುಕೊಂಡು ಬಿಟ್ಟಿರುತ್ತೇವೆ. ಅವರ ಜೊತೆ ಶೇಖರ ಇನ್ನೂ ಸಹಜವಾಗಿ ಮಾತನಾಡ್ತಾನೆ. ಯಾವ ಊರು ? ಯಾವ ಜಿಲ್ಲೆ ? ಮನೇನಲ್ಲಿ ಯಾರ್‍ಯಾರಿದಾರೆ ? ಅಯ್ಯೋ ಮೂರು ವರ್ಷದಿಂದ ಮಕ್ಕಳು ಮರೀನ ನೋಡಿಲ್ಲವೇ ? ಹಾಂ, ಮಗಳು, ಮದುವೆಯಾದ ಒಂದು ವರ್ಷದಲ್ಲೇ ವಿಧವೆಯಾದಳೆ ? ನನಗೂ ಅವಳು ನಿಜವಾದ ತಂಗಿಯ ತರಹಾನೇ ಗೊತ್ತಾಯ್ತಾ ?..... ಹೌದೌದು, ತುಂಬಾ ಒಳ್ಳೇ ಜಾಗ. ನಾನು ಟ್ರೈನ್‌ನಲ್ಲಿ ಹೋಗಿದ್ದೆ. ಕಳೆದ ವರ್ಷ. ಅಲ್ಲಿ ಪೋಸ್ಟ್ ಆಫೀಸಿನ ಹತ್ತಿರ ಒಂದು ಕೆಂಪು ಮನೆಯಿದೆಯಲ್ಲ. ಅದು ನನ್ನ ಸೋದರನ ಮಗನದು. ಇಷ್ಟರೊಳಗೆ ಈ ಜನರು ನಾವು ಹೇಳಿದಂತೆ ಕೇಳುವ ಸೇವಕರಾಗಿ ಬಿಟ್ಟಿರುತ್ತಾರೆ. ಅವರಂತು ಪುಟ್ಟಹಳ್ಳಿಯಲ್ಲಿರುವವರು. ತಲೆ ಕೆದರಿಕೊಂಡು ಪಾಲೀಷ್ ಮಾಡಿದ ಬೂಟು ಹಾಕಿಕೊಂಡ ಬಾಬು – ಅವರು ಈ ದೊಡ್ಡ ಪಟ್ಟಣದಲ್ಲಿರುವವರು – ಅಲ್ಲಿಗೆ ಒಮ್ಮೆ ಅಡ್ಡಾಡಲು ಹೋದ ಮಾತ್ರ ಅವನಿಗೆ ತಾನು ಧನ್ಯನಾದೆನೆಂಬ ಅಭಿಮಾನ. ಇದರ ನಡುವೆ ಗಂಭೀರವಾದ ಒಂದು ರೀತಿಯ ಕಣ್ಣುಮುಚ್ಚಾಲೆ

ಆಟವಿದೆ ಅನ್ನೋದು ನನಗೆ ಸುಳಿವು ಸಿಕ್ಕಿತ್ತು.

ಕ್ರಮೇಣ ಈ ವಿಷಯ ಕೂಡಾ ನನಗೆ ಅರ್ಥವಾಗಿತ್ತು. ಈ ಸಲ ಇದರಿಂದ ಹಿಮ್ಮೆಟ್ಟಬೇಕು. ಈ ಎಲ್ಲಾ ಕಳ್ಳ, ಕಪಟ, ಜೂಜು, ಹೆಂಡಕುಡುಕ ಕಾರ್ಮಿಕ, ವೇಶ್ಯೆಯರು ಇವರುಗಳ ಜೊತೆ ಅಡ್ಡಾಡಿ ಮಾಡಿ ಒಂದು ರೀತಿಯ ಬೇಸರ ಕ್ರಮೇಣ ಕಾಡಲಾರಂಭಿಸಿತ್ತು. ಆತ್ಮಶುದ್ಧಿ ಗೀತ್ಮಶುದ್ಧಿ ಇವೆಲ್ಲ ಬರೀ ಮೋಸ. ಈಗ ಜೂಜಾಟ ಕೇವಲ ಹಣಗಳಿಸಲು. ತಲೆ ಧಿಂ ಎಂದಾಗ, ನನ್ನನ್ನೇ ನಾನು ಬಹಳ ಯೋಗ್ಯ ಎಂದು ಮನಸ್ಸಿನಲ್ಲಿ ಭಾವಿಸಲೆಂದೇ ಗುಂಡು ಹಾಕೋದು. ಹೆಣ್ಣುಗಳು ಚೆನ್ನ ಅನ್ನಿಸೋದು ಕೂಡಾ ಯಾಕೆ ಅಂದರೆ ಯಾವೊಂದೂ ಜವಾಬ್ದಾರಿ ಇಲ್ಲದೇನೇ ಅವರ ಒಡನಾಟ ಸ್ವಲ್ಪ ಪಡೆಯಬಹುದು ಅಂತ. ಇದರ ಮರ್ಮವನ್ನ ತಿಳಿದುಕೊಂಡ ಮೇಲೆ ಒಂದೊಂದಾಗಿ ಇವನ್ನ ಬಿಡುವ ಪ್ರಯತ್ನ ಮಾಡಿದ್ದೆ. ಏನನ್ನಾದರೂ ಬಿಟ್ಟು ಬಿಡೋದು ಅಷ್ಟೇನು ಸುಲಭದ ಮಾತಲ್ಲ. ತುಂಬಾ ಚಿಕ್ಕವನಾಗಿದ್ದಾಗ, ಒಂದು ಸಲ ನಾನು ನಮ್ಮ ಹಿತ್ತಲಿನಲ್ಲಿ ಒಂದು ಹಕ್ಕಿ ಹಿಡಿದಿದ್ದೆ. ಅದು ಇನ್ನೂ ನನಗೆ ಚೆನ್ನಾಗಿ ನೆನಪಿದೆ. ನಮ್ಮ ಅಡಿಗೆಯ ಮನೆಯ ಹಿಂದಿದ್ದ ಮರವನ್ನು ಹತ್ತಿ ಯಾರಿಗೂ ಗೊತ್ತಿಲ್ಲದಂತೆ ಆ ಹಕ್ಕಿಯನ್ನು ಹಿಡಿದುಕೊಂಡಿದ್ದೆ. ಆಶ್ಚರ್ಯ ! ಆ ಹಕ್ಕಿ ಒಂದೆರಡು ಸಲ ರೆಕ್ಕೆ ಬಡಿದು ಸತ್ತೇ ಹೋಗಿತ್ತು. ಆ ಹಕ್ಕಿಯ ಮುಖ ನೋಡುತ್ತಲೇ ಅಸಹ್ಯವಾಗಿತ್ತು. ನಾನು ಬೇಗ ಅದನ್ನು ತೆಗೆದುಕೊಂಡು ಹೋಗಿ ಬಿದಿರ ಮೆಳೆಯ ಮಧ್ಯದಲ್ಲಿ ಬಿಸಾಡಿ ಬಂದಿದ್ದೆ. ಆದರೆ ಆ ಹಕ್ಕಿಯ ರೆಕ್ಕೆಯಿಂದ ಒಸರಿದ ಕಾಡಿಗೆಯಂಥ ಕಪ್ಪು ಜಿಡ್ಡು ನನ್ನ ಕೈಗೆ ಹತ್ತಿಕೊಂಡು ಬಿಟ್ಟಿತ್ತು. ಎಷ್ಟೊಂದು ಸಾಬೂನು ಹಾಕಿಕೊಂಡು ತಿಕ್ಕಿಕೊಂಡರೂ ಕೈಯೊಳಗಿನ ಆ ಜಿಡ್ಡು ಹೋಗದೆ ಹಾಗೇ ಇತ್ತು. ಒಂದು ವಾರದವರೆಗೆ ಆ ಕೈಗಳಿಂದ ಏನನ್ನಾದರೂ ತಿಂದರೆ, ದುರ್ಗಂಧದಿಂದಾಗಿ ವಾಕರಿಕೆ ಬರುವಂತಾಗುತ್ತಿತ್ತು. ಈ ದಿನವೂ ಆ ದಿನದ ಘಟನೆ ನೆನಪಿಗೆ ಬರುತ್ತಲೇ ವಾಕರಿಕೆ ಬರುತ್ತೆ, ಅದೇ ಆ ಹಕ್ಕಿಯನ್ನು ಹಿಡಿದಂತೆ ಒಂದು ಸಲ ಅಂಟಿಕೊಂಡ ಕೆಟ್ಟ ಹವ್ಯಾಸವನ್ನು ಬಿಟ್ಟು ಬಿಡೋದು ಸುಲಭವಲ್ಲ. ಖಂಡಿತವಾಗಿಯೂ ಈಗಲೂ ನನ್ನಲ್ಲಿ ಯಾವೊಂದು ಹೇಸಿಗೆ ಅಥವಾ ಅನುಕಂಪ ಉಂಟಾಗೋದಿಲ್ಲ. ಸಂಪೂರ್ಣವಾಗಿ ಮತ್ತನಾಗುವ ಭಯದಿಂದಲೇ ನಾನು ಕ್ರಮೇಣ ನನ್ನನ್ನು ನಾನೇ ಸ್ವಲ್ಪ ಸ್ವಲ್ಪ ಬಿಡಿಸಿಕೊಳ್ಳುವ ಪ್ರಯತ್ನವನ್ನು ಪ್ರಾರಂಭಿಸಿದೆ. ಆದರೆ ಬಿಟ್ಟ ಮೇಲೆ ಮತ್ತಿನ್ನೆಲ್ಲಿಗೆ ಹೋಗಲಿ ? ಕಲ್ಕತ್ತೆ ನನಗೆ ಪರಿಚಿತವಾಗಿಬಿಟ್ಟಿದೆ – ಈ ಸಲ ಯಾರನ್ನು ಗುರುತಿಸುವ ಪ್ರಯತ್ನ ಮಾಡಿ ನಾನು ನನ್ನ ಸಮಯ ಕಳೆಯಲಿ ? ಯಾರಾದರೊಬ್ಬರ ಹತ್ತಿರ ಹೋಗಿ ಇದೇ ಪ್ರಶ್ನೆಯನ್ನು ಮಾಡುವುದು ಉತ್ತಮ.

ಬೃಜೇಶ್ವರದಾ ಹೇಳಿದ್ದರು, ಒಂದು ವೇಳೆ ಇವೆಲ್ಲದರ ಮೇಲಿನಿಂದ, ಮನಸ್ಸನ್ನು ಬದಲಾಯಿಸಬೇಕಾದರೆ, ಯಾರನ್ನಾದರೂ ಪ್ರೀತಿಸಬೇಕು. ಪ್ರೀತಿಯೊಂದೇ ಈ ಜಗತ್ತಿನಲ್ಲಿ, ಎಲ್ಲ ಶೂನ್ಯವನ್ನು ತುಂಬಲು ಸಾಧ್ಯ. ಖಂಡಿತವಾಗಿಯೂ ಇದೆಲ್ಲ ನಾನು ಕೇಳಿರುವ ಮಾತು, ಒಮ್ಮೆಯೂ ನನಗೆ ಪ್ರೀತಿಯನ್ನು ಹುಡುಕುವ ಪ್ರಮೇಯ ಇನ್ನೂ ಒದಗಿ ಬಂದಿಲ್ಲ.

ಆಗ ಮನೀಷಳ ಬಗ್ಗೆ ನೆನಪಾಗಿ, ನಾನು ಬೃಜೇಶ್ವರದಾಗೆ ಹೇಳಿದ್ದೆ ಕೂಡಾ. ಪ್ರೀತಿಯು ಕಡೆ ವಾಲಲು, ಪ್ರಯತ್ನ ಪಟ್ಟಿದ್ದೆ, ಆದರೆ ನನ್ನಿಂದ ಸಾಧ್ಯವಾಗಲಿಲ್ಲ.

ಒಂದು ವರುಷದೊಳಗಾಗಿ ಮೆಸ್ ಕೋಣೆಯನ್ನು ಬಿಟ್ಟು ಬಿಡಬೇಕಾಗಿ ಬಂತು. ನನ್ನ ಕೀರ್ತಿ ಕಥೆಯ ಸೌರಭ ಬಂಧು ಬಳಗದವರೆಗೆ ಹಬ್ಬಿತ್ತು. ಕಾನ್‌ಪುರದ ಎರಡನೇ ಹಾಗೂ ಮೂರನೇ ಅಕ್ಕಂದಿರೂ ಕೂಡಾ ನನ್ನ ಬಗ್ಗೆ ಉದ್ವೇಗಗೊಂಡು ವಿಚಾರಿಸ ತೊಡಗಿದರು. ಬಹುಶಃ ಮೂರು ನಾಲ್ಕು ವರ್ಷ ಮನೆಯಲ್ಲಿನ ಯಾರೊಂದಿಗೂ ನಾನು ಸಂಪರ್ಕವನ್ನೇ ಇಟ್ಟುಕೊಂಡಿರಲಿಲ್ಲ. ಕೇವಲ ದೊಡ್ಡಕ್ಕ ಮಾತ್ರ ಆಫೀಸಿನ ವಿಳಾಸ ತಿಳಿದಿದ್ದಳು. ಅಲ್ಲಿಗೇ ಒಮ್ಮೊಮ್ಮೆ ಟೆಲಿಫೋನ್ ಮಾಡುತ್ತಿದ್ದಳು. ತುಂಬಾ ಬಲವಂತ ಮಾಡಿದ್ರೆ ಯಾವುದಾದರೊಂದು ಭಾನುವಾರ ನಾನು ದೊಡ್ಡಕ್ಕನ ಮನೆಗೆ ಊಟಕ್ಕೆ ಹೋಗಿ ಬರುತ್ತಿದ್ದೆ.

ಒಂದು ದಿನ ದೊಡ್ಡಕ್ಕ ನೇರವಾಗಿ ಕಾರು ತೆಗೆದುಕೊಂಡು ನನ್ನ ಮೆಸ್‌ಗೆ ಬಂದು ಹಾಜರಾದಳು. ನನ್ನ ಸಾಮಾನುಗಳನ್ನು ಎಲ್ಲಾ ಕಿತ್ತು ಹಾಕಿ, ದೊಡ್ಡಕ್ಕ ಹೇಳಿದ್ದಳು, ಇನ್ನು ನೀನು ಇಲ್ಲಿರೋದು ಬೇಕಿಲ್ಲ. ನಮ್ಮ ಮನೆಯಲ್ಲೇ ಇರುವಂತೆ ನಡಿ. ಇವತ್ತೇ ಹೊರಡು.

ನಾನು ನಕ್ಕು ಹೇಳಿದ್ದೆ, ನಿನಗೆ ಹುಚ್ಚು ಹಿಡಿದಿದೆಯೋ ಅಕ್ಕ, ನಾನು ಇಲ್ಲಿ ಚೆನ್ನಾಗಿದೀನಿ. ನಿಮಗೂ ಇದರಿಂದ ಏನೂ ತೊಂದರೆ ಇಲ್ಲ.

ಸರಿ ಹಾಗಾದ್ರೆ ನಾನು ಇಲ್ಲೇ ಮಂಚದ ಮೇಲೆ ಕೂತ್ಕೊಂಡಿರ್ತೀನಿ, ನಿನಗೇನು ಬೇಕೋ ಆ ತರಹ ಮಾಡು. ಒಂದು ವೇಳೆ ನನ್ನನ್ನ ಕಳಿಸಿ ಬಿಡಲು ಸಾಧ್ಯವಾದ್ರೆ, ಕಳಿಸಿಬಿಡು.

ಆದರೆ ನೀನು ಈ ರೀತಿ ಯಾಕೆ ಮಾಡ್ತಿದೀಯ ಅಕ್ಕ ?

ನನ್ನನ್ನ ನೀನು ಇನ್ನೂ ಚಿಕ್ಕ ಹುಡುಗ ಅಂತ ಅಂದುಕೊಂಡಿದೀಯಾ ಹೇಗೆ ? ಇಷ್ಟೊಂದು ಯೋಚಿಸೋದಾದ್ರೂ ಏಕೆ ?

ನೀನು ನಮಗಾಗಿ ಯೋಚಿಸೋದಿಲ್ಲ. ನಾವಂತೂ ಬಹಳವಾಗಿ ನಿನ್ನ ಬಗ್ಗೆ ಯೋಚಿಸಲೇ ಬೇಕು. ನಿನ್ನ ಬಗ್ಗೆ ಯೋಚನೆ ಮಾಡಿ ಮಾಡಿ ಅಮ್ಮನ ಆರೋಗ್ಯ ಕೆಡ್ತಾ ಬಂದಿದೆ. ಸಾಕಪ್ಪಾ ಸಾಕು ನಿನ್ನ ಬಗ್ಗೆ ಕಥೆ ಕೇಳಿ ಕೇಳಿ ಸಾಕಾಯ್ತು, ನೀನ್ಯಾಕೋ ಈ ರೀತಿ ಆದೆ ?

ನನಗೆ ದೊಡ್ಡಕ್ಕನ ಮಾತು ಕೇಳಿ ನಗದೆ ಇರಲು ಸಾಧ್ಯವಾಗಲಿಲ್ಲ. ಮದುವೆಯ ನಂತರ ದಪ್ಪವಾಗಿ ಬಿಟ್ಟಿದಾಳೆ. ಈಗ ಸಾಮಾನ್ಯವಾಗಿ ಕಾಣುವ ದೊಡ್ಡ ಮನುಷ್ಯರ ಸೊಸೆ ತರಹ ಆಗಲು ಪ್ರಯತ್ನಿಸುತ್ತಿದ್ದಾಳೆ. ಚಿಕ್ಕಂದಿನಿಂದಲೂ ದೊಡ್ಡಕ್ಕನ ಮಾತುಕತೆ ಇದೇ ತರಹ. ಏನೋ ಭೂಮಿಯಲ್ಲಿ ಒಂದಲ್ಲ ಒಂದು ಆಪತ್ತು ಎದುರಾಗ್ತಾನೇ ಇರುತ್ತೆ ಅನ್ನೋ ರೀತಿ. ನಾನೆಂದೆ, ಏನಾಗಿಬಿಟ್ಟಿದೀನಿ. ಚೆನ್ನಾಗೇ ಇದೀನಲ್ಲ.

ಮದುವೇನಂತೂ ಮಾಡಿಕೊಳ್ಳಲಿಲ್ಲ. ಒಂಟಿಗೂಳಿ ತರಹ ಇದ್ದು ಬಿಡಬೇಕೂಂತ ಮಾಡಿದೀಯಾ ಹೇಗೆ ?

ಯಾವಾಗ ಬೇಕೆನಿಸುತ್ತೋ ಆಗ ಮಾಡಿಕೊಳ್ತೀನಿ. ಮೂವತ್ತು ವರ್ಷದ ವಯಸ್ಸಿನಲ್ಲಿ ಎಲ್ಲರೂ ಅದನ್ನು ಕಾಲೆತ್ತಿ ಜಾಡಿಸಿಯೇ ಇರುತ್ತಾರೆ.

ನಿನಗೇನು ಇಷ್ಟಾನೋ ಅದೇ ತರಹ ಮಾಡು. ಆದರೆ ನಮ್ಮ ಕಣ್ಣು ಮುಂದೆ ಇದ್ದುಕೊಂಡೇ ಮಾಡು. ಈ ಮೆಸ್ಸಿನ ಊಟ ತಿಂದು ಜನ ಬದುಕಿದವರುಂಟೇ ? ನೆನೆಸಿಕೊಂಡ್ರೆ ವಾಕರಿಕೆ ಬರುತ್ತೆ. ನಿನ್ನ ಮುಖ ನೋಡು ಹೇಗಾಗಿ ಬಿಟ್ಟಿದೆ ?

ಈ ಮೆಸ್‌ನಲ್ಲಿ ನನ್ನ ತರಹ ಇನ್ನೂ ಮೂವತ್ತಾರು ಜನ ಇದಾರೆ. ಅವರೆಲ್ಲ ಮನುಷ್ಯರಲ್ಲವೇ ?

ಅದು ಅವರ ಹಣೆಬರಹ. ಅದಕ್ಕೆಲ್ಲಾ ನಾವು ಯೋಚನೆ ಮಾಡೋದಕ್ಕಾಗುತ್ತಾ? ಅವರಿಗೂ ಅವರಮ್ಮನೋ, ಅಕ್ಕನೋ ಇದ್ದರೆ ಅವರು ಯೋಚಿಸಲಿ. ನನ್ನ ಯೋಚನೆ ಈಗ ನಿನ್ನ ಬಗ್ಗೆ, ನಡಿ ನೀನು ನಮ್ಮ ಮನೆ ಹೊರಗಿನ ಕೋಣೆಯಲ್ಲಿರುವಂತೆ. ಯಾರೂ ನಿನಗೆ ತೊಂದ್ರೆ ಮಾಡೋದಿಲ್ಲ. ಹಾಗಾದ್ರೂ ನೀನು ನನ್ನ ಹತ್ತಿರ ಇರ್ತೀಯ. ಇಲ್ಲದಿದ್ದರೆ ನಿನ್ನ ಯೋಚನೆ ಮಾಡ್ತಾ ಇದ್ದರೆ, ರಾತ್ರಿ ನನಗೆ ನಿದ್ದೆ ಬರೋದಿಲ್ಲ.....

ಹೌದು, ಮೊದಲು ಈ ರೀತಿ ಹೇಳಿ ಕರ್ಕೊಂಡು ಹೋಗ್ತೀಯ, ಆಮೇಲೆ ಒಂದು ದಿನ ಹೇಳ್ತೀಯ – ಇವತ್ತು ಸ್ವಲ್ಪ ಪೇಟೆಗೆ ಬಂದ್ರೆ ಒಳ್ಳೆಯದು ಅಂತ. ಇವತ್ತು ನಮ್ಮ ನಾದಿನಿಗೆ ಏನೋ ಕೊಡಬೇಕು, ಕೊಟ್ಟು ಬಾ, ನಮ್ಮ ಮಾವನವರ ತಂಗಿಯನ್ನು ಹೌರಾ ಸ್ಟೇಷನ್ನಿನಿಂದ ಕರ್ಕೊಂಡು ಬಾ, ಅವೆಲ್ಲ ನನ್ನಿಂದ ಸಾಧ್ಯವಿಲ್ಲ. ಇದಾದ ಮೇಲೆ ಖಂಡಿತವಾಗಿಯೂ ಕ್ರಮೇಣ, ನಿಧಾನವಾಗಿ ಹೇಳ್ತೀಯ – ಬೆಳಗಾಗೆದ್ದು ನನ್ನ ಮಗ, ಮಗಳಿಗೆ ಸ್ವಲ್ಪ ಪಾಠ ಹೇಳಿ ಕೊಡಬಾರದೆ. ಒಂದು ಚಿಕ್ಕಾಸೂ ಖರ್ಚು ಮಾಡದೆ ಪುಕ್ಕಟೆಯಾಗೇ ಮನೇನಲ್ಲೆ ಮೇಷ್ಟ್ರು ಸಿಕ್ಕಿ ಬಿಡ್ತಾರೆ. ದೊಡ್ಡಕ್ಕ ಜೋರಾಗಿ ನಕ್ಕು ಹೇಳಿದಳು, ಅದಕ್ಕೆಲ್ಲ ಹೆದರ್ಕೋ ಬೇಡ, ನಿನ್ನ ಕೈಗೆ ನನ್ನ ಮಕ್ಕಳ ಓದು ಬರಹದ ಭಾರ ಕೊಟ್ಟು, ನಾನು ನಿಶ್ಚಿಂತಳಾಗಿರೋಕೆ ಸಾಧ್ಯವೇ ? ಆಗ ಅವರ ಶಿಕ್ಷಣ ಯಾವ ರೀತಿ ಇರುತ್ತೆ ಅನ್ನೋದು ನನಗೆ ಗೊತ್ತು.

ಆದರೆ ಎಲ್ಲಾ ವಿಷಯಗಳು ಒಂದೇ ಸಮನೆ ಹೊಂದಿಕೊಳ್ಳೋದಿಲ್ಲ. ದೊಡ್ಡಕ್ಕನ ಮನೆಗೆ ಹೋದ ಮೇಲೆ ದೊಡ್ಡಕ್ಕನ ಮಗ ಬೂಬುಲ್ ನನ್ನ ಭಕ್ತನಾಗಿ ಬಿಟ್ಟ. ನಾನು ಅವನನ್ನು ತುಂಬಾ ಪ್ರೀತಿಸಲು ಪ್ರಾರಂಭಿಸಿದೆ. ಅಷ್ಟೇ ಅಲ್ಲದೆ ಬೂಬುಲನ ಪರೀಕ್ಷೆಯ ಮೊದಲು ಅವನು ಭೂಗೋಳದಲ್ಲಿ ಹಿಂದಿರುವುದನ್ನು ಗಮನಿಸಿ, ನಾನು ಸ್ವತಃ ಎಷ್ಟು ಚಿಂತಿಸಲಾರಂಭಿಸಿದೆನೆಂದರೆ, ಎರಡು ದಿನ ಬೆಳಗ್ಗೆ ಸಾಯಂಕಾಲ ನಾನು ಬೂಬೂಲನಿಗೆ ಗಿಳಿಪಾಠದಂತೆ ಭೂಗೋಳ ಹೇಳಿ ಕೊಟ್ಟಿದ್ದೆ.

ದೊಡ್ಡ ಭಾವನವರು, ಅವರ ಆಫೀಸಿನಲ್ಲೇ ನನಗೆ ನೌಕರಿಯ ವ್ಯವಸ್ಥೆ ಮಾಡಿಕೊಡುತ್ತಲೇ ನಾನು ಸರಕಾರಿ ಕೆಲಸವನ್ನು ಬಿಟ್ಟುಬಿಟ್ಟೆ. ಸರಕಾರಿ ನೌಕರಿಯಲ್ಲಿದ್ದ ಅನುಕೂಲವೆಂದರೆ ಎಂದಾದರೊಮ್ಮೆ ಕೆಲಸದಿಂದ ತಪ್ಪಿಸಿಕೊಂಡರೆ, ಅಥವಾ ಕೆಲಸದಲ್ಲಿ ಸಾವಿರ ತಪ್ಪಾದರೂ, ಕೆಲಸ ಕಳೆದುಕೊಳ್ಳುವ ಭಯವಿರಲಿಲ್ಲ. ಆದರೆ ಬೇರೆ ಪ್ರೈವೇಟ್ ಫರ್ಮ್‌ಗಳಲ್ಲಿ ಅನಾನುಕೂಲವಿದ್ದರೂ ಸ್ವಂತ ಭಾವನವರ

ಕಛೇರಿಯೋ ಆದ್ದರಿಂದ, ಇವನ್ನೆಲ್ಲ ಪಡೆಯಬಹುದೆಂದು ಭಾವಿಸಿ, ನಾನು ಕೆಲಸಕ್ಕೆ ಸೇರಿದ್ದೆ. ಆದರೆ ಕೆಲಸಕ್ಕೆ ಸೇರಿದ ನಂತರವೇ ಗೊತ್ತಾದದ್ದು ಇನ್ನೊಂದು ರೀತಿಯ ಆಪತ್ತು. ತಿಂಗಳ ಸಂಬಳ ಅಂತ ಏನೂ ಕಡಿಮೆಯದಲ್ಲವಾದರೂ ಪೂರ್ತಿ ಸಂಬಳವನ್ನು ಎಂದೂ ಪಡೆದಿರಲಿಲ್ಲ. ನನ್ನ ಸಂಬಳದಲ್ಲಿ ಒಂದು ನೂರು ರೂಪಾಯಿ ಮುರ್ಕೊಂಡು, ಅಪ್ಪನ ಹೆಸರಿಗೆ ಕಳಿಸಬೇಕಾಗಿತ್ತು. ಇನ್ನೊಂದು ನೂರು ರೂಪಾಯಿಯನ್ನು ಭಾವನವರೇ ತೆಗೆದುಕೊಳ್ಳುತ್ತಿದ್ದರು. ಏಕೆಂದರೆ ಅವರ ಮನೆಯಲ್ಲೇ ಇದ್ದುಕೊಂಡು ತಿಂದುಂಡು ಒಂದು ವೇಳೆ ನನಗೆ ಸಂಕೋಚವಾದರೆ ಅಂತ. ಅದರಲ್ಲಿ ಏನು ಸಂಕೋಚ. ಅಕ್ಕ ಸ್ವತಃ ಕರ್ಕೊಂಡು ಬಂದಿದಾಳೆ, ಅವಳ ಮನೇಲೇ ತಿನ್ನಲಿ ಅಂತ. ಇನ್ನು ಅದಕ್ಕಾಗಿ ಹಣ ಯಾಕೆ? ಒಂದು ನೂರು ರೂಪಾಯಿ ಬೇರೆ. ಅವೆಲ್ಲ ಬರೀ ಮೋಸ.

ಅಕ್ಕ ಮೊದಲಿನಿಂದಲೇ ಹೇಳಿಬಿಟ್ಟಿದ್ದಾಳೆ, ನಾನು ಎಂದು ಮದುವೆ ಮಾಡ್ಕೊತ್ತೀನೋ ಆ ದಿನದಿಂದಲೇ ನನ್ನ ಇನ್ನೂರು ರೂಪಾಯಿ ಸಂಬಳದಿಂದ ಮುರಿದುಕೊಳ್ಳೋದಿಲ್ಲ ಅಂತ. ಜನ ಮದುವೆ ಮಾಡಿಕೊಂಡರೆ, ಕೆಲವೊಮ್ಮೆ ಅರ್ಧ ರಾಜ್ಯವನ್ನೆ ಪಡೆಯುತ್ತಾರೆ. ಆದರೆ ನನಗೆ, ನಾನು ಮದುವೆ ಮಾಡಿಕೊಂಡರೆ ಇನ್ನೂರು ರೂಪಾಯಿ ಹೆಚ್ಚುತ್ತೆ.

ಮದುವೆಯನ್ನೇನೋ ನಾನು ಮನೀಷಳ ಜೊತೆ ಮಾಡಿಕೊಳ್ಳಬೇಕೆಂದು ಇಷ್ಟಪಟ್ಟಿದ್ದೆ. ಆಗ ಕೆಲವೊಂದು ಹುಡುಗಿಯರ ಪರಿಚಯವಿತ್ತು. ಹೆಂಗಸರ ಸೀರೆಯಲ್ಲಿ ಎಷ್ಟು ನೆರಿಗೆ ಇದೆ ಅನ್ನೋದೂ ಗೊತ್ತಿತ್ತು. ಪಿಕ್‌ನಿಕ್‌ಗೆ ಹೋದಾಗ ಹೆಂಗಸರು ಪುನಃ ಪುನಃ ಯಾಕೆ ಜಲಾಶಯವನ್ನೇ ನೋಡಬಯಸುತ್ತಾರೆನ್ನುವುದು ತಿಳಿದಿತ್ತು. ಯಾವುದಾದರೂ ಹುಡುಗಿಯನ್ನು ಚುಂಬಿಸುವ ಮೊದಲು, ಬೆರಳಿನಿಂದ ಅವಳ ತುಟಿಯನ್ನು ಮುಟ್ಟಬೇಕು. ಪ್ರೀತಿಸ್ತೇನೆ ಎನ್ನುವುದನ್ನ ಆನಂತರ ಸ್ವಲ್ಪ ಸಮಯ ಕಳೆದ ಮೇಲೇ ಹೇಳಬೇಕು. ನೀನಿವತ್ತು ತುಂಬಾ ಚೆನ್ನಾಗಿ ಕಾಣಿಸ್ತಿದೀಯ ಅನ್ನೋದರ ಬದಲು, ನಿನ್ನ ನೋಡಿ ನನಗೆ ನಮ್ಮಮ್ಮನ ನೆನಪಾಯಿತು ಎನ್ನಬೇಕು. ಇದರಿಂದ ಹುಡುಗಿಯರಿಗೆ ತುಂಬಾ ಸಂತೋಷವಾಗುತ್ತೆ. ಹುಡುಗಿಯ ರೂಪವನ್ನ ಪ್ರಶಂಶಿಸದೆ, ಅವರ ದೋಷಗಳನ್ನು ಪ್ರಶಂಶಿಸಬೇಕು. ಒಂದು ವೇಳೆ ಯಾವುದಾದರೂ ಹುಡುಗಿಯ ಗಲ್ಲದಲ್ಲಿ ಕಲೆ ಇದ್ದರೆ, ಅಥವಾ ಕೈಯ ಬೆರಳಿನ ಉಗುರು ಸರಿಯಿಲ್ಲದಿದ್ದರೆ, ಒಂದು ವೇಳೆ ಕಿವಿಗಳೆರಡೂ ತುಂಬಾ ದೊಡ್ಡವಾಗಿದ್ದರೆ ಅವೇ ಪ್ರಶಂಸನೀಯ. ಯಾವುದಾದರೂ ಹೆಣ್ಣು ತಾನು ಅಲಂಕರಿಸಿಕೊಳ್ಳುವಾಗ, ಗಂಡಸರನ್ನು ಹತ್ತಿರ ಕುಳಿತುಕೊಳ್ಳಲು ಒಪ್ಪಿದರೆ, ಆಗ ಅವನಿಗೆ ಸ್ವಲ್ಪ ಹೊಗಳುವ ಅವಕಾಶವನ್ನು ಕೊಡ್ತಾಳೆ. ಅವಳಿಗೆ ಆ ವಿಷಯವನ್ನು ಮನದಟ್ಟು ಮಾಡಿಸಬೇಕು. ಅವಳನ್ನು ಹೊಗಳದೆ ಅವಳ ಅಲಂಕಾರ ಮುಗಿಯೋದಿಲ್ಲ. ಮತ್ತು ಒಂದಲ್ಲ ಒಂದು ಸಲ ಹೆಂಗಸರ ಕಣ್ಣೀರನ್ನ ಕಾಣಲೇಬೇಕು. ಬೆರಳುಗಳಿಂದ ಹೆಂಗಸರ ಕಣ್ಣೀರನ್ನ ಒರೆಸದೇ ಬಾಂಗ್ಲಾದ ಯಾವುದೇ ಹುಡುಗಿಯನ್ನು ಯಾರಾದರೂ ಪ್ರೀತಿಸಿದ್ದಾರೆ ಎನ್ನುವುದನ್ನು ನಾನು ಎಂದೂ ಕೇಳಿಲ್ಲ. ಹಳ್ಳಿಯ ಹುಡುಗನಾಗಿದ್ದರೂ ನಾನು ಈ

ಎಲ್ಲ ವೃತ್ತಾಂತವನ್ನು ಚೆನ್ನಾಗಿ ತಿಳಿದುಕೊಂಡಿದ್ದೆ. ಆದರೆ ಮನೀಷ ಈ ಎಲ್ಲ ನಿಯಮಗಳನ್ನು ಭಂಗಪಡಿಸಿಬಿಟ್ಟಿದ್ದಳು.

ಒಬ್ಬ ವ್ಯಕ್ತಿ ಇಡೀ ದಿನ ಮರುಭೂಮಿಯಲ್ಲೇ ಇರಬೇಕಾದ ಪ್ರಸಂಗ ಒದಗಿದರೆ, ಖಂಡಿತವಾಗಿಯೂ ಒಮ್ಮೆಯಾದರೂ ಮರೀಚಿಕೆಯನ್ನು ಕಂಡೇ ಕಾಣುತ್ತಾನೆ. ಅದೇ ತರಹ ಮನುಷ್ಯ ಜೀವನದಲ್ಲಿ ಒಮ್ಮೆಯಾದರೂ ತನ್ನನ್ನು ಒಂಟಿ ಅಂತ ಅಂದುಕೊಳ್ಳುತ್ತಾನೆ. ಅದೇ ತರಹ, ನನ್ನ ಮನಸ್ಸಿಗನಿಸಿತ್ತು. ಆರು ತಿಂಗಳು, ಕಳೆದ ಫೆಬ್ರವರಿಯಿಂದ ಆಗಸ್ಟ್ ತನಕ, ನಾನು ಅಪರಾಜಿತನೆಂದು, ಏನೋ ಒಂದು ರೀತಿಯ ಅಲೌಕಿಕ ಶಕ್ತಿ ತುಂಬಿ ಬಂದಂತೆ, ಪ್ರತಿಯೊಂದರಲ್ಲೂ ನಾನು ಗೆಲ್ಲುತ್ತಾ ಹೋದೆ. ಆಗ ಇಸ್ಪೀಟಿನಾಟದಲ್ಲೂ ನಾನೇ ಗೆಲ್ಲುತ್ತಿದ್ದೆ. ದಿನದ ಆಟದ ಕೊನೆಯಲ್ಲಿ ಮುಷ್ಟಿ ತುಂಬಾ ನನ್ನಲ್ಲಿ ಹಣವಿರುತ್ತಿತ್ತು. ಅದಕ್ಕಾಗಿ ನನ್ನ ಜೊತೆ ಆಟ ಆಡಲು ಯಾರೊಬ್ಬರೂ ಒಪ್ಪುತ್ತಲೇ ಇರಲಿಲ್ಲ. ನನ್ನ ಗೆಲುವಿನಿಂದಾಗಿ ತುಟಿ ಕೊಂಕಿಸಿ ಎಲ್ಲರನ್ನು ನೋಡುತ್ತಿದ್ದೆ. ಆಗ ಗುಂಡು ಹಾಕಿದ ಮೇಲೂ ನೇರವಾಗಿ ನೆಟ್ಟಗೆ ನಿಂತುಕೊಳ್ಳಬಲ್ಲವನಾಗಿದ್ದೆ. ಅವಿನಾಶನಂತವರು ಗುಂಡು ಹಾಕಿದ ಮೇಲೆ ಮತ್ತೇರಿ ಬಿದ್ದಾಗ, ಎತ್ತಿಕೊಂಡು ಹೋಗಿ ಅವರನ್ನ ಟ್ಯಾಕ್ಸಿಯಲ್ಲಿ ಹಾಕಿ ಬರುತ್ತಿದ್ದೆ. ಲೈಟ್‌ಹೌಸ್ ಸಿನೇಮಾ ಥಿಯೇಟರಿನೆದುರು, ಕೆಲವು ಪುಂಡು ಹುಡುಗರ ಜೊತೆ ಒಮ್ಮೆ ಜಗಳ ಹತ್ತಿಕೊಂಡು ಬಿಟ್ಟಿತ್ತು, ಇಂಗ್ಲಿಷ್ ಕಲಿತ, ಪ್ಯಾಂಟ್ ಶರ್ಟ್ ತೊಟ್ಟ ಹುಡುಗರ ಗುಂಪು. ಅವರ ಗುಂಪೇ ದೊಡ್ಡದು ಆದರೆ ಅವರು ಅರುಣನ ಹೆಂಡತಿಯನ್ನು ಕೆಟ್ಟ ಮಾತುಗಳಿಂದ ಛೇಡಿಸಿದ್ದರು. ನಾವು ಮೂರು ಜನರಾದರೆ, ಅವರು ಎಂಟು ಜನ. ಆ ಸಮಯದಲ್ಲಿ ನನ್ನಲ್ಲಿ ದೈತ್ಯಶಕ್ತಿ ಇದೆಯೆಂದು ಭಾವಿಸಿದ್ದೆ. ನಾನು ಹತ್ತಿರ ಹೋಗಿ ಥಟ್ಟನೆ ಒಬ್ಬನ ಕಾಲರ್ ಹಿಡಿದುಕೊಳ್ಳುತ್ತಲೇ ಅವರೆಲ್ಲ ಬಂದು ನಮ್ಮಲ್ಲಿ ಕ್ಷಮೆ ಯಾಚಿಸಲಾರಂಭಿಸಿದರು. ನಾನು ಗರ್ವದಿಂದ ನನ್ನ ಸ್ನೇಹಿತರ ಬಳಿ ಹಿಂತಿರುಗಿದ್ದೆ. ಆದರೆ ಎಷ್ಟು ತಿಂಗಳೂಂತ ಸದಾ ಜಯಶಾಲಿಯಾಗಿಯೇ ಇರಲು ಸಾಧ್ಯ ? ನನಗನಿಸುತ್ತಿತ್ತು ಪ್ರಪಂಚದಲ್ಲೇ ನನಗೆ ಅಸಾಧ್ಯವಾದುದು ಯಾವುದೂ ಇಲ್ಲ. ಅಂಗೈ ರೇಖೆಯಷ್ಟೇ ಸ್ಪಷ್ಟವಾಗಿ ಇಡೀ ಪ್ರಪಂಚವನ್ನೇ ಅಭಯ ಕಣ್ಣುಗಳಿಂದ ನೋಡಬಲ್ಲವನಾಗಿದ್ದೆ, ಅಷ್ಟೊಂದು ಅಹಂಕಾರವೂ ನನ್ನಲ್ಲಿತ್ತು. ಆ ಅಹಂಕಾರದ ಬಿಸಿಯಲ್ಲಿ ನಾನಂದುಕೊಂಡಿದ್ದೆ, ಮನೀಷಳನ್ನು ಜಯಿಸಬಹುದೆಂದು. ಆದರೆ ಮನೀಷ ನನಗೆ ಯಾವೊಂದು ಅವಕಾಶವನ್ನೇ ಕೊಡಲಿಲ್ಲ.

ಆಗ ಎಂದಾದರೊಮ್ಮೆ ಅರುಣನ ಮನೆಯಲ್ಲಿ ಗುಂಪು ಸೇರುತ್ತಿತ್ತು. ಅರುಣ ತಾಪಸನ ತಂಗಿಯನ್ನೇ ಮದುವೆ ಮಾಡಿಕೊಂಡಿದ್ದುದರಿಂದ, ಗಂಡ ಹೆಂಡಿರಿಬ್ಬರೂ ನಮಗೆ ಪರಿಚಯ. ಅವರ ಮನೆಯಲ್ಲಿ ಇನ್ನಿದ್ದವರೆಂದರೆ ಅವರಪ್ಪ ಹಾಗೂ ತಂಗಿ ಮನೀಷ. ಅರುಣನ ಅಪ್ಪ ಮೂರಂತಸ್ತಿನ ಮನೆಯಲ್ಲಿ ದೂರದಲ್ಲಿರುತ್ತಿದ್ದರು ಎಂದೇ ಅಲ್ಲಿ ನಾವು ಸಲಿಗೆ ಪಡೆದುಕೊಂಡಿದ್ದೆವು. ಅರುಣನ ಅಕ್ಕ ಗಂಡನನ್ನು ಕಳೆದುಕೊಂಡು, ವಿಧವೆಯಾಗಿ, ಮಕ್ಕಳು ಮರಿಗಳನ್ನು ಕರೆದುಕೊಂಡು, ಆ ಮನೆಗೆ

ಹಿಂತಿರುಗಿ ಬಂದ ನಂತರ ನಾವುಗಳು ಗುಂಪು ಸೇರೋದು ನಿಂತಿತ್ತು.

ಮನೀಷ ಸದಾ ಸಿಲ್ಕ್ ಸೀರೆಗಳನ್ನು ಉಡಲು ಇಷ್ಟಪಡುತ್ತಿದ್ದಳು. ಯಾವಾಗ ಅವಳನ್ನ ಕಂಡರೂ ಅವಳು ಸಿಲ್ಕ್ ಸೀರೆಯನ್ನೇ ಉಟ್ಟಿರುತ್ತಿದ್ದಳು. ಅವಳು ಎಲ್ಲಿಗಾದರೂ ಹೊರಟಿದ್ದರೆ ಅಥವಾ ಬರುತ್ತಿದ್ದರೆ ಅಥವಾ ಮನೀಷಳ ಬಗ್ಗೆ ಯಾವಾಗಲಾದರೂ ಯೋಚಿಸಿದರೂ, ನನ್ನ ಕಣ್ಣ ಮುಂದೆ ತೇಲಿ ಬರ್ತಿದ್ದುದು ಅವಳ ಮೆರೂನ್ ಬಣ್ಣದ ಸಿಲ್ಕ್ ಸೀರೆ ಉಟ್ಟ ಮೂರ್ತಿ. ಸಿಲ್ಕ್ ಸೀರೆ ಉಟ್ಟಾಗ ಹೆಂಗಸರ ದೇಹ ಇನ್ನೂ ಹಗುರ ಎಂದೆನಿಸುತ್ತೆ. ಹಗುರವಾದ ಮುಖ, ಹಗುರವಾದ ಎದೆಯ ಬಡಿತ, ಹಗುರವಾದ ತೊಡೆಗಳು. ಈ ಹಗುರವಾದ ಎದೆಗೆ ತಲೆ ಒರಗಿಸಿ ಮಲಗಬೇಕು ಎಂದು ಪ್ರಬಲವಾದ ಇಚ್ಛೆಯುಂಟಾಗುತ್ತೆ. ಈ ರೀತಿಯ ದೇಹ ಕೈಗೆಟುಕಿ ಒಮ್ಮೆ ಎದೆಗಪ್ಪಿಕೊಳ್ಳಲಾಗದಿದ್ದರೆ ಆಗ ತುಂಬಾ ಸಂಕಟವಾಗುತ್ತದೆ.

ಮನೀಷಳ ಅಮ್ಮ ಚಿಕ್ಕಂದಿನಲ್ಲಿಯೇ ತೀರಿಕೊಂಡಿದ್ದರಿಂದ ಅವಳ ಸ್ವಭಾವ ಸ್ವಲ್ಪ ಸ್ವೇಚ್ಛೆಯದಾಗಿತ್ತು. ಮನ ಬಂದಾಗ ಮನೆಯಿಂದ ಹೊರಡೋದು, ಬರೋದು. ಇದಕ್ಕಾಗಿ ಅವಳನ್ನು ಯಾರೂ ಆಕ್ಷೇಪಿಸುತ್ತಿರಲಿಲ್ಲ. ಖಂಡಿತವಾಗಿಯೂ ಆಕ್ಷೇಪಿಸುವ ಆವಶ್ಯಕತೆಯೂ ಇರಲಿಲ್ಲ. ಕಾರಣ ಮನೀಷಳು ಹೇಗೆಂದರೆ, ಅವಳು ನಿಷ್ಕಳಂಕಿತ ಹೆಣ್ಣು. ಎಂದೂ ಅವಳು ಆಪತ್ತಿಗೆ ಸಿಕ್ಕಕೊಳ್ಳುತ್ತಿರಲಿಲ್ಲ ಹಾಗೂ ಅವಳನ್ನು ಆಪತ್ತಿಗೆ ಈಡು ಮಾಡೋದು ಯಾರಿಂದಲೂ ಸಾಧ್ಯವಿರಲಿಲ್ಲ ಅಥವಾ ಒಂದು ವೇಳೆ ಮನೀಷ ಮನಸ್ಸು ಮಾಡಿದ್ದರೆ, ವಿಪತ್ತಿನಲ್ಲಿ ಸಿಕ್ಕಿ ಹಾಕಿಕೊಳ್ಳಬಯಸಿದ್ದರೆ ಆಗ ಯಾರಿಂದಲೂ ಅವಳನ್ನು ತಡೆಯಲು ಸಾಧ್ಯವಿರಲಿಲ್ಲ. ಇಷ್ಟು ಸುಂದರ, ಇಷ್ಟು ಬುದ್ಧಿಯುಳ್ಳ, ಇಂಥ ಹಠಮಾರಿ ಹುಡುಗಿಯನ್ನು ನಾನೆಂದೂ ಕಂಡಿರಲಿಲ್ಲ. ನಾವುಗಳು ಸಂಜೆ ಹೊತ್ತು ಇಸ್ಪೀಟಾಡುತ್ತಿದ್ದೆವು. ಇಸ್ಪೀಟ್ ಎಲೆಗಳು ಹಂಚಲ್ಪಟ್ಟಿವೆ. ಇನ್ನೂ ಯಾರು ಕೈಗೆತ್ತಿಕೊಂಡಿರಲಿಲ್ಲ. ಮನೀಷ ತನ್ನ ಸೀರೆಯನ್ನು ಸರ ಸರ ಸದ್ದು ಮಾಡುತ್ತ ಏನನ್ನೋ ತೆಗೆದುಕೊಳ್ಳಲು ಆ ಕೋಣೆಗೆ ಬಂದಳು. ನಾನೆಂದೆ, ಮನೀಷ ನನ್ನ ಎಲೆಗಳನ್ನು ಸ್ವಲ್ಪ ಮುಟ್ಟಿ ಹೋಗು ನೋಡೋಣ. ಒಂದು ವೇಳೆ ಚೆನ್ನಾಗಿದ್ದರೆ ಸರಿ ... ಯಾವೊಂದು ಸಂಕೋಚವೂ ಇಲ್ಲದೆ ಮನೀಷ ನನ್ನ ಹತ್ತಿರ ಬಂದು ಮೊಣಕಾಲೂರಿ ಕುಳಿತುಕೊಂಡು, ನನ್ನ ಮೂರು ಎಲೆಗಳನ್ನು ಎತ್ತಿಕೊಂಡು ನೋಡಿದಳು. ಅವಳಿಗೆ ಚೆನ್ನಾಗಿ ಆಟ ಬರುತ್ತಿತ್ತು. ತುಟಿ ಕೊಂಕಿಸಿ ನಕ್ಕು ಹೇಳಿದಳು, ನೀವು ಈ ಸಲ ಖಂಡಿತ ಗೆದ್ದೇ ಗೆಲ್ತೀರಾ. ನಾನು ಏನು ಹೇಳಿದೀನಿ ಅನ್ನೋದನ್ನ ನೋಡ್ತಾ ಇರಿ. ನಾನು ಎಲೆಗಳನ್ನು ನೋಡಿ ಚಕಿತನಾದೆ. ಬಹಳ ಅಸಂಭವ ರೀತಿಯಲ್ಲಿ ಜೋಡಿಸಲ್ಪಟ್ಟ ಎಲೆಗಳು. ಮನೀಷ ನನ್ನ ಪಕ್ಕ ಸರಿದು ಕುಳಿತಿದ್ದಳು. ಅವಳ ದೇಹದಿಂದ ಸುಂದರವಾದ ಸುವಾಸನೆ ಹೊರ ಹೊಮ್ಮುತ್ತಿತ್ತು. ಮೆರೂನ್ ಬಣ್ಣದ ಸಿಲ್ಕ್ ಅವಳ ದೇಹದ ಅಂಕು ಡೊಂಕುಗಳನ್ನು ಇನ್ನೂ ಚೆನ್ನಾಗಿ ತೋರ್ಪಡಿಸುತ್ತಿತ್ತು. ನನಗೆ ವಿಶ್ವವನ್ನೇ ಜಯಿಸಬೇಕೆಂದು ಆಸೆಯಾಗಿತ್ತು. ಅವಳು ನನ್ನ ಮನದ ಮಾತನ್ನು ಕೇಳಿಸಿಕೊಂಡಳೋ ಇಲ್ಲವೋ ತಿಳಿಯಲಿಲ್ಲ. ಅದೇ ಕ್ಷಣದಲ್ಲಿ ಅವಳು ಎದ್ದು

ಬಿಟ್ಟಳು.

ಕೂತ್ಕೋ, ಇನ್ನು ಸ್ವಲ್ಪ ಹೊತ್ತು ಕೂತ್ಕೋಬಾರದೆ ಪ್ಲೀಸ್.

ಏನು ? ನಾನು ಇಲ್ಲಿ ಕುಳಿತು ಇಸ್ಪೀಟ್ ಆಡಬೇಕೆ ? ಛೆ ?

ಸ್ವಲ್ಪ ಹೊತ್ತಿನ ನಂತರ ಮನೀಷ ಪುನಃ ಮತ್ತೊಮ್ಮೆ ಕೋಣೆಯೊಳಗೆ ಬಂದಳು. ಆ ಸಲ ನಾನಾಗಲೇ ಎಲೆಗಳನ್ನು ಕೈಗೆತ್ತಿಕೊಂಡು ಬಿಟ್ಟಿದ್ದೆ. ಅವಳೆಂದಳು, ಎತ್ತಿಕೊಂಡು ಬಿಟ್ಟಿರಾ ? ನಾನು ಒಂದು ಕೈ ಮುಂದೆ ಚಾಚಿ ಹೇಳಿದೆ, ನೀನು ಕೇವಲ ನನ್ನ ಕೈಗಳನ್ನ ಮುಟ್ಟಿ ಬಿಡು, ಅಷ್ಟರಿಂದಲೇ ನಾನು ಗೆದ್ದು ಬಿಡುತ್ತೇನೆ. ಮನೀಷ ನನ್ನ ಕೈ ಮುಟ್ಟುತ್ತಿರುವಂತೆಯೇ ನಾನು ಅವಳನ್ನು ಎಳೆದು ಕುಳ್ಳಿರಿಸುವ ಪ್ರಯತ್ನ ಮಾಡಿದೆ, ಏಯ್ ಅಷ್ಟೊಂದು ಸುಲಭವಲ್ಲ. ಮನೀಷ ನಗು ನಗುತ್ತ ತನ್ನ ಕೈಬಿಡಿಸಿಕೊಂಡಳು. ಆ ಸಲವೂ ನಾನು ಆಟದಲ್ಲಿ ಗೆದ್ದೆ. ಆದರೆ ಆಗ ಮನೀಷ ಕೋಣೆಯಿಂದ ಹೊರಟು ಹೋಗಿದ್ದಳು.

ಮನೀಷಳ ಜೊತೆ ಒಂದು ವೇಳೆ ನನ್ನ ಪರಿಚಯುವಾಗದೇ ಇರುತ್ತಿದ್ದರೆ, ಆಗ ತುಂಬಾ ಹಿಂದೆಯೇ ನಾನು ಜೀವನದಲ್ಲಿ ತಿರುವನ್ನ ಪಡೆದಿರುತ್ತಿದ್ದೆ. ಹಿಂತಿರುಗಿ ಬರಲು ಸಾಧ್ಯವಾಗುತ್ತಿತ್ತು. ಅಂಥ ಪಾಪರಹಿತ ಉಜ್ವಲ ಹೆಣ್ಣು ಮನೀಷ. ಆದರೆ ಅವಳು ನನ್ನನ್ನು ಇನ್ನೂ ಗಾಢವಾದ ಅಂಧಕಾರದ ದಿಕ್ಕಿಗೆ ತಳ್ಳಿಬಿಟ್ಟಳು. ಮನೀಷಳಿಂದ, ಅಸಹಾಯಕ ಭಾವದಿಂದ ಸೋತಾಗ ನನಗನಿಸಿತ್ತು, ಇನ್ನು ಈ ಜನ್ಮದಲ್ಲಿ ನನ್ನಿಂದ ಬೇರಿನ್ನ್ಯಾರನ್ನು ಪ್ರೀತಿಸಲು ಸಾಧ್ಯವಿಲ್ಲ. ಪ್ರೀತಿಸಲು ನಾನೊಬ್ಬ ಅಯೋಗ್ಯ. ಆ ರೀತಿ ಮನೀಷ ಅಪಮಾನ ಮಾಡದೇ ಇರುತ್ತಿದ್ದರೆ ನಾನು ಕಳೆದ ವರ್ಷ ಪೂಜಾ ಸಂದರ್ಭದಲ್ಲಿ ಆ ಸಂತಾಲ ಕನ್ಯೆಯೊಡನೆ ಭಯಂಕರವಾದ ಹಗರಣದೊಳಗೆ ಸಿಕ್ಕಿ ಹಾಕಿಕೊಳ್ಳುತ್ತಲೇ ಇರಲಿಲ್ಲ.

ಆದರೆ ಅದನ್ನ ವ್ಯರ್ಥ ಪ್ರೇಮ ಎಂದು ಹೇಳಲೂ ಆಗುವುದಿಲ್ಲ. ಮನೀಷಳ ಪ್ರೇಮಪಾಶಕ್ಕೆ ಬೀಳಲೂ ನನ್ನಿಂದ ಸಾಧ್ಯವಾಗಲಿಲ್ಲ. ಮನೀಷಳನ್ನ ಯಾವಾಗ ಕಂಡರೂ, ಅವಳು ಬಹಳ ಆತ್ಮೀಯವಾಗಿ ಹೃದಯಕ್ಕೆ ತೀರಾ ಸಮೀಪಳಾಗಿ ಬಂದು ಮಾತನಾಡಿಸುತ್ತಿದ್ದಳು. ಇದೇನು ಶರ್ಟಿನ ಗುಂಡಿ ಕಿತ್ತುಹೋಗಿದೆ, ನೋಡೋಣ ಇರಿ, ಹಾಗಾದ್ರೆ ಎಲ್ಲವನ್ನ ಕಿತ್ತು ಹಾಕಿಬಿಡ್ತೀನಿ – ಹೀಗೆಂದು ಮನೀಷಿ ಪಟಪಟನೆ ನನ್ನ ಎಲ್ಲಾ ಗುಂಡಿಗಳನ್ನು ಕಿತ್ತುಹಾಕಿ ಬಿಡುತ್ತಿದ್ದಳು. ನಾನು ಅವಳನ್ನು ಹೊಡೆಯಲೆಂದು ಕೈ ಎತ್ತಿದರೆ ಅವಳೆಲ್ಲಿ ? ಯಾವಾಗ ನೋಡಿದ್ರೂ ಇದೇ ತರಹ. ಪುನಃ ಒಂದೆರಡು ತಿಂಗಳು ನೋಡದೇ ಇದ್ದರೆ ಮನೀಷ ಅದರ ಬಗ್ಗೆ ಏನೊಂದು ಮಾತುಕತೆಯಾಡುತ್ತಿರಲಿಲ್ಲ. ಇಷ್ಟು ದಿನ ಎಲ್ಲಿದ್ದಿರಿ ಅಂತಲೂ ವಿಚಾರಿಸುತ್ತಿರಲಿಲ್ಲ. ಅದಲ್ಲದೆ ಗುಂಪಿನಲ್ಲಲ್ಲದೆ ಒಂಟಿಯಾಗಿ ಮನೀಷಳನ್ನು ಕಾಣುವ ಸುಯೋಗವೂ ನನಗಿರಲಿಲ್ಲ. ನನ್ನ ಸ್ನೇಹಿತ ಅರುಣನ ತಂಗಿ ಮನೀಷ. ಸುಮ್ಮನೆ ಅವರ ಮನೆಗೆ ಹೋಗಿ, ಅರುಣನನ್ನ ಬಿಟ್ಟು ಸುಮ್ಮನೆ ಮನೀಷಳನ್ನೆ ಕಾಣಲು ಸಾಧ್ಯವೇ ? ಏನೇ ಆದರೂ ನಾನು ಹಳ್ಳಿಯ ಹುಡುಗನ ಈ ಸಂಸ್ಕಾರವನ್ನು ಎಷ್ಟು ಮಾಡಿದ್ರು ಬಿಡಲು ಸಾಧ್ಯವಾಗಿರಲಿಲ್ಲ. ಒಂದು ಸಲ ಒಬ್ಬನೇ ಅರುಣನ ಮನೆಗೆ ಹೋಗಿದ್ದೆ. ಅರುಣ

ಹಾಗೂ ಅವನ ಹೆಂಡತಿಯೊಡನೆ ಮಾತುಕತೆಯಾಡಿದ್ದೆ. ಆದರೆ ಅದೇನೋ ಒಂದು ರೀತಿಯ ನಾಚಿಕೆ ನನ್ನನ್ನಾವರಿಸಿ ಬಿಡುತ್ತಿತ್ತು. ಬಾಯ್ತೆರೆದು ಒಂದು ಸಲವೂ ಸ್ವಾಭಾವಿಕವಾಗಿ ಮನೀಷ ಎಲ್ಲಿ ಎಂದು ಕೇಳಲು ಸಾಧ್ಯವಾಗುತ್ತಿರಲಿಲ್ಲ. ಉದ್ರಿಕ್ತನಾಗಿ ಒಂದೇ ಸಮನೆ ಬಾಗಿಲ ಕಡೆಯೇ ನೋಡುತ್ತಲಿರುತ್ತಿದ್ದೆ. ಆದರೆ ಆ ದಿನಗಳಲ್ಲಿ ಒಂದು ಸಲವೂ ಮನೀಷಳನ್ನು ಕಾಣಲಾಗಿರಲಿಲ್ಲ. ಎಂದೋ ಒಂದು ದಿನ ಅವರ ಮನೆಗೆ ಫೋನ್ ಮಾಡಿದ್ದೆ. ದೇವರ ದಯೆಯಿಂದ ಮನೀಷ ಫೋನ್ ಎತ್ತಿಕೊಂಡಿದ್ದಳು. ನನ್ನ ದನಿಯನ್ನ ಗುರುತು ಹಿಡಿಯುತ್ತಲೇ ಕೆಲವು ಕ್ಷಣ ಬಿಟ್ಟು ವ್ಯಂಗ್ಯವಾಗಿ ಕೇಳಿದ್ದಳು, ಅಣ್ಣನ ಹತ್ತಿರಾನೇ ಮಾತನಾಡ್ಬೇಕು ಅಲ್ವ? ನಾನು ಮಾತನಾಡೋದಿಲ್ಲ. ಇಲ್ಲ ನಿನಗೇ ಎಂದೆ. ಮನೀಷ ನಗುತ್ತ ಹೇಳಿದ್ದಳು, ಆಹಾ! ಎಷ್ಟೊಂದು ಸೌಭಾಗ್ಯ ನನ್ನದು? ತುಂಬಾ ಹೊತ್ತಾಯ್ತು ಅಂತ ಕಾಣುತ್ತೆ, ಇರಿ ಅಣ್ಣನ್ನ ಕರೀತೀನಿ ಎಂದು ಫೋನ್ ಕೆಳಗಿಟ್ಟಿದ್ದಳು.

ಒಬ್ಬಳನ್ನೆ ಕಾಣಬೇಕೆಂಬ ಹುಚ್ಚಿನಿಂದ ಯುನಿವರ್ಸಿಟಿ ಎದುರು ನಿಂತು ಅವಳಿಗಾಗಿ ಕಾದಿದ್ದೆ. ಮನೀಷ ಆಗ ಆರನೇ ವರ್ಷದ ಪೊಲಿಟಿಕಲ್ ಸೈನ್ಸ್ ಓದುತ್ತಿದ್ದಳು. ಬಿಡುವು ಸಿಕ್ಕ ತಕ್ಷಣ ಹುಡುಗ ಹುಡುಗಿಯರ ಗುಂಪು ಹೊರಬಂದಿತು. ಬಸ್ ಸ್ಟಾಪಿನಲ್ಲಿ ಮನೀಷಳೇ ನನ್ನನ್ನು ಮೊದಲು ಕಂಡಳು. ಯಾವೊಂದು ಸಂಕೋಚ ಹಾಗೂ ಹೆದರಿಕೆ ಇಲ್ಲದೆ, ನೋಡುತ್ತಲೇ ಸಹಜವಾದ ಪರಿಚಯದ ನಗೆ ಬೀರಿದ್ದಳು. ಆನಂತರ ಕತ್ತು ಹೊರಳಿಸಿ ಹಿಂದಿನ ಗುಂಪಿನ ಕಡೆ ನೋಡಿ ಹೇಳಿದ್ದಳು, ಯಾವ ಹುಡುಗಿ? ಯಾವ ಹುಡುಗೀ ಅನ್ನೋದನ್ನ ನನಗೆ ತೋರಿಸಿಬಿಡಿ.

ನಾನೆಂದೆ ಏನು?

ಯಾವ ಹುಡುಗಿಗೋಸ್ಕರ ನಿಂತಿದೀರಾ ಹೇಳಿ? ನಾನೂ ನೋಡಿಟ್ಟುಕೊಳ್ತೀನಿ, ಒಂದು ವೇಳೆ, ನನಗವಳ ಪರಿಚಯವಿದೆಯಾ ಅಂತ ನೋಡ್ತೀನಿ....

ಮನೀಷ ನಾನು ನಿನಗಾಗಿಯೇ ನಿಂತಿದ್ದೇನೆ.

ಅವಳು ಬಂದಿಲ್ಲಾಂತ ಕಾಣುತ್ತೆ. ಸರಿ ಅವಳ ಹೆಸರನ್ನಾದ್ರೂ ಹೇಳಿ.

ನಿಜವಾಗಿಯೂ ನಾನು ನಿನಗೋಸ್ಕರ ಸುಮ್ಮನೆ ನಿಂತಿದೀನಿ.

ಇದೇ ನೋಡಿ, ಕೇಳಿ ಸಂತೋಷವಾಗುತ್ತೆ. ಸರಿ ಹಾಗಾದ್ರೆ ನನ್ನನ್ನು ಮನೆ ತಲುಪಿಸಿ ಬರುವಿರಂತೆ.

ಮನೆಗೆ ಹೋಗುವ ಮೊದಲು ಸ್ವಲ್ಪ ಚಹ ಕುಡಿಯೋಣ.

ಯಾವುದಾದರೂ ಚಹಾದಂಗಡಿ....

ನಾನು ಈಗಲೇ ಮನೆಗೆ ಹೋಗಬೇಕು. ನಡೀರಿ ಮನೆಗೆ ಹೋಗೋಣ.

ಸ್ವಲ್ಪ ಹೊತ್ತು ಎಲ್ಲಾದರೂ ಕುಳಿತುಕೊಳ್ಳೋಣವೇ?

ಮನೆಗೆ ನಡೀರಿ ಅಲ್ಲಿ ಮನೇಲಿ ಚಹಾ ಕುಡಿದರಾಗದೆ? ಓ ಅಲ್ಲಿ ಬಸ್ ಬರುತ್ತಿದೆ. ಮನೆಗೆ ಹೋಗುತ್ತಲೇ ಮನೀಷ ಕಿರುಚಿ ಹೇಳಿದಳು, ಅತ್ತಿಗೆ ನಿನ್ನ ಮೈದುನ ಬಂದಿದ್ದಾನೆ, ಚಹಾ ಕುಡೀಬೇಕಂತೆ. ಅವನು ಚಹಾ ಕುಡಿಯಲಿ, ಇಲ್ಲವೇ ಮಾತನಾಡ್ತಾ ಇರಲಿ. ನಾನು ಈಗ ಪರ್ಮಿತಾಳ ಮನೆಗೆ ಹೊರಟೆ.

ನನ್ನನ್ನು ಮಹಡಿ ಮೇಲಿನ ಕೋಣೆಯಲ್ಲಿ ಕುಳ್ಳಿರಿಸಿ, ಮನೀಷ ವಿಡಂಬನೆಯ ನಗೆ ನಕ್ಕು ಹೇಳಿದಳು, ಅತ್ತಿಗೆ ಜೊತೆ ಮಾತನಾಡ್ತಾ ಇರಿ. ಈ ಬಿಸಿಲಿನಲ್ಲಿ ನಿಮ್ಮ ಮುಖ ಹೇಗೆ ಆಗ್ಹೋಗಿದೆ ನೋಡಿ, ಫ್ಯಾನಿನ ಕೆಳಗೆ ಬಂದು ಕುಳಿತುಕೊಳ್ಳಿ. ನಾನು ಇನ್ನು ಬರ್ತೀನಿ.

ಆ ದಿನ ನಾನು ತೀರಾ ಪೆದ್ದನಾಗಿ ಬಿಟ್ಟಿದ್ದೆ. ಅರುಣನ ಹೆಂಡತಿ, ಆಗಿನ್ನೂ ನಿದ್ದೆಯಿಂದೆಚ್ಚೆತ್ತಿದ್ದಳು. ಆಕೆಯ ಇನ್ನು ಅನೇಕ ಕೆಲಸ ಕಾರ್ಯಗಳು ಇನ್ನೂ ಹಾಗೇ ಬಾಕಿ ಉಳಿದಿದ್ದವು. ಕೃತ್ರಿಮ ಭಾವದಿಂದ ಆತ್ಮೀಯತೆ ತೋರಿಸಿ ಆಕೆ ಅಂದಳು, ಸ್ವಲ್ಪ ಕೂತಿರಿ, ಹೊರಟು ಹೋಗಿ ಬಿಡಬೇಡ್ರಿ. ಆದರೆ ನಾನಿನ್ನೂ ಈಗ ಬಚ್ಚಲ ಮನೆಯಿಂದ ಬರ್ತಿದೀನಿ. ಚಹ ಕೊಟ್ಟು ಹೋಗ್ತೀನಿ. ಆ ಕೋಣೆಯಲ್ಲಿ ಒಂಟಿಯಾಗಿ ಕುಳಿತು ಚಹ ಸೇವಿಸುವಾಗ ನನಗೆ ತುಂಬಾ ಮುಜುಗರವಾಯಿತು. ಅಲ್ಲಿಂದೆದ್ದು ಹೊರಟು ಬಿಡಬೇಕೆಂದೆನಿಸಿದರೂ, ಸಾಧ್ಯವಾಗಲಿಲ್ಲ. ಮನೀಷ ಇನ್ನೊಮ್ಮೆ ಆ ಕೋಣೆಗೆ ಬರಲೇ ಇಲ್ಲ.

ಮನೀಷಳಿಗಾಗಿ ನನ್ನನ್ನು ನಾನೇ ಯೋಗ್ಯನನ್ನಾಗಿಸಿಕೊಳ್ಳಲು ಪ್ರಯತ್ನಪಟ್ಟಿದ್ದೆ. ಆಗ ನಾನು ಬೇಕೆಂದೇ ಎರಡು ಡಬ್ಬಲ್ ಕಫ್ ಶರ್ಟ್‌ಗಳನ್ನು ಹೊಲಿಸಿಕೊಂಡೆ. ಸಾಧಾರಣವಾಗಿ ನಾನು ಶರ್ಟಿನ ತೋಳುಗಳನ್ನು ಮಡಿಚಿಕೊಳ್ಳುತ್ತಿದ್ದೆ ಅಥವಾ ಅರೆತೋಳಿನ ಶರ್ಟ್ ಹಾಕಿಕೊಳ್ಳುತ್ತಿದ್ದೆ. ಆದರೆ ಡಬ್ಬಲ್ ಕಫ್ ಶರ್ಟಿನ ತುಂಬು ತೋಳುಗಳನ್ನು ಬಿಚ್ಚಿ, ಹರಳಿನ ಸ್ಟೀಲಿನ ಗುಂಡಿ ಲಗತ್ತಿಸಿದ ಶರ್ಟು ತೊಟ್ಟಾಗ ಥಟ್ಟನೆ ಮನಸ್ಸಿಗೆ ತುಂಬಾ ಸಮಾಧಾನವಾಯಿತು. ಎರಡೂ ತೋಳುಗಳನ್ನು ಬಿಡಿಸಿಟ್ಟುಕೊಳ್ಳುವುದರಲ್ಲಿ ಖಂಡಿತವಾಗಿಯೂ ಮನಸ್ಸಿಗೆ ಶಾಂತಿ ಇದೆ. ಅದನ್ನ ನಾನು ತಿಳಿದುಕೊಂಡದ್ದು ಕೇವಲ ಒಂದೆರಡು ದಿನಗಳ ಹಿಂದಷ್ಟೆ. ಅದರ ಮೊದಲು ಶರ್ಟಿನ ತೋಳುಗಳನ್ನು ಬಿಚ್ಚಿ ಅಥವಾ ಮಡಿಚಿಟ್ಟುಕೊಳ್ಳುವುದರಲ್ಲಿ ಯಾವೊಂದು ತೊಂದರೆ ಇಲ್ಲ ಎಂದು ನನಗೆ ಅನ್ನಿಸಿರಲೇ ಇಲ್ಲ. ಆದರೆ ಅವಿನಾಶ ಹಾಗೂ ಪರೀಕ್ಷಿತ ಟ್ಯಾಕ್ಸಿ ಡ್ರೈವರನ ಜೊತೆ ಹೊಡೆದಾಡಿ ಪೊಲೀಸ್ ಸ್ಟೇಷನ್ನಿನಲ್ಲಿ, ಜೈಲಿನಲ್ಲಿ, ಅವರಿಬ್ಬರೂ ನಡುವೆ ನಿಂತು, ನಾನೂ, ತಾಪಸ್ ಹಾಗೂ ಶೇಖರ ಸಂದರ್ಶಕರ ಬೆಂಚಿನ ಮೇಲೆ ಕುಳಿತು ವಕೀಲರ ವಾದ ಕೇಳುತ್ತಿದ್ದೆವು. ಅದೇ ಸಮಯಕ್ಕೆ ಸಮವಸ್ತ್ರ ಧರಿಸಿದ ಕೋರ್ಟಿನ ವ್ಯಕ್ತಿಯು ನನ್ನೆದುರು ಬಂದು ಸಿಡುಕಿ ಹೇಳಿದ, ನೀವು ಎದ್ದೇಳಿ. ಹೊರಗೆ ಹೋಗಿ. ನಾನು ಪ್ರಶ್ನಿಸಿದೆ, ಏಕೆ?

ಹೊರಗೆ ಬನ್ನಿ, ನಡೆಯಿರಿ ಇಲ್ಲಿಂದ.

ಮೊದಲಿಗೆ ನಾನು ಹೆದರಿಕೊಂಡು ಬಿಟ್ಟಿದ್ದೆ. ಏಕೆಂದರೆ ಟ್ಯಾಕ್ಸಿಯ ಹೊಡೆದಾಟದ ಗುಂಪಿನಲ್ಲಿ ನಾನು ಶಾಮೀಲಾಗಿದ್ದೆ, ಆದರೆ ಪೊಲೀಸರು ಬರುವ ಮೊದಲೇ ಓಟ ಕಿತ್ತುಬಿಟ್ಟಿದ್ದೆ. ಟ್ಯಾಕ್ಸಿವಾಲಾ ಕೆಟ್ಟ ಭಾಷೆಯನ್ನು ಪ್ರಯೋಗಿಸಿದಾಗ, ನಾನೇ ಮೊದಲು ಕೆಳಗಿಳಿದು ಹೋಗಿ ಅವನ ಮೀಟರನ್ನ ಎರಡು ಸಲ ಕೆಳಗಿಳಿಸಿ ಪುನಃ ಮೇಲಕ್ಕೆತ್ತಿದ್ದೆ. ಈಗ ಗೊತ್ತಾಗಿ, ನನ್ನನ್ನು ವಿಚಾರಣೆ ಮಾಡ್ತಾರೋ ಏನೋ ಎಂದು. ಆದರೆ ವಿಷಯ ಅದಲ್ಲ. ನನ್ನ ಶರ್ಟಿನ ತೋಳುಗಳು ಸುತ್ತಲ್ಪಟ್ಟಿದ್ದವು. ಹಾಗೂ ಕುತ್ತಿಗೆಯ ಬಳಿ

ಗುಂಡಿ ತೆರೆದಿತ್ತು. ನ್ಯಾಯಾಧೀಶರ ಮುಂದೆ ಈ ರೀತಿ ಕುಳಿತುಕೊಳ್ಳುವುದು ಮರ್ಯಾದೆ ಅಲ್ಲ. ಕೇಳಿ ನನ್ನ ಮನಸ್ಸಿಗನ್ನಿಸಿತು ನಾನು ಕಲಿಯೋದು ಇನ್ನೂ ಬೇಕಾದಷ್ಟಿದೆ. ವಿದ್ಯೆಗೆ ಕೊನೆಯೇ ಇಲ್ಲ. ನ್ಯಾಯಾಧೀಶರ ಹಿಂದಿನ ಗೋಡೆಯ ಮೇಲೆ ಮಹಾತ್ಮಾಗಾಂಧಿಯವರ ಚಿತ್ರ ತೂಗು ಹಾಕಿದ್ದರು. ನೋಡಿ ಮನಸ್ಸಿನಲ್ಲೇ ವಂದಿಸಿ ಕೋರ್ಟಿನಿಂದ ಎದ್ದು ಹೊರಬಂದಿದ್ದೆ.

ಏನಾದರಾಗಲಿ ಉಡುಪಿನ ವಿಷಯದಲ್ಲಿ ಕೋರ್ಟಿನಲ್ಲಿ ಸರಿಯಾಗಿ ಪಾಠ ಕಲಿತಂತಾಯಿತು. ಮನೀಷ ಬಳಿ ಹೋಗಲೆಂದು ನಾನು ಗಮನವಿಟ್ಟು ಗಡ್ಡ ಬೋಳಿಸಿಕೊಂಡು ಕೈತುಂಬಾ ಹಣವಿಟ್ಟುಕೊಂಡು, ಪ್ರತಿಯೊಂದಕ್ಕೂ ಗುಂಡಿ ಇರುವ ಝಗ ಝಗಿಸುವ ಬಿಳಿ ಶರ್ಟ್ ತೊಟ್ಟು, ಕೆಲವು ದಿನಗಳಿಂದ ಸರಿಯಾದ ಸಮಯಕ್ಕೆ ಮಲಗಿ ಎದ್ದು ಮಾಡಿದ್ದುದರ ಫಲವಾಗಿ, ಕಣ್ಣಿನ ಹತ್ತಿರದ ಕಪ್ಪು ಕಲೆ ಹೋಗಿಸಿಕೊಂಡು ಇಡೀ ಶರೀರದಲ್ಲಿ ಚಂದನ ಸಾಬೂನಿನ ಸುವಾಸನೆ ಇರುವಂತೆ ಮಾಡಿಕೊಂಡು ಅವಳಲ್ಲಿ ಹೊರಟೆ. ಮನೀಷ ಸದಾ ಸಿಲ್ಕ್ ಸೀರೆ ಉಟ್ಟು, ಮಾತು ಮಾತಿಗೆ ತನ್ನಿಂದ ಮಾಸಿದ ಉಡುಪನ್ನು ಸ್ವಲ್ಪವೂ ಸಹಿಸಲಾಗೋದಿಲ್ಲ ಎಂದು ಏಕೆ ಹೇಳುತ್ತಿದ್ದಳು ? ಪ್ರತಿ ದಿನ ಒಗೆದ ಬಟ್ಟೆ ತೊಡಲಾರಂಭಿಸಿದ್ದರಿಂದ ನನ್ನ ಮನಸ್ಸು ಕ್ರಮೇಣ ಮುದಗೊಂಡಿತ್ತು. ಆ ಸಮಯದಲ್ಲಿ ಮನೀಷಳನ್ನು ಪಡೆಯಬೇಕೆಂಬ ಬಯಕೆ ತೀವ್ರವಾಗಿ ಬಿಡುತ್ತಿತ್ತು. ಪ್ರೇಮದಲ್ಲಿ ನನಗೆ ಮನೀಷ ತೀವ್ರವಾಗಿ ಅವಶ್ಯಕ. ಹಾಗೂ ಶರೀರದಲ್ಲೂ ಕೂಡಾ. ಮನೀಷಳ ಪ್ರತಿಯೊಂದು ವ್ಯವಹಾರ ಸ್ಪಷ್ಟವಾದದ್ದು. ಯಾವ ವಿಷಯದಲ್ಲೇ ಆಗಲಿ ಎರಡು ರೀತಿಯಲ್ಲಿ ನೋಡೋದೇ ಇಲ್ಲ. ಆದರೂ ಮನೀಷ ನನ್ನನ್ನು ಗೊಂದಲಕ್ಕೀಡು ಮಾಡಿಬಿಟ್ಟಿದ್ದಳು. ಮನೀಷಳನ್ನು ನಾನು ಇಷ್ಟಪಡುತ್ತೇನೆ. ಈ ವಿಷಯವನ್ನು ಹೇಳುವ ಸುಯೋಗವನ್ನು ಅವಳು ನನಗೆ ಏನು ಮಾಡಿದರೂ ಕೊಡಲಿಲ್ಲ. ಈ ವಿಷಯವನ್ನು ನಾನು ಅವಳಿಗೆ ಹೇಳಿದ ಮೇಲೂ, ಒಂದು ವೇಳೆ ಅವಳು ನನ್ನನ್ನ ಉಪೇಕ್ಷಿಸಿದ್ದರೆ, ಆಗಲೂ ಅದಕ್ಕೊಂದು ಅರ್ಥವಿರುತ್ತಿತ್ತು. ವ್ಯರ್ಥ ಪ್ರೇಮಿಯಾಗಿದ್ದರೂ ನನಗೆ ಚಿಂತೆ ಇರಲಿಲ್ಲ. ಹೆಂಗಸರು ತಮ್ಮ ಪ್ರೇಮಿಯನ್ನು ಕೂಡಾ ಮರೆತುಬಿಡ್ತಾರೆ, ಆದರೆ ಯಾರನ್ನು ಉಪೇಕ್ಷಿಸುತ್ತಾರೋ ಅವರನ್ನ ಜೀವಮಾನದಲ್ಲಿ ಮರೆಯೋದಿಲ್ಲ. ಮನೀಷಳ ಜೀವನದಲ್ಲೋ ಅಥವಾ ಮನದಲ್ಲೋ, ನನ್ನ ಒಂದು ಪ್ರಭಾವ ಬೀರಲೆಂದು ಕಾತುರನಾಗಿದ್ದೆ. ಏಕೋ ಏನೋ ಗೊತ್ತಿಲ್ಲ.

ಯಾವಾಗಲೂ ನೋಡಿದ್ದೇನೆ. ಗುಂಪಿನಲ್ಲಿ ಮನೀಷಳ ವ್ಯವಹಾರ ಯಾವ ರೀತಿ ಎಂದರೆ ಅವಳು ನನ್ನ ಪ್ರತೀಕ್ಷೆಯಲ್ಲೇ ಇರುತ್ತಿದ್ದಳು. ಒಂದು ದಿನ ನಾವು ಅನೇಕರು ಅರುಣನ ಮನೆಯಲ್ಲಿ ಕುಳಿತಿದ್ದೆವು. ಮನೀಷ ಕೋಣೆಯೊಳಗೆ ಬಂದಳು. ಕೈಯಲ್ಲಿ ಹಣಿಗೆ ಇತ್ತು. ಆಗ ಅವಳು ತಲೆ ಬಾಚಿಕೊಳ್ಳುತ್ತಿದ್ದಳು. ನನ್ನ ಬಳಿ ಬಂದು ಹಣಿಗೆಯನ್ನು ನೇರವಾಗಿ ನನ್ನ ಕೂದಲಿನ ನಡುವೆ ಒತ್ತಿ ಬಾಚುತ್ತ ಹೇಳಿದಳು. ಅಯ್ಯೋ ಇಷ್ಟು ಒಣಗಿದ ಕೂದಲನ್ನು ನನ್ನಿಂದ ನೋಡೋಕಾಗೋದಿಲ್ಲ.

ನನ್ನ ಅತಿ ಸಮೀಪದಲ್ಲೇ ಮನೀಷಳ ಶರೀರ. ಯಾವನೇ ಒಬ್ಬ ಪ್ರಾಣವಿರುವ

ವ್ಯಕ್ತಿ ಅವಳನ್ನ ಎದೆಗವಚಿಕೊಂಡು ಹೇಳುತ್ತಿದ್ದ, ನನಗೆ ನೀನು ಅಲಂಕಾರ ಮಾಡು, ನನ್ನನ್ನು ಓರಣವನ್ನಾಗಿಸು. ನನ್ನಿಂದ ಆ ರೀತಿ ಹೇಳಲಾಗಲಿಲ್ಲ. ಮನೀಷಳ ಶರೀರದ ವಾಸನೆ ನನ್ನ ಎದೆ ಹೊಕ್ಕರೂ, ಅವಳು ನನ್ನ ಕಣ್ಣಿಗೆ ಕಣ್ಣು ಸೇರಿಸುವುದಿಲ್ಲ. ಹಣಿಗೆಯನ್ನು ನನ್ನ ತಲೆಗೆ ಎಷ್ಟು ಜೋರಾಗಿ ಸಿಕ್ಕಿಸಿ ಬಿಟ್ಟಿದ್ದಳೆಂದರೆ, ನಾನೆಂದೆ, ಅಯ್ಯೋ ತುಂಬಾ ನೋವಾಗುತ್ತೆ. ಮನೀಷ ನಗುತ್ತ ದೂರ ಸರಿದಿದ್ದಳು.

ಒಮ್ಮೆಗೇ ಮನೀಷ ಕಾಣಿಸಲಿಲ್ಲ. ನಾನು ಒಂಟಿಯಾಗಿದ್ದಾಗೆಲ್ಲ ಮನೀಷ ಭೂಮಿಯಿಂದ ಅದೃಶ್ಯಳಾಗಿ ಬಿಡ್ತಾಳೆ. ಎಷ್ಟೋ ದಿನ ನಾನು ಬಂಧು ಬಳಗದವರ ಕಣ್ಣು ತಪ್ಪಿಸಿ ಒಂಟಿಯಾಗಿ ಅಡ್ಡಾಡಿದ್ದೇನೆ. ಅಕಸ್ಮಾತ್ ಎಷ್ಟೋ ಜನ ಕಣ್ಣಿಗೆ ಬೀಳ್ತಾರೆ. ಆದರೆ ಎಂದೂ ಆ ರೀತಿ ಮನೀಷ ಕಣ್ಣಿಗೆ ಬಿದ್ದಿರಲಿಲ್ಲ. ಮನೀಷ ಕದ್ದು ಮುಚ್ಚಿ ಮನೆಯಿಂದ ಹೊರಟು ಬೇರಿನ್ನಿತರ ರಸ್ತೆಗಳಲ್ಲೇ ಅಡ್ಡಾಡುತ್ತಾಳೆ ಅಂತ ಕಾಣುತ್ತೆ. ಅಕಸ್ಮಾತ್ ಎಂದಾದರೂ ಅವಳನ್ನು ಕಂಡಾಗ, ನನ್ನ ಜೊತೆ ಬೇರಿನ್ಯಾರಾದರೂ ಇದ್ದೇ ಇರ್ತಾರೆ ಅಥವಾ ಮನೀಷಳ ಜೊತೆಯೋ ಇನ್ಯಾರಾದರೂ ಇರ್ತಾರೆ. ಸಿನೇಮಾ ನೋಡಲು ಒಮ್ಮೆ ಹೋಗಿದ್ದಾಗ ಮನೀಷಳನ್ನು ಕಂಡಿದ್ದೆ. ಅವಳ ಜೊತೆ ಇನ್ನಿಬ್ಬರು ಸ್ನೇಹಿತರು ಹಾಗೂ ಅವಳ ಮಾವನ ಮಗಳೂ ಇದ್ದಳು. ನನ್ನನ್ನು ಕಂಡೊಡನೆ ಮನೀಷ ಹಾಯ್ ಎಂದು ಹತ್ತಿರ ಬಂದು, ಸುನೀಲ್‌ದಾ ನೀವಿವತ್ತು ನಮಗೆಲ್ಲ ತಿಂಡಿ ಕೊಡಿಸ್ಲೇಬೇಕು. ಎಷ್ಟೊಂದು ಹಸಿವಾಗ್ತಾ ಇದೆ. ಸದ್ಯ ನಿಮ್ಮನ್ನು ನೋಡಿದೆವು

ನಾನು ಮೆಲು ದನಿಯಲ್ಲಿ ಪ್ರಶ್ನಿಸಿದೆ, ನೀನೊಬ್ಬಳೇ ನನ್ನ ಜೊತೆ ಬರ್ತೀಯಾ, ಎಂದಳು. ನನ್ನಿಂದ ಒಬ್ಬಳಿಗೆ ಮಾತ್ರ ತಿಂಡಿ ಕೊಡಿಸೋಕೆ ಸಾಧ್ಯ.....

ರಾಗವಾಗಿ ನಕ್ಕು ಅವಳ ಸ್ನೇಹಿತೆಯರನ್ನು ಉದ್ದೇಶಿಸಿ, ಮನೀಷಳೆಂದಳು, ನೋಡಿದಿರಾ ಎಷ್ಟು ಜಿಪುಣರು ಅಂತ. ನನಗೊಬ್ಬಳಿಗೆ ಕೊಡಿಸ್ತಾರಂತೆ. ಇದೇನಿದು ಹಣ ಉಳಿಸೋ ಪ್ರಯತ್ನವೇ ?.....

ಬ್ಯಾಂಡೋಲ್‌ಗೆ ಪಿಕ್‌ನಿಕ್‌ಗೆಂದು ಹೋಗಿದ್ದೆ. ಎಷ್ಟು ಕರೆದರೂ ಮನೀಷ ನನ್ನೊಡನೆ ನೀರ ಧಾರೆಯೊಳಗೆ ಬರಲಿಲ್ಲ. ಹತ್ತು ಹನ್ನೆರಡು ಜನ ಗಂಡಸರು, ಹೆಂಗಸರು ಅವರಲ್ಲಿ ಮನೀಷಳು ಒಬ್ಬಳು. ಮೊಟ್ಟೆಯ ಬಿಳಿಯನ್ನು ಕೈಗೆ ಕೊಟ್ಟು ನನ್ನನ್ನು ಹಾಸ್ಯ ಮಾಡಿದಳು, ನಾನು ಅವಳ ಸೆರಗಿನಲ್ಲೇ ಕೈ ಒರೆಸಿಕೊಳ್ಳಹೋದೆ. ಅವಳು ಕಿತ್ತಳೆ ಹಣ್ಣಿನ ರಸವನ್ನು ನನ್ನ ಕಣ್ಣಿಗೆ ಹಿಂಡಿ ಬಿಟ್ಟಳು. ಆದ್ರೆ ಏನೇ ಮಾಡಿದರು ಅವಳು ನನ್ನ ಜೊತೆ ಒಂಟಿಯಾಗಿ ನೀರಿಗಿಳಿಯಲಿಲ್ಲ. ಅದಲ್ಲದೆ ಹಿಂತಿರುಗುವಾಗ ಮನೀಷ ಗಾಡಿಯಲ್ಲಿ ನನ್ನ ಪಕ್ಕದಲ್ಲೇ ಕುಳಿತಿದ್ದಳು. ಗುಂಪಿನಲ್ಲಿ ನನ್ನ ಮೈ ಅವಳ ಮೈಗೆ ತಾಕುತ್ತಿತ್ತು. ಆದರೂ ಕಣ್ಣಲ್ಲಿ ಕಣ್ಣಿಟ್ಟು ದಿಟ್ಟಿಸುತ್ತಿರಲಿಲ್ಲ. ಹೋಳೀ ಹುಣ್ಣಿಮೆಯಂದು ಬಣ್ಣ ಬಳಿಯುವ ಆವೇಶದಲ್ಲಿ ನಾನು ಮನೀಷಳ ಎದೆಯನ್ನು ಮುಟ್ಟಿ ಬಟ್ಟೆ ಮುಖ ಹಾಗೂ ಗಲ್ಲಕ್ಕೆ ಬಳಿದು, ನನ್ನ ಕೈ ಒಂದು ಕ್ಷಣ ಅವಳ ಬೌಸಿನೊಳಗೆ ಸಿಕ್ಕಿಕೊಂಡಿತ್ತು. ಪೂರ್ಣವಾದ ಬಿಸಿ ಸ್ತನ. ಆದರೂ ಮನೀಷ ಪುಳಕಿತಗೊಂಡು ನನ್ನ ಕಡೆ ನೋಡಲಿಲ್ಲ ಅಥವಾ ಸಿಟ್ಟು ಹಾಗೂ ಕೋಪ

ಯಾವುದನ್ನೂ ತೋರ್ಪಡಿಸಲಿಲ್ಲ. ಒಂದು ಕ್ಷಣ ಹೊರಗೆ ಹೋಗಿ ಇನ್ನೊಂದು ಕ್ಷಣದಲ್ಲಿ ಹಿಂತಿರುಗಿ ಬಂದು ಕೈ ತುಂಬಾ ಇದ್ದಿಲ ಮಸಿಯನ್ನು ತಂದು ನನ್ನ ಮುಖಕ್ಕೆ ಬಳಿದು, ನನ್ನನ್ನು ವಕ್ರನನ್ನಾಗಿ ಮಾಡಿ ಬಿಟ್ಟಳು. ನಂತರ ಕೇಳಿದಳು, ಈಗ ಹೇಗಿದೆ ?

ಏನು ನನ್ನ ಗತಿ ? ಏನು, ನನ್ನ ಗತಿ ಏನು ? ಇದನ್ನು ತಿಳಿಯುವುದಕ್ಕಾಗಿ ನಾನು ಬಹುಶಃ ಉನ್ಮತ್ತನಾಗಿ ಬಿಟ್ಟೆ. ಮನೀಷ ಮಗುವೂ ಅಲ್ಲ ಹುಚ್ಚಿಯೂ ಅಲ್ಲ. ಈ ಎರಡು ವರ್ಷಗಳಲ್ಲಿ ನನಗೆ ಒಮ್ಮೆಯೂ ಒಂಟಿಯಾಗಿ ಮಾತನಾಡಿಸುವ ಅವಕಾಶವನ್ನೇ ಕೊಟ್ಟಿರಲಿಲ್ಲ. ನನ್ನ ಎಲ್ಲಾ ಸಂಕೇತಗಳು, ಇಂಗಿತಗಳು, ಕೌಶಲ್ಯಗಳು, ಅಸಹಾಯಕ ಆತ್ಮಸಮರ್ಪಣೆಯ ಭಾವ, ಎಲ್ಲವನ್ನು ವ್ಯರ್ಥಮಾಡಿ, ಮನೀಷ ಕೇವಲ ಗುಂಪಿನ ಮಧ್ಯದಲ್ಲಿ ಆತ್ಮೀಯಳಾಗಿ ಬಿಟ್ಟಿದ್ದಳು. ನನಗೇನು ವ್ಯರ್ಥ ಪ್ರೇಮಿಯಾಗುವ ಯೋಗ್ಯತೆಯೂ ಇಲ್ಲವೇ ? ಆದರೆ ವ್ಯರ್ಥವಾಗಿಯಾದರೂ, ಅವಳನ್ನ ಬಯಸದೆ ಇರಲು ಸಾಧ್ಯವಾಗಲಿಲ್ಲ.

ಏನು ಮಾಡಲಿ, ಪತ್ರ ಬರೆಯೋಣವೆಂದುಕೊಂಡಿದ್ದೆ. ಆದರೆ ಹತ್ತಿರದಲ್ಲೇ ಅವರ ಮನೆ. ಯಾವಾಗ ಬೇಕೋ ಆಗ ಹೋಗಿ ನೋಡಿಕೊಂಡು ಬರಬಹುದು. ಪತ್ರ ಬರೆಯೋದೂ ಸುಮ್ಮನೆ ವ್ಯರ್ಥ. ಅದಲ್ಲದೆ ನನ್ನ ಮನದಲ್ಲಿ ಅನುಮಾನವಿತ್ತು. ಪತ್ರ ಬರೆದರೆ, ಮನೆಯವರಿಗೆಲ್ಲ ತೋರಿಸಿ ಪತ್ರ ಓದಿ ನನ್ನನ್ನು ಅಪಹಾಸ್ಯ ಮಾಡಬಹುದು ಎಂದು. ಎಂ.ಎ. ನಂತರ ಮನೀಷ ಸೋಷಿಯಲ್ ಎಜ್ಯುಕೇಷನ್ ಟ್ರೈನಿಂಗ್ ತೆಗೆದುಕೊಳ್ಳಲು ಎರಡು ತಿಂಗಳು ಹೈದರಾಬಾದಿಗೆ ಹೋಗಿದ್ದಳು. ಆಗ ಬಹಳ ಪ್ರಯಾಸಪಟ್ಟು ನಾನು ಅವಳಿಗೊಂದು ಪತ್ರ ಬರೆದಿದ್ದೆ. ಸ್ವಚ್ಛವಾದ ಸ್ಪಷ್ಟಪತ್ರ. ಆ ಪತ್ರಕ್ಕೆ ಉತ್ತರ ಬರಲೇ ಇಲ್ಲ. ಹಿಂದಿರುಗಿ ಬಂದ ಮೇಲೂ ಮನೀಷಳಲ್ಲಿ ಯಾವೊಂದು ಬದಲಾವಣೆಯೂ ಕಾಣಲಿಲ್ಲ. ನಾನು ಅರುಣನ ಮುಂದೆಯೇ ಮನೀಷಳನ್ನ ಪ್ರಶ್ನಿಸಿದ್ದೆ, ಮನೀಷ ನಿನಗೆ ಪತ್ರ ಬರೆದದ್ದಕ್ಕೆ ನೀನು ಉತ್ತರಿಸಲೇ ಇಲ್ಲ ಏಕೆ ?

ಮನೀಷ ಆಗ ತಾನು ಹೈದರಾಬಾದಿನಿಂದ ಕೊಂಡುತಂದ, ಹರಳು ಸರವನ್ನು ನೋಡುತ್ತಿದ್ದಳು. ಬೇಸರದಿಂದ ಕಣ್ಣೆತ್ತಿ ಹೇಳಿದಳು, ಅಯ್ಯೋ ನೀವು ಪತ್ರ ಬರೆದಿದ್ದಿರಾ ? ಅದು ನನಗೆ ಸಿಗ್ಲೇ ಇಲ್ಲ ? ಸಿಕ್ಕಿದ್ದರೆ ತುಂಬಾ ಚೆನ್ನಾಗಿರುತ್ತಿತ್ತು. ಪರ ಊರಿಗೆ ಹೋದಾಗ ಯಾರದಾದರೂ ಪತ್ರ ಬಂದರೆ ತುಂಬಾ ಚೆನ್ನಾಗಿರುತ್ತೆ ಅಲ್ವಾ ?

ನನಗೆ ನಾನೊಬ್ಬ ತುಚ್ಛ, ನಿಷ್ಪ್ರಯೋಜಕನೆಂಬ ಭಾವನೆ ಬಂದಿತ್ತು. ಈ ಒಬ್ಬ ಸಾಧಾರಣ ಹುಡುಗಿಯ ಮನಸ್ಸನ್ನು ಸ್ಪರ್ಶಿಸಲು ನನಗೆ ಯೋಗ್ಯತೆ ಇಲ್ಲವೇ ? ಈ ಹಿಂದೆ ನಾನು ಗೊಂಬೆಯಾಟದ ಮೂರ್ನಾಲ್ಕು ಗೊಂಬೆಗಳನ್ನು ಶೇಖರಿಸಿದ್ದೆ. ಹುಡುಗಿಯರಿಂದ ಗೊಂಬೆಯಾಟದ ವಿವರವನ್ನು ಕೂಡಾ ಕೇಳಿ ತಿಳಿದುಕೊಂಡಿದ್ದೆ. ಆದರೆ ಗೊಂಬೆಗಳಿಗೆ ಜೀವ ತುಂಬುವ ಪ್ರಯತ್ನಪಟ್ಟಿದ್ದೆ. ಆದರೆ ನನಗೆ ಮಂತ್ರವೇ ತಿಳಿಯದು. ಮನೀಷ ಬೇರಿನ್ನ್ಯಾರ ಮೇಲಾದರೂ ತನ್ನ ಪ್ರಾಣವನ್ನಿಟ್ಟಿದ್ದಾಳೆಯೋ ಅಥವಾ ಯಾವ ಕೋಟೆಯಲ್ಲಿ ಬಂದಿಯಾಗಿ ಬಿಟ್ಟಿದೆ ಅವಳ ಭ್ರಮರ ? ಅದನ್ನ ಆಲೋಚಿಸಿ ನಾನು ರಹಸ್ಯವಾಗಿ ನನ್ನ ಪ್ರಯತ್ನವನ್ನು ಪ್ರಾರಂಭಿಸಿದೆ. ಆದರೆ ಅದರ

ಬಗ್ಗೆ ಯಾವೊಂದು ಸುಳಿವೂ ಪತ್ತೆಯಾಗಲಿಲ್ಲ. ಅದಲ್ಲದೆ ಮನೀಷಳಂತೂ ಹುಡುಗಿ, ಬೇರಿನ್ಯಾರನ್ನಾದರೂ ಪ್ರೀತಿಸುತ್ತಿದ್ದರೆ, ಅದನ್ನು ಅವಳು ಮುಚ್ಚಿಡುವ ಯಾವುದೊಂದು ಕಾರಣವೂ ಇರಲಿಲ್ಲ. ಅವಳ ಕಾಲೇಜಿನ ಗಂಡು ಹುಡುಗರು ಅವಳ ಮನೆಗೇ ಬಂದು ಅವಳನ್ನು ಕರೆಯುತ್ತಿದ್ದರು. ಯಾವೊಂದು ಸಂಕೋಚವೂ ಇಲ್ಲದೆ, ಮನೀಷ ಹೊರಗಿನ ಕೋಣೆಗೆ ಬಂದು ಅವರೊಡನೆ ಕುಳಿತು ಮಾತುಕತೆಯಾಡುತ್ತಿದ್ದಳು ಅಥವಾ ಅವರೊಡನೆ ಹೊರ ಹೊರಟು ಬಿಡುತ್ತಿದ್ದಳು. ಅವಳ ಮನೆಯಲ್ಲಿ ಅವಳಿಗೆ ಸ್ವಚ್ಛಂದ ವಾತಾವರಣ, ಅವಳ ತಂದೆ ಅವಳ ಯಾವೊಂದು ಕೆಲಸಕ್ಕೂ ಅಡ್ಡಿಯನ್ನುಂಟು ಮಾಡುತ್ತಿರಲಿಲ್ಲ. ಅದಲ್ಲದೆ ಅವರು ಕಾರ್ಪೊರೇಷನ್ನಿನ ಕೌನ್ಸಿಲರಾಗಿದ್ದುದರಿಂದ ಮನೆಯ ವಿಷಯದ ಕಡೆ ಅಷ್ಟಾಗಿ ಗಮನ ಹರಿಸುತ್ತಿರಲಿಲ್ಲ. ಸಮಾಜ ಸೇವೆಯಲ್ಲೇ ನಿರತರಾಗಿರುತ್ತಿದ್ದರು. ಅರುಣ ಹಾಗೂ ಅವಳ ನಡುವೆ ವಯಸ್ಸಿನ ಅಂತರ ಹೆಚ್ಚೇನಿಲ್ಲ. ಅಣ್ಣ ತಂಗಿಯರ ವ್ಯವಹಾರ ಕೂಡಾ ಸ್ನೇಹಿತರಂತೆಯೇ. ಮನೀಷ ನನ್ನನ್ನು ಹೀನಾಯವಾಗಿ ಕಂಡು ಬಹಳ ಕಷ್ಟ ಕೊಡಲಾರಂಭಿಸಿದಳು. ನನ್ನ ಈ ಕಷ್ಟವನ್ನು ಯಾವ ಸ್ನೇಹಿತರ ಮುಂದೆಯೂ ನಾನು ಹೇಳುವಂತಿಲ್ಲ. ಈ ಒಂದು ವಿಷಯಕ್ಕಾಗಿ ನಾನು ಇತರರ ಜೊತೆಯನ್ನೇ ಬಿಟ್ಟುಬಿಟ್ಟಿದ್ದೆ, ಅಷ್ಟೇ. ಹೆಚ್ಚಾಗಿ ನನ್ನಲ್ಲಿ ಮನೀಷಳ ಬಗೆಗಿನ ಕಾತುರ ಹೆಚ್ಚುತ್ತಾ ಹೋಯಿತು. ಆಗ ನಾನು ಅರುಣ ಹಾಗೂ ಮನೀಷರ ಮನೆಗೆ ಹೋಗುವುದನ್ನು ಸಂಪೂರ್ಣವಾಗಿಯೇ ನಿಲ್ಲಿಸಿಬಿಟ್ಟೆ.

ಅನಂತರವೇ ನನಗೆ ಅರ್ಥವಾದದ್ದು, ಮನೀಷಳನ್ನು ಕಾಣದೆ ಕ್ರಮೇಣ ನಾನು ನನ್ನ ಶಕ್ತಿ ಹಾಗೂ ಮಹಿಮೆಯನ್ನು ಪುನಃ ಕಳೆದುಕೊಳ್ಳುತ್ತಿದ್ದೇನೆಂಬುದು. ಪುನಃ ನಾನು ಇಸ್ಪೀಟಿನಾಟದಲ್ಲಿ ಸೋಲಲಾರಂಭಿಸಿದೆ. ಸ್ವಲ್ಪ ಗುಂಡು ಹಾಕಿದರೂ, ಪ್ರಜ್ಞೆ ತಪ್ಪಿ ಬೀಳುವಂತಾಗುತ್ತಿತ್ತು. ರಸ್ತೆಯನ್ನು ದಾಟುವಾಗ ಒಮ್ಮೆಗೇ ಧೈರ್ಯ ಕುಸಿಯುವಂತಾಗುತ್ತಿತ್ತು. ಸಾಧಾರಣವಾಗಿ ಯಾರು ನನ್ನ ಮುಖ ನೋಡಿ ಮಾತನಾಡಲು ಧೈರ್ಯ ಮಾಡುತ್ತಿರಲಿಲ್ಲವೋ ಅಂಥವರು ಅನಾಯಾಸವಾಗಿ ನನ್ನ ಬಳಿ ಬಂದು ನನಗೆ ಅವಮಾನ ಮಾಡಲಾರಂಭಿಸಿದರು. ನನಗನ್ನಿಸತೊಡಗಿತು, ಸಂಪೂರ್ಣವಾಗಿ ನಾನು ಮನೀಷಳ ವಿಷಯವನ್ನು ಮುಚ್ಚಿಡುವುದೇ ಸೂಕ್ತ ಅಂತ.

ಅನಂತರ ಅಂದರೆ ನಾಲ್ಕೂವರೆ ತಿಂಗಳ ನಂತರ ಮನೀಷಳನ್ನು ಅಕಸ್ಮಾತ್ ಒಮ್ಮೆ ನೋಡುವಂತಾಯಿತು. ಸಂಜೆ ಒಬ್ಬನೇ ನ್ಯಾಷನಲ್ ಲೈಬ್ರರಿಯಿಂದ ಹೊರ ಬರುತ್ತಿದ್ದೆ. ಹಿಂದಿನಿಂದ ಮನೀಷ ನನ್ನನ್ನು ಕರೆದಳು. ಮನೀಷಳೂ ಲೈಬ್ರರಿಯಲ್ಲೇ ಇದ್ದಳು. ನಾನು ಶಾಂತವಾಗಿ ಅವಳನ್ನು ಪ್ರಶ್ನಿಸಿದೆ, ನೀನು ಯಾವಾಗ ಬಂದೆ ? ಅವಳೆಂದಳು, ನಾನು ಆಗಲೇ ಬಂದಿದ್ದೆ. ಮಧ್ಯಾಹ್ನದ ಮೂರರ ವೇಳೆಗೆ. ನನ್ನ ಅಂತರ್ಯ ತಥ್ ಎಂದಿತು. ಇಷ್ಟು ಹೊತ್ತು ನಾವಿಬ್ಬರು ಒಟ್ಟಿಗೆ ನ್ಯಾಷನಲ್ ಲೈಬ್ರರಿಯಲ್ಲಿದ್ದೆವು. ಆದರೆ ನಾನವಳನ್ನು ನೋಡಿರಲಿಲ್ಲ. ಈಗ ಹೊರಡುವಾಗ ಖಂಡಿತವಾಗಿಯೂ ಬೇರೆ ಯಾರಾದ್ರೂ ಸಿಗಬಹುದು. ಬಹುಶಃ ಅವಳ ಪರಿಚಯದವರೋ ಅಥವಾ ನನ್ನ ಪರಿಚಯದವರೋ, ಅವರು ಇನ್ನು ಜೊತೆ

ಬಿಡುವುದಿಲ್ಲ. ನನ್ನಲ್ಲಿ ಒಂದು ರೀತಿಯ ವಿಲಕ್ಷಣ ಬಯಕೆಯುಂಟಾಯಿತು. ಯಾವುದೋ ಒಂದು ಉಪಾಯದಿಂದ ನಾವಿಬ್ಬರೂ ಇಲ್ಲಿಂದ ಒಟ್ಟಿಗೇ ಅದೃಶ್ಯರಾಗಿ ಬಿಡಬೇಕು ಎಂದೆನಿಸಿತು.

ಸದ್ಯ ಬೇರೆ ಇನ್ಯಾರೂ ನಮಗೆ ಭೇಟಿಯಾಗಲಿಲ್ಲ. ನಾನು ಮನೀಷಳಿಗೆಂದೆ, ನೀನೀಗ ಮನೆಗೆ ಹೊರಟಿದ್ದೀಯಾ ತಾನೆ ?

ಹೌದು, ನಾನೇನೂ ಅಡ್ಡಾಡೋಕೆ ಹೊರಟಿದ್ದೀನೀಂತ ನೀವು ಅಂದುಕೊಂಡಿರಾ ಹೇಗೆ ? ನಡೀರಿ ನನ್ನನ್ನು ಬಸ್‌ವರೆಗೂ ಬಿಟ್ಟು ಬಿಡಿ.

ನಾನೆಲ್ಲಿಗೂ ಹೋಗೋದಿಲ್ಲ. ನಡಿ ಮೈದಾನ ಹೊಕ್ಕು ಬಸ್ ಸ್ಟ್ಯಾಂಡಿನವರೆಗೆ ನಡೆದೇ ಹೋಗೋಣ. ಅನಂತರ ನಿನ್ನನ್ನು ಅಲ್ಲಿಂದ ಬಸ್ ಹತ್ತಿಸಿ ಬಿಡುತ್ತೇನೆ. ಹ್ಯಾಗೆ ಹೋಗ್ತೀಯ ? ಇವತ್ತು ಸೆಖೆ ಜಾಸ್ತಿ ಅಲ್ವಾ ? ಇವತ್ತು ಒಳ್ಳೆ ಗಾಳಿ ಬೀಸ್ತಾ ಇದೆ. ಲೈಬ್ರರಿಯ ಒಳಗೆ ಒಳ್ಳೆ ನಿದ್ದೆ ಬಂದ ಹಾಗಾಗುತ್ತಿತ್ತು. ಸ್ವಲ್ಪ ಹೊತ್ತು ಇಬ್ಬರೂ ಮಾತನಾಡದೆ ನಡೆಯುತ್ತಲೇ ಹೋದೆವು. ನಾಲ್ಕೂವರೆ ತಿಂಗಳು ನಾನವಳನ್ನು ಕಂಡಿರಲಿಲ್ಲ. ಅದನ್ನು ಕುರಿತು ಮನೀಷ ಒಂದು ಮಾತೂ ಆಡಲಿಲ್ಲ. ಆದರೆ ನಾನವಳನ್ನು ಪ್ರತೀ ದಿನ ಜ್ಞಾಪಿಸಿಕೊಳ್ಳುತ್ತಿದ್ದೆ. ಮನೀಷಳ ಪ್ರತಿಯೊಂದು ಭಂಗಿ ಹಾಗೂ ವಿಷಯ ನೋಡಿದ್ರೆ, ಅವಳು ನನ್ನನ್ನು ಕಂಡು ಸಂತೋಷಗೊಂಡಂತೆಯೇ ಇತ್ತು. ಅವಳು ನಗಲಿ, ಬಿಡಲಿ, ಮನೀಷಳ ಕೆಳ ತುಟಿ ಯಾವಾಗಲೂ ನಗುತ್ತಲೇ ಇರುತ್ತದೆ. ಸ್ವಚ್ಛವಾದ ಮುಖ, ಬೆಳದಿಂಗಳಂತೆ ಭಾಸವಾಗುತ್ತದೆ. ಅದರಿಂದ ಸ್ವಲ್ಪ ಬಣ್ಣವೇ ಬದಲಾಯಿಸಿದೆ. ತಿಳಿ ಮೆರೂನ್ ಬಣ್ಣದ ಸೀರೆ ಉಟ್ಟಿದ್ದಾಳೆ. ಮನಸ್ಸಿಗೆನಿಸುತ್ತೆ ಅವಳ ಸೀರೆ ಅವಳ ದೇಹವನ್ನು ಸುತ್ತಿ ಬಳಸಿದ್ದರೂ, ಅದು ಶರೀರವನ್ನು ಮುಟ್ಟಿಲ್ಲ. ಎರಡು ಹುಬ್ಬುಗಳ ನಡುವೆ ಕೆಂಪು ಬೊಟ್ಟು ಸರಿಯಾಗಿ ಮಧ್ಯದಲ್ಲಿಲ್ಲ, ಸ್ವಲ್ಪ ಓರೆಯಾಗಿದೆ. ಬಹಳ ವೇಗವಾಗಿ ನಡೆಯುತ್ತಿದ್ದಾಳೆ. ನಡೆಯುವಾಗ ಒಮ್ಮೊಮ್ಮೆ ಕೈಯಲ್ಲಿನ ಬ್ಯಾಗನ್ನು ಮೇಲೆಸೆದು ಪುನಃ ಕೈಗೆತ್ತಿಕೊಳ್ಳುತ್ತಿದ್ದಾಳೆ. ನಾನೆಂದೆ, ನಿನ್ನ ಕೈ ನೋಡೋಣ. ಯಾವೊಂದು ಸಂಕೋಚವೂ ಇಲ್ಲದೆ ಕೈ ಮುಂದೆ ಚಾಚಿ ಮನೀಷಳೆಂದಳು, ನೋಡಿ ಯಾವ ರೀತಿ ಕೈಗಳು ಬೆವರ್ತಾ ಇದೆ ಅಂತ. ನನ್ನ ಕೈ ತುಂಬಾ ಬೆವರುತ್ತೆ.

ನಾನು ಕೈಗಳನ್ನೆತ್ತಿಕೊಂಡು ಮೂಸಿ ನೋಡಿದೆ. ನಿನ್ನ ಕೈಗಳಲ್ಲಿ ಕೂದಲಿನ ಎಣ್ಣೆಯ ವಾಸನೆ ಇದೆ, ಕೂದಲಿಗೆ ಎಣ್ಣೆ ಹಚ್ಚಿಕೊಂಡಿದ್ದೆಯಾ ?

ಮನೀಷ ಸಾಧಾರಣವಾಗಿ ಗಂಟು ಹಾಕಿಕೊಳ್ಳುವುದಿಲ್ಲ. ಕೈಯಿಂದ ಕೂದಲಿನ ರಾಶಿಯನ್ನು ನನ್ನ ಕಡೆ ಸರಿಸಿ ಹೇಳಿದಳು, ವಾಸನೆ ನೋಡಿ, ಕೇವಲ ಕೊಬ್ಬರಿ ಎಣ್ಣೆ ವಾಸನೆ.

ನಾನು ಎರಡೂ ಕೈಗಳಿಂದ ಅವಳ ಕೂದಲನ್ನೆತ್ತಿಕೊಂಡು ರಸ್ತೆಯಲ್ಲಿ ಬೇರಾರಾದರೂ ನೋಡಿದರೂ ಪರವಾಗಿಲ್ಲವೆಂದು ಅದರಲ್ಲಿ ನನ್ನ ಮುಖ ಹುದುಗಿಸಿದೆ. ನಾನೆಂದೆ, ನಿನ್ನ ಕೂದಲಿನಿಂದ ಒಂದು ರೀತಿಯ ಒಳ್ಳೆ ಸುಗಂಧದ ವಾಸನೆ ಬರ್ತಾ ಇದೆ. ಕೂದಲಿನ ನಿಜವಾದ ಗಂಧ.

ಕುಲು ಕುಲು ನಗುತ್ತ ಆವಳೆಂದಳು, ಅದೇ ನೋಡಿ, ಎಲ್ಲರ ಮೂಗೂ ಇದರ ವಾಸನೆಯನ್ನು ಗುರುತಿಸಲು ಸಾಧ್ಯವಿಲ್ಲ. ನನಗಂತೂ ಏನೋ ಕೊಳೆತು ಹೋದ ವಾಸನೆ ಬರ್ತಾ ಇದೆ.

ಖಂಡಿತವಾಗಿಯೂ ಅಂಥಾ ವಾಸನೆ ಏನಿಲ್ಲ.

ನಿಜವಾಗಿಯೂ ವಾಸನೆ ಬರ್ತಾ ಇದೆ. ರಸ್ತೆಯಲ್ಲಿ ಯಾವುದೋ ಬೆಕ್ಕೋ, ನಾಯೋ ಸತ್ತು ಕೊಳೆತು ಹೋಗಿದೆ. ಅದೋ ನೋಡಿ ಅಲ್ಲಿ.

ನಿಜವಾಗಿಯೂ ರೇಸ್‌ಕೋರ್ಸಿನ ಹತ್ತಿರ ಒಂದು ನಾಯಿ ಸತ್ತು ಬಿದ್ದಿತ್ತು. ಒಂದೆರಡು ದಿನಗಳ ಹಿಂದೆ ಗಾಡಿಗೆ ಸಿಕ್ಕಿ ಹಾಕಿಕೊಂಡಿರಬೇಕು. ಹೊಟ್ಟೆ ಸೀಳಿ ಛಿದ್ರ ಛಿದ್ರವಾಗಿ ಬಿಟ್ಟಿದೆ. ಕಣ್ಣೆರಡೂ ಇಲ್ಲ. ಬೆಳಗಿನ ಹೊತ್ತು ಎಷ್ಟು ಸಾಧ್ಯವೋ ಅಷ್ಟು ತಿಂದು ಮಿಕ್ಕದ್ದನ್ನು ಮಾರನೆಯ ದಿನಕ್ಕೆ ಮೀಸಲಿಟ್ಟು ಕಾಗೆಗಳು ಹೋಗಿವೆ. ಆ ಭೀಭತ್ಸ ದೃಶ್ಯವನ್ನು ನೋಡಲಿಕ್ಕಾಗದೇ ನಾನು ನನ್ನ ಕಣ್ಣುಗಳನ್ನು ಹೊರಳಿಸಿದೆ. ಈಗ ಅದನ್ನು ನೋಡದೇ ಇದ್ದಿದ್ದರೆ ಸಾಧ್ಯವಾಗ್ತಾ ಇರಲಿಲ್ಲವೇ ? ಅದೆಲ್ಲ ಕಣ್ಣಿಗೆ ಏಕೆ ಬೀಳುತ್ತೋ ಏನೋ ? ಮಾತನಾಡದೇ ಇಬ್ಬರೂ ಕತ್ತಲಲ್ಲಿ ಸ್ವಲ್ಪ ದೂರ ನಡೆದುಕೊಂಡು ಹೋದೆವು. ಅನಂತರ ನಾನೆಂದೆ, ಮನೀಷ ನಿನಗ್ಯಾಕೆ ಅಷ್ಟೊಂದು ಅಹಂಕಾರ.

ವಾ ! ನಿಮ್ಮ ಹತ್ತಿರ ನಾನೇನು ಅಂಥ ಅಹಂಕಾರ ತೋರಿಸಿದೆ ?

ನೀನು ನನ್ನ ಜೊತೆ ಮಾತನಾಡೋಕೇ ಇಷ್ಟಪಡೋದಿಲ್ಲ. ನೀನು ನನ್ನನ್ನು ನೋಡೋಕೆ ಇಷ್ಟಪಡೋದಿಲ್ಲ.

ನಾನು ನಿನ್ನನ್ನು ಈಗ ತಾನೇ ನೋಡಿದೆನಲ್ಲ. ನೀವೆಲ್ಲ ಎಲ್ಲೆಲ್ಲೋ ಇರ್ತೀರ.

ನೀವೆಲ್ಲ ಯಾರು ? ಕೇವಲ ನನ್ನ ಬಗ್ಗೆ ಪ್ರಶ್ನಿಸಲು ಸಾಧ್ಯವಿಲ್ಲವೇ ?

ಹೌದು. ನೀವೇ ಬಹಳ ಅಹಂಕಾರ ತೋರಿಸ್ತಿರೋದು. ತಾಪಸನ ಮದುವೆ ಆಯ್ತು ಅಂತ ಸುದ್ದಿ ಕೇಳಿದೆ.

ಹೌದು.

ನೋಡಿದಿರಾ, ನನಗೆ ಆಮಂತ್ರಣವನ್ನೇ ಕೊಡಲಿಲ್ಲ. ನಿಮ್ಮ ಮದುವೇನಲ್ಲಾದ್ರೂ ಕರೀತೀರಾ ತಾನೇ ? ಆಮೇಲೆ ಇನ್ನೇನೋ ನೆಪ ಹೇಳಬೇಡಿ.

ನಿನ್ನ ಮದುವೆ ಯಾವಾಗ ?

ಅದನ್ನೇ ಯೋಚಿಸ್ತೇದೀನಿ, ನನಗೆ ಆ ಸುದಿನ ಎಂದು ಬರುತ್ತೋ ಏನೋ ಅಂತ. ಮನೀಷ ಪುನಃ ನಕ್ಕಳು.

ನಾನು ನಕ್ಕು ಹೇಳಿದೆ, ನನ್ನ ಕಡೆ ನೋಡಲು ನಿನಗೆ ಇಷ್ಟವೇ ಆಗೋದಿಲ್ಲವೇ ?

ಮನೀಷ ಪೂರ್ತಿಯಾಗಿ ಮುಖವನ್ನು ತಿರುಗಿಸಿ ಹೇಳಿದಳು, ಇದೇ ನೋಡ್ತಾ ಇದೀನಲ್ಲ, ಆಹಾ ಎಷ್ಟು ಸುಂದರವಾದ ಮುಖ ನಿಮ್ಮದು. ನೋಡದೇ ಇರಲು ಸಾಧ್ಯವೇ ? ನಡೀರಿ ವಿಕ್ಟೋರಿಯಾ ಮೆಮೋರಿಯಲ್ ಮುಂದುಗಡೆ ಹೋಗಿ ಕುಲಫೀಮಲಯ್ ತಿನ್ನೋಣ.

ಮನೀಷಾ ತುಂಬಾ ದಿನದಿಂದ ನಿನಗೊಂದು ಮಾತು ಹೇಳೋಣ ಅಂತ

ಅಂದ್ಕೊಂಡಿದೀನಿ.

ಇಷ್ಟು ಹೊತ್ತು ಮಾತನಾಡಿದಿರಲ್ಲ. ಇನ್ನು ಒಂದು ಮಾತೇ? ನಡೀರಿ ಕುಲಫೀಮಲಯ್ ತಿನ್ನೋಣ.

ತಿನ್ನೋಣ ಅದರ ಮೊದಲು......

ಅದರ ಮೊದಲೇನು? ಆಮೇಲೆ ಆಗೋದಿಲ್ವೇ? ಏನು ಅಂಥ ವಿಷಯ ಒಮ್ಮೊಮ್ಮೆ ನೀವುಗಳು ಎಂಥಾ ಹುಡುಗಾಟ ಆಡ್ತೀರಾ ಅಂದ್ರೆ....

ಇವತ್ತು ಕೇವಲ ನನ್ನ ಸ್ವಂತ ವಿಷಯ...

ಎಷ್ಟೊಂದು ಸ್ವಾರ್ಥಿಗಳಪ್ಪಾ ನೀವು. ನಡೀರಿ ಅಲ್ಲೆ ಆ ಮುದುಕನ ಹತ್ತಿರ.

ಕುಲಫಿ ಪರ್ವ ಸಂಕ್ಷಿಪ್ತವಾಗಿಯೇ ಮುಗಿಯಿತು. ನನ್ನ ಸಿಗರೇಟೂ ಮುಗಿದಿತ್ತು. ಇದೇ ಸಂದರ್ಭದಲ್ಲಿ ನಾನು ಸಿಗರೇಟ್ ಕೊಂಡುಕೊಂಡೆ. ಬಲಗಡೆ ಹೋಗದೆ, ರೆಡ್‌ರೋಡ್ ಹಿಡಿದು ಹೋಗೋಣ ಎಂದೆ. ರಸ್ತೆ ಬಹಳ ಚೆನ್ನಾಗಿದೆ.

ರೆಡ್‌ರೋಡ್ ರಸ್ತೆ ಬಹಳ ಕತ್ತಲಿನ ರಸ್ತೆ. ಅಪರೂಪಕ್ಕೊಮ್ಮೆ ಅಲ್ಲಿ ಕಾರುಗಳು ಓಡಾಡುತ್ತವೆ. ಸಿಗರೇಟಿನ ಹೊಗೆಯನ್ನು, ಒದರಿದೊಡನೆಯೇ ಗಾಳಿ ಅದನ್ನು ಹಾರಿಸಿಕೊಂಡು ಹೋಗಿಬಿಟ್ಟಿತು. ನಾವು ಗಾಳಿಗೆ ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಿದ್ದುದರಿಂದ ಮನೀಷಳ ದೇಹದ ಉಬ್ಬು ತಗ್ಗುಗಳು ನನ್ನ ಕಣ್ಣಿಗೆ ಗೋಚರಿಸುತ್ತಿತ್ತು. ನಾನು ಗೋಪ್ಯವಾಗಿ, ಮನೀಷಳ ಕುತ್ತಿಗೆ, ಸ್ತನ ಹಾಗೂ ತೊಡೆಯ ಎರಡು ಭಾಗಗಳನ್ನು ನೋಡಬೇಕೆಂಬಾಸೆಯಿಂದ ಸ್ವಲ್ಪ ಹಿಂದೆ ಸರಿದು, ಅವಳ ಶರೀರದ ಹಿಂಭಾಗವನ್ನು ಕಣ್ಣಿಗೆ ತುಂಬಿಸಿಕೊಂಡೆ. ಮನೀಷಳನ್ನು ಅಪ್ರತಿಮ ಸುಂದರಿ ಎಂದು ಹೇಳಲಾಗದಿದ್ದರೂ ಅವಳ ಸೊಂಟದ ಭಾಗ ಸ್ವಲ್ಪ ಚಿಕ್ಕದಾಗಿರುತ್ತಿದ್ದರೆ ಚೆನ್ನಾಗಿರುತ್ತಿತ್ತು. ಕೂದಲಿನ ಉದ್ದ ಕೂಡಾ ಸ್ವಲ್ಪ ಚಿಕ್ಕದೆಂದೇ ಹೇಳಬಹುದು. ಒಂದೆರಡು ಸಣ್ಣ ದೋಷವಿಲ್ಲದಿದ್ದರೂ, ಅವಳ ರೂಪವೇನೂ ಮೋಹಿನಿಯಂತದ್ದಾಗಿ ಬಿಡುವುದಿಲ್ಲ. ಮನೀಷಳ ಬಲಕಣ್ಣಿನ ಹತ್ತಿರ ಒಂದು ಮಚ್ಚೆ ಇದೆ. ಆ ಮಚ್ಚೆ ಗುರುತನ್ನು ಪುನಃ ಪುನಃ ಚುಂಬಿಸಬೇಕೆನ್ನುವ ಬಯಕೆಯಾಗುತ್ತದೆ. ಅವಳ ಮುಖದ ಆ ಮಚ್ಚೆಯನ್ನು ನನ್ನ ಮುಖಕ್ಕೆ ಹಾಕಿಕೊಳ್ಳಬೇಕೆನ್ನುವ ಬಯಕೆಯಾಗುತ್ತದೆ. ಮನೀಷಳ ಮುಖವನ್ನು ದಿಟ್ಟಿಸಲೆಂದೇ ನಾನು ಪುನಃ ಅವಳ ಹತ್ತಿರವೇ ಸರಿದು ಬಂದೆ.

ಕೈ ಎತ್ತಿ ಹಾರುತ್ತಿರುವ, ಕೂದಲನ್ನು ಸರಿಪಡಿಸಿಕೊಳ್ಳುವ ಪ್ರಯತ್ನ ಮಾಡುತ್ತಾ ಮನೀಷಳೆಂದಳು, ಇವತ್ತು ನಡೆಯೋದಕ್ಕೆ ತುಂಬಾ ಇಷ್ಟವಾಗ್ತಾ ಇದೆ. ಎಷ್ಟೊಂದು ಸುಂದರವಾದ ರಸ್ತೆ! ಈ ರಸ್ತೆಯಲ್ಲಿ ನಾವು ಯಾವಾಗಲೂ, ಕಾರಿನಲ್ಲೇ ಹೋಗಿ ಬಿಡುತ್ತೇವೆ. ಆದರೆ ಈ ರಸ್ತೆಯಲ್ಲಿ ನಡೆಯೋದೇ ಚೆನ್ನ. ನಿಮಗಿಷ್ಟವಾಗೋದಿಲ್ವಾ?

ಹೌದು, ಆದರೆ ಇವತ್ತು ಗಾಳಿ ಸ್ವಲ್ಪ ಹೆಚ್ಚು, ಮಾತನಾಡಿದ್ರೂ ಸ್ವಲ್ಪ ಜೋರಾಗಿಯೇ ಆಡಬೇಕು.

ಮಾತನಾಡದಿದ್ದರಾಯ್ತು, ಸುಮ್ಮನೆ ಮೌನವಾಗಿ ನಡೆಯೋದೇ ಚೆನ್ನ.

ಆದರೆ ನಿನ್ನನ್ನು ಯಾವುದೋ ಒಂದು ಮಾತನ್ನು ನಾನು ಕೇಳಲೇಬೇಕು,

ನೋಡೋಣ ನಿನ್ನ ಕೈಕೊಡು.

ಗೊತ್ತಿದೆಯೋ, ಹಜಾರಿಬಾಗ್‌ನಲ್ಲಿ ಒಂದು ರಸ್ತೆ ಇದೆ, ತುಂಬಾ ಚೆನ್ನಾಗಿದೆ. ಎರಡೂ ಕಡೆ ದಟ್ಟವಾದ ಕಾಡು, ಮಧ್ಯದಲ್ಲಿ ಕಣ್ಣಾ ಮುಚ್ಚಾಲೆಯಾಡುವ ರಸ್ತೆ. ಆ ರಸ್ತೆಯಲ್ಲಿ ನಡೆಯುವಾಗ ಯಾರೂ ಯಾವ ಮಾತನ್ನು ಆಡಲೂ ಇಷ್ಟಪಡೋದಿಲ್ಲ. ವಿಭೂತಿ ಭೂಷಣ ಬಂಧೋಪಾಧ್ಯಾಯರು ಈ ಸ್ಥಳವೇ ಪ್ರಪಂಚದ ಮಿಕ್ಕೆಲ್ಲ ಸ್ಥಳಗಳಿಗಿಂತ ನಿರ್ಜನವಾದ ಸ್ಥಳ ಅಂತ ಹೇಳಿದ್ದಾರೆ. ನಾವು ನಾಲ್ಕೈದು ಜನರಿದ್ದೆವು. ನನ್ನ ಸ್ನೇಹಿತೆ ರತ್ನಳ ಗಂಡ ಹಾಗೂ ಅವಳ ಇಬ್ಬರು ಸ್ನೇಹಿತರು ಕೂಡಾ ಇದ್ದರು. ಆದರೆ ನಾವ್ಯಾರೂ ಆ ರಸ್ತೆಯಲ್ಲಿ ನಡೆಯುವಾಗ ಒಂದು ಮಾತನ್ನೂ ಆಡಲಿಲ್ಲ. ನಿಮಗೂ ಗೊತ್ತೇ ಇದೆ ನಾನು ತುಂಬಾ ವಾಚಾಳಿ ಅನ್ನೋದು. ನಾನೂ ಕೂಡಾ ಮೌನವಾಗಿಯೇ ಇದ್ದೆ. ಅರ್ಧ ಗಂಟೆ ಹೊತ್ತು ಕೇವಲ ನಮ್ಮೆಲ್ಲರ ಚಪ್ಪಲಿಯ ಶಬ್ದ ಮಾತ್ರ ಕೇಳಿ ಬರುತ್ತಿತ್ತು.

ನಾನು ಥಟ್ಟನೆ ನಿಂತು ಹೇಳಿದೆ, ಮನೀಷ ಮರಳಿನ ಮೇಲೆ ಸ್ವಲ್ಪ ಹೊತ್ತು ಕುಳಿತು ಕೊಳ್ಳೋಣವೇ ?

ಬೇಡ ಇನ್ನು ತಡ ಮಾಡೋದಕ್ಕಾಗೋದಿಲ್ಲ. ಇನ್ನು ಹೊರಡೋಣ ನಡೀರಿ, ಬಸ್ ಹತ್ತೋಣ.

ಹಾಗಾದ್ರೆ ಬಾ, ಇಲ್ಲಿ ಸ್ವಲ್ಪ ಹೊತ್ತು ಕೂತ್ಕೊಳ್ಳೋಣ.

ರಸ್ತೆಯಲ್ಲಿ ನಡೆಯುವಾಗ, ನನಗೆ ರಸ್ತೆಯಲ್ಲಿ ನಿಂತುಕೊಳ್ಳೋದು ಇಷ್ಟವಾಗೋದಿಲ್ಲ. ನಡೀತಾನೇ, ನೀವು ಹೇಳೋದನ್ನು ಹೇಳಿ.

ಮನೀಷಳ ಕೈಯನ್ನು ನಾನು ನನ್ನ ಕೈಯಲ್ಲಿ ಹಿಡಿದುಕೊಂಡಿದ್ದೆ. ಅದಕ್ಕೆ ನಿಂತೇ ಇದ್ದೆ, ಒಂದು ದೊಡ್ಡ ರೇನ್‌ಟ್ರೀ ಕೆಳಗೆ. ನನ್ನ ತುಟಿಗಳು ಕಂಪಿಸುತ್ತಿದ್ದವು. ನನ್ನ ಇಡೀ ಶರೀರದಲ್ಲಿ ಅಪಮಾನದ ಭಾವನೆ ಮಾತ್ರ. ಯಾವೊಂದು ಭಾಷೆಯೂ ಇಲ್ಲ. ಮನುಷ್ಯ ತಾನು ಬಯಸಿದ್ದನ್ನು ಥಟ್ಟನೆ ಏಕೆ ಹೇಳಲು ಸಾಧ್ಯವಾಗೋದಿಲ್ಲ ? ಈ ರೀತಿಯ ಸಂದಿಗ್ಧತೆಯಲ್ಲಿ ಇನ್ನೆಂದೂ ಸಿಕ್ಕಿ ಬೀಳಬಾರದು. ಒಮ್ಮೆ ಅವಳನ್ನು ಪ್ರಶ್ನಿಸಿ ಬಿಡಬೇಕೆಂದೆನಿಸಿತು – ನಾನು ನಿನ್ನನ್ನು ಪ್ರೀತಿಸೋದರಲ್ಲೇ ಶಾಂತಿಯನ್ನು ಪಡೆಯಲಿಚ್ಛಿಸುತ್ತೇನೆ. ನೀನು ನನಗೆ ಶಾಂತಿ ಕೊಡಲು ಇಷ್ಟಪಡುತ್ತಿಯೋ ಇಲ್ಲವೋ ಹೇಳು.

ಆದರೆ ನನಗೆ ಗೊತ್ತು, ಯಾವ ಹುಡುಗಿಯೂ ಈ ಮಾತಿಗೆ ಕುಲು ಕುಲು ನಗುವಳೆಂದು. ಮೋಸ ಎಲ್ಲ ಹೆಂಗಸರೂ ಬರೀ ಕಪಟಿಗಳು, ಮೋಸಗಾರರು. ನನ್ನಿಂದ ಇವರನ್ನು ಟ್ಯಾಕಲ್ ಮಾಡೋದು ಸಾಧ್ಯವೇ ಇಲ್ಲ ಅಂತ ಅಂದುಕೊಂಡು ಬಿಟ್ಟಿದ್ದಾರೆ. ನಾನು ಸ್ವಲ್ಪ ಅಧೀರನಾಗಿ ಹೇಳಿದೆ, ಮನೀಷ ನನ್ನ ಜೊತೆ ಇಲ್ಲಿ ಸ್ವಲ್ಪ ನಿಂತುಕೊಳ್ಳಲು ನಿನಗಿಷ್ಟವಾಗೋದಿಲ್ಲವೇ ?

ಯಾಕೆ ಇಷ್ಟವಾಗೋದಿಲ್ಲ, ತುಂಬಾ ಇಷ್ಟ. ಆದರೆ ಇನ್ನು ಮನೆಗೆ ಹೋಗಬೇಕಲ್ಲ.

ಸ್ವಲ್ಪ ಹೊತ್ತಾದ್ರೆ ಏನೂ ತೊಂದ್ರೆ ಇಲ್ಲ. ಮನೀಷ ನಿನಗೆ ನನ್ನ ಕಂಡ್ರೆ ಹೆದರಿಕೇನಾ, ನಿಜ ಹೇಳು.

ಮನೀಷ ಸಶಬ್ದವಾಗಿ ನಕ್ಕು ಹೇಳಿದಳು, ಯಾಕೆ ಭಯ ? ಯಾಕೆ ನೀವಿವತ್ತು ತೀರಾ ಪೆದ್ದು ಪೆದ್ದಾಗಿ ಆಡ್ತಿದೀರಾ, ನಿಮಗೇನಾಗಿದೆ ?

ಏನೂ ಆಗಿಲ್ಲ, ನಾನು ಇವತ್ತು ನಿನ್ನ ಜೊತೆ ಇರಲು ಬಯಸ್ತೀನಿ.

ನಿಮ್ಮ ಜೊತೇನಲ್ಲೇ ಇದೀನಲ್ಲ, ಗೊತ್ತಾಗಲಿಲ್ಲವೇ ? ಇದನ್ನೇ ರಾತ್ರಿಯ ಹೊತ್ತಿನಲ್ಲಿ ನಿಮಗೆ ಅರ್ಥ ಮಾಡಿಸಲು ಸಾಧ್ಯವಿಲ್ಲ.

ನನ್ನ ಧೈರ್ಯ ಉಡುಗಿ ಹೋಯಿತು. ನಾನು ಒಳ್ಳೆಯವನಾಗುವ ಪ್ರಯತ್ನ ಅಲ್ಲಿಗೇ ಮುಗಿದಿತ್ತು. ನಾನು ನನ್ನ ದಾರಿ ಬದಲಾಯಿಸುವ ಪ್ರಯತ್ನವೂ ಕೊನೆಗೊಂಡಿತ್ತು. ನಾನು ಬರಸೆಳೆದು ಮನೀಷಳನ್ನು, ಜೋರಾಗಿ ನನ್ನೆದೆಗೆ ಒರಗಿಸಿಕೊಂಡೆ. ಎಷ್ಟು ಜೋರಿನಿಂದ ಎಂದರೆ ಅವಳ ತಲೆ ನನ್ನ ಕೆನ್ನೆಗೆ ಒತ್ತಿತ್ತು. ರಾಕ್ಷಸ ಶಕ್ತಿಯಿಂದ ನಾನು ಅವಳನ್ನು ಬಿಗಿಯಾಗಿ ಅಪ್ಪಿಕೊಂಡಿದ್ದೆ. ನನ್ನ ಒಂದು ಕೈ ಅವಳ ಸೊಂಟವನ್ನು ಹಿಡಿದಿತ್ತು. ಎಷ್ಟು ಗಾಢವಾಗಿ ಹಿಡಿದಿದ್ದೆನೆಂದರೆ, ಅವಳ ಮೃದುವಾದ ಸೊಂಟದಲ್ಲಿ ನನ್ನ ಐದೂ ಬೆರಳುಗಳೂ ಒತ್ತಿದ್ದವು. ಪಟಪಟನೆ ಅವಳ ಬೆನ್ನೆಲುಬು ಮುರಿದು ಬೀಳುತ್ತೇನೋ ಎಂದೆನಿಸಿತು. ಇನ್ನೊಂದು ಕೈಯಿಂದ ನಾನು ಜೋರಾಗಿ ಮನೀಷಳ ಮುಖ ಎತ್ತಿ ಹಿಡಿದೆ, ಮನೀಷ ಮೊದಲು ತುಟಿ ತೆರೆಯಲಿಲ್ಲ. ನಾನು ಬುಲ್‌ಡೋಜರನ ಚಕ್ರದಂತೆ ಎರಡೂ ತುಟಿಗಳಿಂದ ನನ್ನ ಉಸಿರು ಕಟ್ಟುವ ತನಕ ಅವಳನ್ನ ಚುಂಬಿಸಿದೆ. ನೋಡೋಣ ಅವಳಿಗೆ ಈ ಭಾಷೆಯಾದ್ರೂ ಅರ್ಥವಾಗುತ್ತದೆಯೋ ಎಂದು.

ನಾನು ಬಿಟ್ಟು ಬಿಡುತ್ತಲೇ, ಮನೀಷ ಸೀರೆಯ ಸೆರಗಿನಿಂದ ಮೊದಲು ತುಟಿಗಳನ್ನು ನಂತರ ಇಡೀ ಮುಖವನ್ನು ಒರೆಸಿಕೊಂಡಳು. ಆನಂತರ ಬಹಳ ಶಾಂತಳಾಗಿ ಹೇಳಿದಳು, ಛೇ, ಇದೇನಿದು ಹುಚ್ಚಾಟ ಮಾಡಿದಿರಿ ?

ನನಗೆ ಉತ್ತರ ಹೇಳುವ ಮನಸ್ಸಾಗಲಿಲ್ಲ. ನಾನು ಆಗಲೂ ಇನ್ನು ಏದುಸಿರು ಬಿಡುತ್ತಲಿದ್ದೆ. ಕಣ್ಣುಗಳು ಸುತ್ತುತ್ತಿದ್ದವು. ಮನೀಷ ಯಾವ ರೀತಿ ನಿಂತಿದ್ದಳೆಂದರೆ ಅವಳು ನಿರ್ಜೀವ ವಸ್ತುವಿನಂತಿದ್ದಳು. ನನ್ನಿಂದ ದೂರದ ಗಿಡ, ಮರ, ಕತ್ತಲು ಮತ್ತು ಆಕಾಶ ಯಾವುದನ್ನೂ ನೋಡಲಾಗುತ್ತಿರಲಿಲ್ಲ. ಕೇವಲ ಮನೀಷಳನ್ನೇ, ನೋಡುತ್ತಲಿದ್ದೆ. ಅವಳ ಕ್ಷೀಣವಾದ ಮೂರ್ತಿ, ಮಣ್ಣಿನ ಸ್ಪರ್ಶ ಮಾಡಿದರೂ, ಆಕಾಶವನ್ನು ಮುಟ್ಟುತ್ತಿರುವಂತೆ ಕಂಡಿತು. ನಾನು ಪುನಃ ಅವಳನ್ನು ಚುಂಬಿಸಲೆಂದು, ಅವಳನ್ನು ಹಿಡಿದುಕೊಳ್ಳಲು ಹೋದಾಗ, ಮನೀಷ ಬೇಗ ಕೈ ಎತ್ತಿ ತನ್ನ ತುಟಿ ಮುಚ್ಚಿಕೊಳ್ಳುವ ಮೊದಲು, ನನ್ನ ತುಟಿಗಳನ್ನು ಕೈಯಿಂದ ಮುಚ್ಚಿದಳು. ಅವಳ ಮೃದುವಾದ ಕೈಗಳು ನನ್ನ ತುಟಿಯನ್ನು ಬಂಧಿಸಿಬಿಟ್ಟಿದ್ದವು. ಕಾತುರದಿಂದ ಅವಳೆಂದಳು, ಇನ್ನು ನಿಮ್ಮ ಈ ಹುಚ್ಚುತನವನ್ನು ನಾನು ಮುಂದುವರೆಸಲು ಬಿಡೋದಿಲ್ಲ. ನೋಡ್ತಾ ಇರಿ ಇದರಿಂದ ನಿಮಗೇ ಮುಂದೆ ತೊಂದರೆಯಾಗುತ್ತೆ.

ನನಗೆ ಎಷ್ಟು ಬೇಕಾದರೂ, ತೊಂದರೆಯಾಗಲಿ, ನೀನು ಯಾಕೆ ನನಗೆ ಅಷ್ಟೊಂದು ಕಷ್ಟ ಕೊಡ್ತಿದೀಯಾ ?

ನಾನು ನಿಮಗೆ ಕಷ್ಟ ಕೊಡ್ತಿದೀನೆಯೇ ? ಹಾಗಾದ್ರೆ ಅದನ್ನು ನೀವ್ಯಾಕೆ ನನಗೆ

ಹೇಳಲಿಲ್ಲ ? ನಿಜವಾಗಿಯೂ, ನಾನು ನಿಮಗೆ ಕಷ್ಟವನ್ನು ಕೊಟ್ಟಿದ್ದೀನಾ ?

ನನ್ನ ತಲೆ ಕೆಟ್ಟಿತ್ತು. ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಕೊನೆ ಘಳಿಗೆಯಲ್ಲಿ ಸೋತು ಹೋಗುವ ಮೊದಲು ಎಲ್ಲರೂ ಷಂಡರಾಗಿ ಬಿಡುತ್ತಾರೆ. ನಾನು ಕರ್ಕಶವಾಗಿ ಕಿರುಚಿ ಹೇಳಿದೆ, ನಿನಗೇನೂ ಅರ್ಥವಾಗ್ತಾ ಇಲ್ಲ ಅಲ್ವಾ ? ನಾನು ಮನೀಷಳ ಬಿಳುಪಾದ ಕೆನ್ನೆಗೆ ಬಾರಿಸಿದ್ದೆ. ಇಷ್ಟೊಂದು ಜೋರಾಗಿ ಹೊಡೆಯಬೇಕೆಂದುಕೊಂಡಿರಲಿಲ್ಲ. ಆದರೆ ಕಪಾಳಕ್ಕೆ ಹೊಡೆಯಬೇಕೆಂದು ಹಿಂದೆಂದೂ ಅನ್ನಿಸಿರಲಿಲ್ಲ. ನಾನು ನೇರವಾಗಿ ಮನೀಷಳನ್ನು ದಿಟ್ಟಿಸುತ್ತಲಿದ್ದೆ. ಮನೀಷಳೂ ನನ್ನನ್ನು ತುಂಬಾ ಹೊತ್ತು ದಿಟ್ಟಿಸುತ್ತಲೇ ಇದ್ದಳು. ಅವಳ ಮುಖದಲ್ಲಿ ಒಂದಿನಿತೂ ಸಿಟ್ಟಿಲ್ಲ. ಕಣ್ಣುಗಳೆರಡೂ ಎಷ್ಟೊಂದು ಸ್ನಿಗ್ಧ ಎಂದರೆ ಇನ್ನೇನು ಕಣ್ಣಿಂದ ಕಣ್ಣೀರು ಉಕ್ಕಿ ಹರಿಯುತ್ತೋ ಏನೋ ಎಂದೆನಿಸುತ್ತಿತ್ತು. ಇಲ್ಲ ಅನುಮಾನವೇ ಇಲ್ಲ. ಸ್ವಲ್ಪ ಹೊತ್ತು ಮಾತ್ರ ಅವಳ ಕಣ್ಣಿಂದ ಕಣ್ಣೀರು ಬಂದಿತ್ತು. ನಿಧಾನವಾಗಿ ಅವಳು ಮೆಲ್ಲನೆ ಹೇಳಿದಳು, ಖಂಡಿತವಾಗಿಯೂ, ನೀವಿವತ್ತು ಹುಚ್ಚರಾಗಿ ಬಿಟ್ಟಿದೀರಾ ? ನೀವು ಇಷ್ಟೊಂದು ಮುಗ್ಧರು ಅಂತ ನನಗನ್ನಿಸಿರಲೇ ಇಲ್ಲ. ಇಷ್ಟು ಜೋರಾಗಿ ಯಾರಾದರೂ ಬೇರೆಯವರನ್ನು ಹೊಡೀತಾರಾ ? ನಿಜವಾಗಿಯೂ ನನಗೆ ತುಂಬಾ ನೋವಾಗಿದೆ.

ಮನೀಷ ನನ್ನ ದೋಷವಾದ್ರೂ ಏನು ? ನಾನು ಯಾವ ರೀತಿಯಲ್ಲಿ ಅಯೋಗ್ಯ ?

ಒಳ್ಳೆ ಹುಚ್ಚರ ಸಹವಾಸವಾಯ್ತು, ನಾನು ನಿಮ್ಮ ದೋಷದ ಬಗ್ಗೆ ಹೇಳ್ತಿದ್ದೀನಾ ? ನಾನು ಕೇವಲ ನೀವು ಹುಡುಗಾಟವಾಡ್ತಾ ಇದೀರ ಅಂತ ಹೇಳಿದೆ.

ನೀನು ಎಲ್ಲ ವಿಷಯವನ್ನು ತಿರಸ್ಕರಿಸಿ ಬಿಡ್ತೀಯ. ನನಗೆ ನನ್ನ ಅಯೋಗ್ಯತೆಯ ಬಗ್ಗೆ ಗೊತ್ತಾಗಲೇಬೇಕು. ನೀನು ನನಗೆ ಉತ್ತರ ಕೊಡು.

ಇನ್ನು ನಾನು ಯಾವ ಮಾತನ್ನೂ ಕೇಳೋದೂ ಇಲ್ಲ, ಉತ್ತರಾನೂ ಕೊಡೋದಿಲ್ಲ. ಈ ಸಲ ನಾನು ಮನೆಗೆ ಹೊರಟೆ. ನೀವು ಏನು ಸಿಟ್ಟು ಮಾಡಿಕೊಂಡ್ರೂ ಸರಿ, ನನ್ನನ್ನು ಈ ಕತ್ತಲಲ್ಲಿ ಒಂಟಿಯಾಗಿ ಬಿಟ್ಟು ಹೊರಟುಹೋಗ್ಬೇಡಿ. ನನ್ನನ್ನು ಬಸ್‌ಸ್ಟಾಪ್‌ವರೆಗೆ ತಲುಪಿಸಿಬಿಡಿ.

ಮನೀಷ ಬಲವಂತ ಮಾಡಿ, ನನ್ನನ್ನು ಒಲಿಸುವ ರೀತಿಯಲ್ಲಿ ಹೇಳಿದಳು, ನಡೀರಿ, ನಡೀರಿ, ನೀವು ಒಳ್ಳೆಯವರು ತಾನೆ ? ಸುಮ್ಮ ಸುಮ್ಮನೆ ನೀವು ನನ್ನ ಮೇಲೆ ಸಿಟ್ಟು ಮಾಡಿಕೊಳ್ತೀರಾ.

ಅವಳು ಯಾವ ಲೋಹದಿಂದ ಮಾಡಲ್ಪಟ್ಟಿದ್ದಾಳೋ ಗೊತ್ತಾಗಲಿಲ್ಲ. ಹೆಂಗಸೋ ಅಥವಾ ರಕ್ಕಸಿಯೋ ? ಈ ಇಪ್ಪತ್ತು ನಾಲ್ಕು ವರ್ಷದ ಶರೀರದಿಂದ ಜೀವನವನ್ನು ಸವೆಸಿ ಅವಳು ಬಯಸೋದಾದ್ರು ಏನನ್ನ ? ಮನೀಷಳ ದೇಹವೇನೂ ತಣ್ಣಗಾಗಿಲ್ಲ. ನಾನು ಅವಳ ಎದೆ ಮುಟ್ಟಿ ನೋಡಿದೆ. ಚಳಿಗಾಲದ ಬೆಕ್ಕಿನ ತರಹ ಅವಳ ಎದೆ ಮೃದು ಹಾಗೂ ಬಿಸಿ. ಹೋಳಿಯ ದಿನ ನಾನು ಚಕಿತನಾಗಿ ಅವಳ ಎದೆ ಮುಟ್ಟಿದ ಮೇಲೆ ಅವಳ ಮುಖದಲ್ಲಿ ಲಜ್ಜೆಯ ಭಾವನೆ ಲವಲೇಶವೂ ಇರಲಿಲ್ಲ. ಆದರೆ

ಅವಳ ಉದ್ವೇಗಗೊಂಡ ಎದೆ ಲಜ್ಜೆ ಅಥವಾ ಆವೇಗವನ್ನು ಅನುಭವಿಸಿತೋ ಇಲ್ಲವೋ ಎನ್ನುವುದರ ಬಗ್ಗೆಯೂ ಆ ಕ್ಷಣದಲ್ಲಿ ನನಗೆ ಸುಳಿವು ಸಿಕ್ಕಲಿಲ್ಲ. ಇವತ್ತು ಅವಳನ್ನು ನಾನು ಚುಂಬಿಸಿದಾಗಲೂ, ನಾನು ಅವಳ ಒಣಗಿದ ನಾಲಿಗೆಯನ್ನು ಮುಟ್ಟಿದ್ದೆ. ಆದರೂ ಏಕೆ ಈ ರೀತಿ ಸ್ಪರ್ಶಾಹೀನ ಭಾವದಿಂದ ನನ್ನನ್ನು ನಿರುತ್ತರನನ್ನಾಗಿ ಮಾಡಿಬಿಟ್ಟಳು. ಕೊನೆಯವರೆಗೂ ನಾನು ಸೋಲುವಂತೆ ಮಾಡಿದಳು. ಅವಳಿಗದರಿಂದ ಯಾವ ಆನಂದ ದೊರೆಯುತ್ತೆ? ಇಷ್ಟು ಚೋಟುದ್ದದ ಹುಡುಗಿ ಮುಷ್ಠಿಯೊಳಗೆ ಇಟ್ಟುಕೊಂಡರೆ, ಎಲ್ಲಿ ಹೋಗ್ತಾಳೆ ಅನ್ನೋದು ಗೊತ್ತಾಗೋದಿಲ್ಲ. ಹಾಗಿದ್ದರೂ ನನ್ನನ್ನು ಅಸಹಾಯಕನನ್ನಾಗಿ ಮಾಡಿಬಿಟ್ಟಿದ್ದಾಳೆ. ವಾಸ್ತವವಾಗಿ ಎಲ್ಲ ಹುಡುಗಿಯರೂ ಕಾಳಿಯ ಪ್ರತಿಮೆಯಾಗಬಯಸ್ತಾರೆ. ಅವರಿಗೆ ಕೊರಳಲ್ಲಿ ನರಮುಂಡದ ಮಾಲೆ ಧರಿಸದಿದ್ದರೆ ಸುಖ ಸಿಗೋದಿಲ್ಲ.ತನ್ನ ಕೊರಳಲ್ಲಿ ಹೈದರಾಬಾದಿನಿಂದ ಕೊಂಡು ತಂದ ಹರಳಿನ ಸರವನ್ನು ಹಾಕಿಕೊಂಡಿದಾಳೆ, ಅವಳಿಗೂ ರುಂಡಮಾಲೆ ಬೇಕಂತೋ ಏನೋ?

ಏನೊಂದೂ ಮಾತನಾಡದೆ, ನಾನು ಮನೀಷಳೊಂದಿಗೆ ಮೈದಾನದ ಉಳಿದ ಭಾಗವನ್ನು ನಡೆದು ಬಂದೆ. ಅವಳ ತರಹದ ಒಬ್ಬ ಹಸನ್ಮುಖಿ ಹೆಣ್ಣನ್ನು ನಾನು ಸುಮ್ಮನಿರುವಂತೆ ಮಾಡಿಬಿಟ್ಟೆನಲ್ಲ ಎಂದು ನನಗೆ ಅವಳ ಬಗ್ಗೆ ಅನುಕಂಪ ಉಂಟಾಯಿತು. ಆದರೆ ನನ್ನಲ್ಲಿನ ದೋಷ ಅಥವಾ ತಪ್ಪು ಎಲ್ಲಿದೆ ಎನ್ನುವುದನ್ನು ನನ್ನಿಂದ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ನಾನು ಭಾವಿಸಿದ್ದೆ, ಒಬ್ಬ ಹೆಣ್ಣಿನಿಂದ ಇನ್ನೊಬ್ಬ ಹೆಣ್ಣನ್ನು ಹೊರತರಬಹುದೂಂತ. ಆದರೆ ಅದು ಸುಲಭ ಸಾಧ್ಯವಾಗಲಿಲ್ಲ ಮತ್ತು ಯಾವ ರೀತಿ ಎಂಬುದೂ ಅರ್ಥವಾಗಲಿಲ್ಲ. ಆದರೆ ಒಂದು ವಿಷಯವಂತೂ ಸ್ಪಷ್ಟವಾಯಿತು. ಹೃದಯ ಗಿದಯ ಯಾವುದೂ ಇಲ್ಲ. ಒಬ್ಬ ಹುಡುಗಿಯೊಳಗಿನ ಇನ್ನೊಬ್ಬ ಹುಡುಗಿಯನ್ನು ನೋಡಲಾಗೋದಿಲ್ಲ ಹಾಗೂ ಅದನ್ನವಳು ತೋರಿಸದ ಹೊರತು ನಮಗದು ಕಾಣೋದೂ ಇಲ್ಲ. ಮಧುಪುರದಲ್ಲಿ ಒಂದು ಹೂವಿನಿಂದ ತುಂಬಿದ, ಶಿರೀಷ ಮರವನ್ನು ನೋಡಿ ನನಗೆ ಬಹಳ ಇಷ್ಟವಾಗಿತ್ತು. ಈ ಮರದಲ್ಲೂ ನಾರಿಯ ಸೌಂದರ್ಯವಿದೆ ಎನ್ನುವುದರ್ಥವಾಗಿತ್ತು. ಸಣ್ಣ ಸಣ್ಣ ನಾಯಿ ಮರಿಗಳು ಆಟವಾಡುವುದನ್ನು ಒಮ್ಮೆ ಕಂಡಿದ್ದೆ. ಆ ಆಶ್ಚರ್ಯದ ಚಿತ್ರದಲ್ಲೂ ನಾರಿಯ ಚಿತ್ರವಿತ್ತು. ಅಷ್ಟೇ ಏಕೆ ಒಂದು ಬೆಡ್‌ಶೀಟ್ ಮೇಲಿನ ಹೊಸ ಡಿಸೈನಿನಲ್ಲೂ, ಒಂದು ರಮಣೀಯ ರೂಪದ ಪ್ರಭಾವವಿರುತ್ತದೆ. ಯಾವುದೇ ಒಂದು ಸುಂದರ ವಸ್ತುವನ್ನು ನೋಡಿದಾಗಲೆಲ್ಲಾ ಅದರಲ್ಲಿ ನಾನು ಸರ್ವಜನನಿ ನಾರೀ ಹೊರ ಹೊಮ್ಮುವುದನ್ನು ಕಾಣ್ತೇನಿ. ಆದರೆ ಒಬ್ಬ ಹೆಣ್ಣಿನಲ್ಲಿ ನನಗೆ ಅದೇ ನಾರೀ ರೂಪವನ್ನು ಕಾಣಲು ಸಾಧ್ಯವಾಗುವುದಿಲ್ಲವೇ? ಆದರೆ ಇನ್ನೂ ಸಾಧ್ಯವಾಗಿಲ್ಲ. ಮನೀಷಳನ್ನ ಪಡೆಯಲಾಗಲಿಲ್ಲ.

ಮನೀಷಳನ್ನು ಅನಂತರವೂ ಕಂಡಿದ್ದೆ. ಏನೊಂದು ಆಕ್ಷೇಪಣೆಯನ್ನು ಮಾಡಲಿಲ್ಲ. ವ್ಯವಹಾರವನ್ನು ದೊಡ್ಡ ಹಗರಣವನ್ನಾಗಿ ಮಾಡಲಿಲ್ಲ. ಆದರೆ ಸಾಮಾನ್ಯವಾದ ದೂರತ್ವವನ್ನು ಇರಿಸಿಕೊಂಡಿದ್ದಳು. ಮನೀಷಳ ರಹಸ್ಯವನ್ನು

ತಿಳಿದುಕೊಳ್ಳಲು ನಾನು ಇನ್ನು ಎಷ್ಟು ದಿನ ಕಾಯಬೇಕೋ ಏನೋ ಯಾರಿಗೆ ಗೊತ್ತು? ಆದರೆ ಮನೀಷಳನ್ನು ಒಂಟಿಯಾಗಿ ಕಾಣಬೇಕೆಂಬ ಆಸೆ ನನ್ನಲ್ಲಿ ಉಂಟಾಗಲೇ ಇಲ್ಲ. ಮನೀಷಳ ಆ ಸಂಜೆಯ ವ್ಯವಹಾರದ ನಂತರ ನನಗೆ ಅವಮಾನವಾದುದರ ಬಗ್ಗೆ ತುಂಬಾ ದಿನ ಕೋಪವಿತ್ತು. ಮುಂದಿನ ಮೂರ್ನಾಲ್ಕು ತಿಂಗಳು ಹೆಂಗಸರನ್ನು ನಾನು ಅಸಹ್ಯ ಹಾಗೂ ತಿರಸ್ಕಾರ ದೃಷ್ಟಿಯಿಂದ ನೋಡತೊಡಗಿದೆ. ನಾನು ಶರೀರವನ್ನು ಬಿಚ್ಚಿ ಅಥವಾ ಸೀಳಿ, ಶರೀರದ ಬಗ್ಗೆ ತಿಳಿದುಕೊಳ್ಳಬಹುದೆಂದುಕೊಂಡಿದ್ದೆ. ಆದರೆ ಇನ್ನೆಲ್ಲಿಯ ರಹಸ್ಯ. ಶರೀರವೆಂದರೆ ಕೇವಲ ಶರೀರ, ಕೇವಲ ಶರೀರವನ್ನೆ ಭೋಗಿಸಲು ಒಮ್ಮೊಮ್ಮೆ ಇಷ್ಟವಾಗೋದಿಲ್ಲ. ಕೈಯ ಹತ್ತಿರ ಇನ್ನು ಒಂದು ಶರೀರವಿರಬೇಕೆಂಬ ಇಚ್ಛೆ ಉಂಟಾಗುತ್ತದೆ. ಕೈ ಆಗ ಆ ಶರೀರದ ನಾನಾ ಅಂಗಗಳನ್ನು ನೋಡಬಯಸುತ್ತೆ, ಆಗ ಹಿತವೆನಿಸುತ್ತೆ. ಆಗ ಸ್ವಂತ ಅಂಗಗಳೊಂದಿಗೆ ಪ್ರತ್ಯೇಕ ಅಂಗವೂ ಸೇರಿಕೊಂಡು ಬಿಡುತ್ತದೆ. ಆವರೆ ಎಂದೂ ಆ ರೀತಿಯ ಬಯಕೆ ಉಂಟಾಗುವುದಿಲ್ಲ. ಮನಸ್ಸಂತೂ 'ನಾನು ಅದನ್ನು ಸಂಪೂರ್ಣವಾಗಿ ಕಂಡಿದೀನಿ ಅಂತ, ಅದರ ರೂಪ ನನ್ನನ್ನು ತಿರಸ್ಕರಿಸದೆ ಪವಿತ್ರ ಎಂದೆನಿಸುತ್ತೆ' ಎಂದು ಹೇಳೋದಿಲ್ಲ. ಜನರು ಇಷ್ಟೊಂದು ಚಳಿಯಲ್ಲೂ ಬೇಗನೆ ಎದ್ದು ಟೈಗರ್ ಹಿಲ್‌ನ ಸೂರ್ಯೋದಯವನ್ನು ನೋಡಲು ಏಕೆ ಹೋಗ್ತಾರೆ? ಹೆಚ್ಚು ಮಾತ್ಯಾಕೆ ನಾನೇ ಹೇಳ್ತೀನಿ. ನಾನು ಟೈಗರ್ ಹಿಲ್‌ನ ಸೂರ್ಯೋದಯದಲ್ಲಿ ಸ್ಪಷ್ಟವಾಗಿ ನಾರೀ ಚಿತ್ರವನ್ನು ಕಂಡಿದ್ದೆ. ಆದರೆ ಯಾವುದೇ ನಾರಿಯಲ್ಲಿ ಸೂರ್ಯೋದಯದ ಶೋಭೆಯನ್ನು ನೋಡಬೇಕೆಂದು ನನಗಿನ್ನೂ ಆಸೆ ಇದೆ.

ದಾದಾಮೊಶಾಯ್‌ರ ಮೃತ್ಯುವಿನ ನಂತರ, ಕೆಲವು ದಿನ ನಾನು ಮನೆಯಿಂದ ಹೊರ ಹೋಗಲೇ ಇಲ್ಲ. ತುಂಬಾ ದಿನಗಳ ನಂತರ ಕೌಟುಂಬಿಕ ವಾತಾವರಣದಲ್ಲಿ ನಾನು ಕೆಲವು ಸಮಯ ಕಳೆದೆ. ದೊಡ್ಡಕ್ಕ, ಅಮ್ಮ ಅಪ್ಪನ್ನ ಚಿಕ್ಕಪ್ಪನ ಮನೆಯಿಂದ ತನ್ನ ಮನೆಗೆ ಕರೆದುಕೊಂಡು ಬಂದಿದ್ದಳು. ಶೋಕದ ಮನೆಯಾದರೂ ಸ್ವಲ್ಪ ಉತ್ಸವದ ಛಾಯೆ ಇದ್ದೇ ಇತ್ತು. ಅಕ್ಕನ ಮಕ್ಕಳು, ತುಂಬಾ ದಿನಗಳ ಮೇಲೆ ಅಜ್ಜ ಅಜ್ಜಿಯನ್ನು ಕಂಡದ್ದರಿಂದ ತುಂಬಾ ಸಲಿಗೆ ಪ್ರೀತಿ ವಿಶ್ವಾಸ ತೋರಿಸಲಾರಂಭಿಸಿದರು. ಅವರನ್ನು ತಡೆಯುವವರಾರು? ಅಮ್ಮ ಮೊದಲಿಗೆ ತುಂಬಾ ಅತ್ತೂ ಕರೆದೂ ಮಾಡಿದ್ದಳು. ಆದರೆ ಅದರ ನಡುವೆಯೂ ಒಮ್ಮೆ ಅಳುವುದನ್ನು ನಿಲ್ಲಿಸಿ ನನ್ನನ್ನು ಪ್ರಶ್ನಿಸಿದ್ದಳು, ನಿನ್ನ ಗಲ್ಲದ ಮೇಲೆ ಏನೋ ಗಾಯವಾಗಿದೆ?

ನಾನೆಂದೆ, ಅಕ್ಕನ ಮನೆ ಬಚ್ಚಲ ಮನೆ ತೀರಾ ಜಾರಿಕೆ, ಸ್ವಲ್ಪ ಕಾಲು ಜಾರಿತು ಅಷ್ಟೆ.

ಅಮ್ಮ ಎಂದಳು, ಬಾ ಇಲ್ಲಿ, ಈ ಕಡೆ ಬಂದು ನನ್ನ ಹತ್ತಿರ ಸ್ವಲ್ಪ ಕುಳಿತುಕೋ.

ಅಮ್ಮನ ಮುಖ ತೀರಾ ಬಾಡಿತ್ತು. ಕೇವಲ ರೋಗದಿಂದೊಂದೇ ಅಲ್ಲ. ಚರ್ಮ ಕೂಡಾ ಶರೀರದಿಂದ ಬೇರ್ಪಟ್ಟಂತಿತ್ತು. ನಾನೆಂದೆ, ಅತ್ತಿಗೆ ನಿನ್ನನ್ನು ಚೆನ್ನಾಗಿ ನೋಡ್ಕೊಳ್ತಾ ಇರ್ಲಿಲ್ಲ ಅಂತ ಕಾಣುತ್ತೆ. ನಿನ್ನ ಆರೋಗ್ಯ ಏಕೆ ಇಷ್ಟು ಹದಗೆಟ್ಟಿದೆ?

ಯಾಕೆ ಚೆನ್ನಾಗಿ ನೋಡಿಕೊಳ್ಳೋದಿಲ್ಲ. ಸರಮಾ ತುಂಬಾ ಒಳ್ಳೆ ಹುಡುಗಿ. ಹೌದು

ನೀನ್ಯಾವಾಗ ಅದನ್ನೆಲ್ಲ ಮಾಡೋದು? ಜನ ನನ್ನನ್ನು ಅಂತಾರೆ. ನಾನು ನಿನಗೆ ಯಾವೊಂದು ವ್ಯವಸ್ಥೆಯನ್ನು ಮಾಡಲಾಗಿಲ್ಲ. ಅಪ್ಪ ನಿನ್ನ ಹೆಂಡತಿಯ ಮುಖವನ್ನು ಒಂದು ವೇಳೆ ನೋಡಲಾಗುತ್ತಿದ್ದಿದ್ದರೆ?....

ನಿಮ್ಮಪ್ಪನ್ನ ನಾನೇ ಸರಿಯಾಗಿ ನೋಡಲಾಗಲಿಲ್ಲ. ಇನ್ನು ನನ್ನ ಹೆಂಡತಿಯ ಮುಖ.

ಒಂದು ಸಲವೂ ನೀನು ಆಸ್ಪತ್ರೆಗೆ ಹೋಗಲಿಲ್ಲ. ಅವರು ನಿನ್ನನ್ನು ತುಂಬಾ ಪ್ರೀತಿಸ್ತಾ ಇದ್ದರು.

ನಾನೂ ಕೂಡಾ ಅವರನ್ನು ಪ್ರೀತಿಸುತ್ತಿದ್ದೆ, ಈಗಲೂ ಅಷ್ಟೆ. ಆದರೆ ಅಮ್ಮ ನನಗೆ ಆಸ್ಪತ್ರೆಗೆ ಹೋಗೋದಕ್ಕೆ ಒಂದು ಚೂರೂ ಇಷ್ಟವಾಗೋದಿಲ್ಲ. ಎಷ್ಟೋ ದಿನ ಹೋಗಬೇಕೂಂತ ಅಂದ್ಕೋತಾ ಇದ್ದೆ. ಆದರೆ ಆಸ್ಪತ್ರೆಯ ಬಾಗಿಲವರೆಗೂ ಹೋಗಿ ಹಿಂತಿರುಗಿ ಬಂದಿದ್ದೇನೆ. ನನ್ನಿಂದ ನರಳುವಿಕೆ, ಕಾಯಿಲೆ ಕಸಾಲೆ ನೋಡೋದಕ್ಕಾಗೋದಿಲ್ಲ.

ನನಗೇನಾದ್ರೂ ಕಾಯಿಲೆಯಾದ್ರೆ ನೀನು ನನ್ನನ್ನು ನೋಡೋಕೆ ಬರೋದಿಲ್ವೆ. ಎಂದೋ ಒಂದು ದಿನ ಸತ್ತು ಹೋಗ್ತೀನಿ, ನಿನಗದು ಗೊತ್ತೂ ಆಗೋದಿಲ್ಲ.

ಅದೇನು ಮಾತಮ್ಮ ನಾನು ಅದನ್ನು ಹೇಳಲಿಲ್ಲ. ಆಸ್ಪತ್ರೆಗೆ ಹೋದರೆ ಕೇವಲ ನಮ್ಮವರೇ ಅಲ್ಲ, ಇನ್ನೂ ಅನೇಕರು ಕಣ್ಣಿಗೆ ಬೀಳ್ತಾರೆ.

ನಿನ್ನ ಆರೋಗ್ಯ ಚೆನ್ನಾಗಿದೆಯಾಪ್ಪಾ?

ದೊಡ್ಡಕ್ಕ ಇದೀಗ ಕೋಣೆಯೊಳಗೆ ಬಂದಿದ್ದಳು. ಅವಳೆಂದಳು, ಅವನ ವಿಷಯ ಇನ್ನು ಮಾತನಾಡಬೇಡಮ್ಮ. ಏನೋ ಹಗರಣ ಮಾಡ್ಕೊಂಡು ಅಡ್ಡಾಡ್ತಿದ್ದ. ದೇಹದ ಬಗ್ಗೆ ಏನು ಯೋಚ್ನೆ ಮಾಡ್ತಾನೋ ಇಲ್ವೋ, ಅದಕ್ಕೆ ಕಣ್ಣು ಮುಂದೇನೇ ಇಟ್ಕೊಂಡಿದೀನಿ.

ನಾನೆಂದೆ, ಖಂಡಿತವಾಗಿಯೂ ಅಮ್ಮ ನೀನವಳ ಮಾತನ್ನ ನಂಬಬೇಡ. ನಾನು ಚೆನ್ನಾಗೇ ಇದೀನಿ. ನನ್ನ ಬಗ್ಗೆ ಎಳ್ಳಷ್ಟೂ ಯೋಚನೆ ಮಾಡಬೇಡ. ನಾನೇ ಯಾವಾಗಲೂ ನಿನ್ನ ಬಗ್ಗೆ ಯೋಚಿಸ್ತಾ ಇರ್ತೀನಿ.

ನನ್ನ ಬಗ್ಗೆ ನೀನೇನೂ ಯೋಚಿಸಬೇಡ. ಒಂದು ವೇಳೆ ಸತ್ಯವಾಗಿಯೂ, ಯೋಚಿಸ್ತಾ ಇದ್ರೆ ಆಗ ಇವತ್ತು ಈ ರೀತಿ ಯಾರೂ ಇರ್ತಿರಲಿಲ್ಲ.

ಅಮ್ಮ ನೀವು ಕೆಲವು ದಿನ ಸ್ಥಳ ಬದಲಾಯಿಸಬೇಕು. ನನ್ನ ಸ್ನೇಹಿತ ಒಬ್ಬ ಇದ್ದಾನೆ. ಕಣ್ಣಿನ ಡಾಕ್ಟರ್, ತುಂಬಾ ಒಳ್ಳೆಯವನು. ಈ ಸಲ ಅವನ ಹತ್ತಿರ ಕರ್ಕೊಂಡು ಹೋಗಿ, ನಿನ್ನ ಕಣ್ಣುಗಳನ್ನು ಪರೀಕ್ಷಿಸಿಕೊಂಡು ಬರ್ತೀನಿ.

ನಾನು ಸೋಮವಾರವೇ ಬಹರಾಂಪುರಕ್ಕೆ ಹೊರಡಬೇಕು. ಸರಮಾಳಿಗೆ ಹೆರಿಗೆ ದಿನ ಅವಳನ್ನು ಒಂಟಿಯಾಗಿ ಬಿಟ್ಟು ಬಂದಿದ್ದೀನಿ.

ಈ ಒಂದು ವರ್ಷದಲ್ಲಿ ಪುನಃ ಮಗುವೆ?

ಅಮ್ಮ ಥಟ್ಟನೆ ನಡುಗಿ ಹೇಳಿದಳು, ಗೊತ್ತಾಯ್ತಾ ಮಗು ನಿನಗೆ ಗಾಯತ್ರಿ ವಿಷಯ, ಅದೇ ಮುಖ್ಯೋಪಾಧ್ಯಾಯರ ಮನೆಯ ಗಾಯತ್ರಿ? ಆರು ತಿಂಗಳ

ಗರ್ಭಿಣಿ, ಕೆಲವು ದಿನಗಳ ಹಿಂದಷ್ಟೆ ವಠಾರದವರನ್ನೆಲ್ಲ ಆರತಿ ಊಟಕ್ಕೆ ಕರೆದಿದ್ದರು. ಆಮೇಲೆ ಸ್ವಲ್ಪ ದಿನದಲ್ಲೇ ಏನು ಅನಾಹುತವಾಗಿ ಹೋಯ್ತೊ. ಕಳೆದ ತಿಂಗಳು ಅವಳ ಗಂಡ ಅಪರೇಶ ತೀರಿಕೊಂಡು ಬಿಟ್ಟ.

ಅಕ್ಕನಿಗೆ ಪೆಟ್ಟು ಬಲವಾಗಿ ಬಿದ್ದಿತ್ತು.

ಅಕ್ಕ ಬಹಳ ಆಶ್ಚರ್ಯದಿಂದ ಕೇಳಿದಳು, ಅಯ್ಯೋ ಏನಮ್ಮ ಹೇಳ್ತಾ ಇದೀಯ ? ಪಾಪ ಮದುವೆಯಾಗಿ ಕೇವಲ ಒಂದೂವರೆ ವರ್ಷ ಕೂಡಾ ಆಗಿರಲಿಲ್ಲ.

ಹೊಟ್ಟೆಯಲ್ಲಿ ಅದೇನೋ ಆಗಿತ್ತು. ಆಪರೇಷನ್ ಮಾಡೋಕೆ ಹೋಗಿ... ಈ ಕಡೆ ಗಾಯತ್ರೀಗೆ ಈಗ ಏಳನೇ ತಿಂಗಳು ನಡೀತಿದೆ. ಅದೇನು ಭಾಗ್ಯನೋ ಏನೋ ಆ ಹುಡುಗಿಯದು, ಅಕ್ಕ ಹಾಗೂ ಅಮ್ಮ ಗಾಯತ್ರಿಯ ವಿಷಯ ಕೇಳಿ ತುಂಬಾ ಗೋಳಾಡಿದರು.

ನಾನು ಗಾಯತ್ರಿಯನ್ನು ಸಿಂಧೂರ ಹಚ್ಚಿಕೊಂಡ ಅವಸ್ಥೆಯಲ್ಲಿ ಕಂಡೇ ಇರಲಿಲ್ಲ. ಆದರೆ ಅವಳ ಹಣೆಯಿಂದ ಸಿಂಧೂರವನ್ನು ಅಳಿಸುವ ದೃಶ್ಯವನ್ನು ಕಲ್ಪಿಸಿಕೊಳ್ಳಬಲ್ಲವನಾಗಿದ್ದೆ. ನಾನು ಕೇಳಿದೆ, ಅಪರೇಶ ಯಾರ ಮನೆ ಹುಡುಗ ? ಗಾಯತ್ರಿ ತಾನೇ ಮೆಚ್ಚಿ ಮದುವೆಯಾಗಿದ್ದಳೇ ?

ಇಲ್ಲ, ಅವರ ಮನೆಯವರೇ ಮದುವೆ ಮಾಡಿದ್ದರು. ಅಪರೇಶ ಹೊಸ ಸ್ಟೇಷನ್ ಮಾಸ್ತರರ ಮಗ. ತುಂಬಾ ಒಳ್ಳೇ ಹುಡುಗ. ತುಂಬಾ ಆರೋಗ್ಯವಾಗೇನೋ ಇದ್ದ. ನಮ್ಮ ಶಂಭುವಿನ ತರಹಾ ನೋಡೋಕೆ. ಮೂತ್ರ ಮಾಡಲು ತುಂಬಾ ತೊಂದ್ರೆಯಾಗ್ತಿತ್ತು ಅಂತ ಕೇಳಿದೆ. ಅದಕ್ಕೆ ಹೊಟ್ಟೆ ಆಪರೇಷನ್ ಮಾಡಿಸಲು ಕರ್ಕೊಂಡು ಹೋಗಿದ್ದರು. ಅಯ್ಯೋ, ಆ ಹುಡುಗಿ ಹಣೆಬರಹವೇ ? ಈ ವಯಸ್ಸಿನಲ್ಲಿ, ಅದೂ ಹೊಟ್ಟೇಲಿ ಮಗು ಬೇರೆ.

ದೊಡ್ಡಕ್ಕ ಅಮ್ಮನಿಗೆಂದಳು, ನಿನ್ನ ಮಗನಿಗೆ ಗಾಯತ್ರೀನ ತಂದುಕೋ ಬೇಕು ಅಂತ ಇದ್ದಿರಿ ಅಲ್ವಾ.

ಅಮ್ಮ ನಡುಗಿ ಹೇಳಿದಳು, ಒಳ್ಳೇದಾಯ್ತು ಸದ್ಯ, ಆಗಲಿಲ್ಲವಲ್ಲ. ಆ ಹುಡುಗೀದು ಅವಲಕ್ಷಣದ ಮುಖ.....

ದೊಡ್ಡಕ್ಕ ತಟ್ಟನೆ ಹೇಳಿಯೇ ಬಿಟ್ಟಳು, ಸುಮ್ಮ ಸುಮ್ಮನೆ ಅವಳ ಮೇಲೆ ಯಾಕೆ ದೋಷಾರೋಪಣೆ ಮಾಡ್ತೀಯ. ಅಪರೇಶನ ಹಣೇಲಿ ಸಾಯಬೇಕೂಂತ ಇತ್ತೋ ಏನೋ. ನಿನ್ನ ಮಗನೊಡನೆ ಮದುವೆಯಾಗಿದ್ದಿದ್ದರೆ ಅವಳ ಭಾಗ್ಯ ಬದಲಾಗ್ತಾ ಇತ್ತೋ ಏನೋ.

ನಾನು ನಕ್ಕು ಹೇಳಿದೆ, ಒಂದು ವೇಳೆ ನನ್ನ ಜೊತೆ ಗಾಯತ್ರಿ ಮದುವೆಯಾಗಿದ್ದಿದ್ದರೆ ಖಂಡಿತವಾಗಿಯೂ ಅವಳು ಸತ್ತು ಹೋಗ್ತಾ ಇದ್ದಳು.

ಥೂ ಅಂಥಾ ಮಾತ್ಯಾಕಾಡ್ತೀಯ ?

ನಿಜ ಹೇಳ್ತಾ ಇದೀನಿ. ಒಬ್ಬ ಜ್ಯೋತಿಷಿ ನನ್ನ ಕೈ ನೋಡಿ ಹೇಳಿದ್ದಾನೆ. ನನ್ನ ಮದುವೆಯಾದ ವರ್ಷದೊಳಗೇ ಹೆಂಡತಿ ಸತ್ತು ಹೋಗ್ತಾಳೇಂತ, ಒಂದು ವೇಳೆ ನಾನು ಮೂವತ್ತು ವರ್ಷಗಳ ಒಳಗೆ ಮದುವೆ ಮಾಡಿಕೊಂಡರೆ ಮಾತ್ರ.

ಅಕ್ಕ ಸ್ವಲ್ಪ ನಂಬಿದವಳಂತೆ ಕಣ್ಣೆತ್ತಿ ಹೇಳಿದಳು, ಠಕ್ಕ ಜ್ಯೋತಿಷಿ. ಅಮ್ಮನೆಂದಳು, ನಿನ್ನ ಜಾತಕ ನನ್ನ ಹತ್ತಿರಾನೇ ಇದೆ. ನನಗೆ ಗೊತ್ತಿಲ್ವ, ನೀನು ನನ್ನ ಹತ್ತಿರಾನೇ ಸುಳ್ಳಾಡಬೇಡ.

ಜೈಲಿನ ಸಮೀಪದ ರಸ್ತೆಯಲ್ಲಿ ನಿಂತು, ಇಳಿ ಸಂಜೆಯಲ್ಲಿ ಗಾಯತ್ರಿ ಅಪರೇಶನಿಗೆ, ನಾನು ನಿನ್ನನ್ನು ಮದುವೆ ಮಾಡಿಕೊಳ್ಳೋಕ್ಕಾಗೋದಿಲ್ಲ ಅಂತ ಹೇಳಲಾಗಲಿಲ್ಲವೇ. ಅಪರೇಶನ ಮೇಲೆ ಕಾರುಣ್ಯದ ದೃಷ್ಟಿ ಬೀರಿ ಮದುವೆಯಾಗದೆಯೇ ನಾನು ಬಹಳ ವಿಷಯ ತಿಳಿದುಕೊಳ್ಳಬೇಕೆಂದಿದ್ದೇನೆಂದು ಹೇಳಲಾಗಲಿಲ್ಲವೇ ? ಗಾಯತ್ರಿಯ ಆಸೆ ಏನೆಂದರೆ ತುಂಬಾ ಓದಿ-ಬರೆದು ಮಾಡಿ ವಿದೇಶಕ್ಕೆ ಹೋಗಬೇಕೂಂತ. ಬಾಂಗ್ಲಾ ದೇಶದ ಚಿಕ್ಕ ಪಟ್ಟಣದ ವಕೀಲರ ಮಗಳದು ಎಂಥಾ ಶಪಥ. ಈಗ ಬಿಳಿ ಸೀರೆ ಉಟ್ಟು ಬೆಳಗಿನ ಶಾಲೆಯಲ್ಲಿ ಮಾಸ್ತರಣಿಯಾಗಿದ್ದಾಳೆ. ಹೊಟ್ಟೆಯಲ್ಲಿನ ಸಂತಾನ ಒಂದು ವೇಳೆ ಬದುಕುಳಿಯದಿದ್ದರೆ ಅಥವಾ ಉಪವಾಸ ಮಾಡಿ ಅವಳ ಮುಖ ಕೆಟ್ಟಿರದಿದ್ದರೆ, ಭವಿಷ್ಯದಲ್ಲಿ ಯಾವನೋ ಒಬ್ಬ ಆದರ್ಶವಾದಿ ಪಂಜಾಬಿ ಹುಡುಗನೊಬ್ಬನಿಗೆ ಅವಳ ಮದುವೆಯಾದರೂ ಆಗಬಹುದು. ಗಾಯತ್ರಿಗಾಗಿ ನಾನು ದುಃಖಿತನಾಗುವುದು ಉಚಿತವೋ ಅನುಚಿತವೋ ಎಂದು ನನಗೆ ತಿಳಿಯಲಿಲ್ಲ. ಅವಳ ಈಗಿನ ಮುಖವನ್ನು ನಾನು ಕಂಡಿರಲಿಲ್ಲ. ಅವಳ ವಿಷಣ್ಣ ಮುಖವನ್ನು ನೋಡಿರುತ್ತಿದ್ದರೆ ನಾನು ಬಹಳ ಅಸ್ವಸ್ಥನಾಗಿ ಬಿಟ್ಟಿರುತ್ತಿದ್ದೆ. ಆದರೆ ಗಾಯತ್ರಿಯ ಖಿನ್ನವಾದ ವಿಷಣ್ಣ ಮುಖವನ್ನು ನೋಡಲು, ನಾನು ಪುನಃ ಬಹರಾಂಪುರಕ್ಕೆ ಹೋಗೋದಿಲ್ಲ.

ಅಪ್ಪನಿಂದ ಇನ್ನೊಂದು ತೊಂದರೆ ಉಂಟಾಯಿತು. ಅಕ್ಕ ದೊಡ್ಡ ರಂಪಾಟವನ್ನೇ ಮಾಡಿಬಿಟ್ಟಳು. ಮನೆಯಲ್ಲಿ ಸ್ಥಳವಿಲ್ಲವೆಂದು ಅಕ್ಕ ನನ್ನ ಕೋಣೆಯಲ್ಲೇ ಇನ್ನೊಂದು ಮಂಚ ಹಾಕಿ, ಅಲ್ಲಿ ಅಪ್ಪನಿಗೆ ಮಲಗಿಕೊಳ್ಳಲು ವ್ಯವಸ್ಥೆ ಮಾಡಿದ್ದಳು. ವಯಸ್ಸಿಗೆ ಬಂದ ಮಗ ಹಾಗೂ ಅವನಪ್ಪ ಒಂದೇ ಕೋಣೆಯಲ್ಲಿ ಎಲ್ಲಾದರೂ ಮಲಗುವುದುಂಟೇ ? ಸಿಗರೇಟ್ ಸೇದಲು ತೊಂದರೆ, ಇನ್ನು ಅನೇಕ ಅಡಚಣೆಗಳು. ನಾನು ದೊಡ್ಡಕ್ಕನ ಮುಂದೆ ನನ್ನ ಅಸಮ್ಮತಿಯನ್ನು ತೋರ್ಪಡಿಸಿದೆ. ಆದರೆ ಅವಳದನ್ನು ಕೇಳಲಿಲ್ಲ. ನಾನು ಈ ವಿಷಯಕ್ಕೆ, ಕಿರುಚಿ ರೇಗಾಡಿದ್ರೆ ಅವಳ ಮನಸ್ಸಿಗೆ ನಾನು ಅಪ್ಪನಿಗೆ ಮರ್ಯಾದೆ ತೋರಿಸ್ತಿಲ್ಲ ಅಂತ ಅನ್ನಿಸೀತು. ಭಕ್ತಿ ಶ್ರದ್ಧೆಯ ಮಾತು ಅಂತಲ್ಲ. ಅಪ್ಪನ ಜೊತೆ ಚಿಕ್ಕಂದಿನಿಂದಲೂ ನಾನು ಮಾತು ಕಡಿಮೆ ಆಡ್ತಿದ್ದೆ. ನಾಲ್ಕೈದು ವರ್ಷ ಸತತವಾಗಿ ನಾನು ಅವರೊಂದಿಗೆ ಮಾತೇ ಆಡಿಲ್ಲ. ಈಗ ಅವರ ಜೊತೆ ಒಂದೇ ಕೋಣೆಯಲ್ಲಿ, ಮಲಗುವಾಗ ಯಾವ ರೀತಿ ಮುಜುಗರ ಆಗುತ್ತೆ ಅನ್ನೋದನ್ನು ಹೇಳೋದಕ್ಕಾಗೋದಿಲ್ಲ. ಅದಕ್ಕೆಂದೇ ಮನೆಯಿಂದ ರಾತ್ರಿ ವೇಳೆಯಲ್ಲಿ ಹೊರಗಿದ್ದುಬಿಟ್ಟರೆ ಚೆನ್ನಾಗಿರೋದಿಲ್ಲಾ. ನಾನು ಈ ನಡುವೆ ಕೋಣೆಗೆ ಅನಾವಶ್ಯಕವಾಗಿ ಹೋಗೋದೇ ಇಲ್ಲ. ಒಳಗೆ ಹೆಂಗಸರ ನಡುವೆಯೋ ಅಥವಾ ಮನೆಯಲ್ಲಿನ ಚಿಕ್ಕ ಮಕ್ಕಳ ಜೊತೆಯೋ, ಕೇರಮ್ ಆಟವಾಡಿಯೋ, ಸಮಯ ಕಳೆಯುತ್ತಿದ್ದೆ. ರಾತ್ರಿ ಹೇಗೋ ಮಾಡಿ ಅಂತೂ ಕೋಣೆ ಸೇರಿ, ನನ್ನ ಹಾಸಿಗೆಯ

ಮೇಲೆ ಉರುಳಿಕೊಳ್ಳುತ್ತಿದ್ದೆ.

ಹಾಸಿಗೆಯ ಮೇಲೆ ಮಲಗುತ್ತಿದ್ದಂತೆಯೇ ನಿದ್ದೆ ಹತ್ತುತ್ತಿರಲಿಲ್ಲ. ಕತ್ತಲಲ್ಲಿ ಅಪ್ಪನ ಮಂಚದ ಕಡೆಯೇ ದಿಟ್ಟಿಸಿ ನೋಡುತ್ತಲಿದ್ದೆ. ರಾತ್ರಿಯ ಹೊತ್ತು ವಿಪರೀತ ಸೆಖೆ, ಇಡೀ ರಾತ್ರಿ ಫ್ಯಾನ್ ಹಾಕಲೇ ಬೇಕಾಗುತ್ತಿತ್ತು. ಅಂಥದ್ದರಲ್ಲೂ ಅಪ್ಪ ಮೈಮೇಲೆ ಹೊದ್ದುಕೊಂಡು ಮಲಗಲು ಇಷ್ಟಪಡುತ್ತಿದ್ದರು. ಅವರಿಗೂ ನಿದ್ದೆ ಬರುತ್ತಿರಲಿಲ್ಲ. ಅವರ ನಿದ್ದೆ ಈ ನಡುವೆ ತುಂಬಾ ಕಡಿಮೆಯಾಗಿ ಬಿಟ್ಟಿದೆ ಅಂತ ನನಗನ್ನಿಸುತ್ತದೆ. ಯಾವುದೋ ಒಂದು ಹೊತ್ತಿನಲ್ಲಿ ರಾತ್ರಿ ಎದ್ದು ಮೈತುಂಬಾ ಹೊದ್ದುಕೊಂಡು, ಒಂದು ಸಿಗರೇಟ್ ಸೇದ್ತಾರೆ. ಕತ್ತಲಲ್ಲಿ ಸಿಗರೇಟಿನ ಬೆಂಕಿಯಲ್ಲಿ ಅವರ ಅಸ್ಪಷ್ಟ ಮುಖವನ್ನು ನೋಡುತ್ತೇನೆ.

ಈ ಮಧ್ಯದಲ್ಲೇ ಅಪ್ಪನೊಡನೆ, ಒಂದೆರಡು ಘಟನೆ ನಡೆಯಿತು. ಮೊದಲನೆಯ ದಿನವೇ ನಾನು ಅವರನ್ನು ಪ್ರಶ್ನಿಸಿದ್ದೆ, ಇಡೀ ರಾತ್ರಿ ಫ್ಯಾನ್ ಹಾಕೋದ್ರಿಂದ, ನಿಮಗೇನಾದ್ರೂ ಅನಾನುಕೂಲವೇ. ಅವರು ಸಂಕ್ಷಿಪ್ತವಾಗಿ ಹೇಳಿದ್ದರು, ಇಲ್ಲ. ಅನಂತರ ಅವರು ನನ್ನನ್ನು ಪ್ರಶ್ನಿಸಿದ್ದರು, ನೀನು ಮೊದಲಿನ ಕೆಲಸ ಬಿಟ್ಟು ರಮೇಶನ ಹತ್ತಿರ ಕೆಲಸ ಹಿಡಿದಿದ್ದೀಯ, ಆತ್ಮೀಯ ಸ್ವಜನರ ಹತ್ತಿರ ಕೆಲಸ ಮಾಡೋದು ಒಳ್ಳೇದೆ ?

ಆಗ ನಾನು ಮೇಜಿನ ಮೇಲೆ ಪುಸ್ತಕಗಳನ್ನು ಜೋಡಿಸುತ್ತಲಿದ್ದೆ. ಹಿಂದೆ ತಿರುಗದೆ ಹೇಳಿದೆ, ದೊಡ್ಡಕ್ಕ ತುಂಬಾ ಬಲವಂತ ಮಾಡಿದ್ಲು, ಅಲ್ಲದೆ ಇಲ್ಲಿ ಸಂಬಳಾನೂ ಜಾಸ್ತಿ......

ಆದರೂ ಸರಕಾರಿ ಕೆಲಸದಲ್ಲಿ ಒಂದು ಸ್ಥಿರತೆ ಇತ್ತು. ಸರಕಾರಿ ಕೆಲಸ ಜನರಿಗೆ, ಅಷ್ಟೊಂದು ಸುಲಭವಾಗಿ ಸಿಗೋದಿಲ್ಲ. ಈ ಪ್ರಶ್ನೆಗೆ ಉತ್ತರ ಸಿಗದೆ, ನಾನು ಕೇವಲ ಅಸ್ಪಷ್ಟ ದನಿಯೊಂದನ್ನು ಮುಖದಿಂದ ಹೊಮ್ಮಿಸಿದ್ದೆ.

ಅಪ್ಪನ ತಲೆಯಲ್ಲಿನ ಕೂದಲೆಲ್ಲ ಪ್ರಾಯಶಃ ಬಿಳಿಯಾಗಿ ಹೋಗಿದೆ. ಅವರು ಕೆಲಸದಿಂದ ನಿವೃತ್ತಿ ಹೊಂದಿ ಬಹುಶಃ ಐದು ಆರು ವರ್ಷಗಳೇ ಆಗಿರಬೇಕು. ಕ್ಷೀಣವಾದ ಮುಖ, ಎರಡು ಮೂರು ದಿನಗಳಿಂದ ಗಡ್ಡ ಬೋಳಿಸಿಕೊಂಡಿಲ್ಲದಿದ್ದುದಕ್ಕೋ ಏನೋ ತುಂಬಾ ರೋಗಿಷ್ಠರಂತೆ ಕಾಣುತ್ತಿದ್ದರು. ರಾತ್ರಿಯ ನೀರವತೆಯಲ್ಲಿ ಎದ್ದು ಯಾವಾಗ ಅವರು ಸಿಗರೇಟ್ ಸೇದಲಾರಂಭಿಸುತ್ತಾರೋ ಆಗ ಅವರ ಆ ಭಂಗಿಯಲ್ಲಿ ಒಂದು ರೀತಿಯ ಅಸಹಾಯಕತೆಯನ್ನು ನಾನು ಗುರುತಿಸುತ್ತೇನೆ. ಈ ಬದಿಯಲ್ಲಿ ಕತ್ತಲಲ್ಲಿ ನಾನು ಮಂಚದ ಮೇಲೆ, ಕಣ್ಣು ತೆರೆದುಕೊಂಡೇ ಮಲಗಿಕೊಂಡಿರುತ್ತೇನೆ. ಒಮ್ಮೆಗೆ ಅಪ್ಪ ಬಹಳ ಅಸಹಾಯಕರು ಅಂತ ನನ್ನ ಮನಸ್ಸಿಗನಿಸುತ್ತೆ. ಒಮ್ಮೆಗೇ ನನ್ನ ಅಂತರ್ಯದಲ್ಲಿ, ಎದ್ದು ಕುಳಿತು, ಅವರೊಡನೆ, ನಾನು ತುಂಬಾ ಹೊತ್ತು ಆತ್ಮೀಯವಾಗಿ, ಮನಬಿಚ್ಚಿ ಮಾತನಾಡಬೇಕೆಂಬ ಹಂಬಲ ಮೂಡುತ್ತದೆ. ಅವರು ನಮ್ಮಪ್ಪ, ಅಂಧಕಾರದ ನಡುವೆ, ನನ್ನನ್ನು ದಿಟ್ಟಿಸುತ್ತಲಿದ್ದಾರೆ, ಅವರು ನನಗೇನೋ ಹೇಳಬಯಸುತ್ತಿದ್ದಾರೆಂದು ನನಗನಿಸುತ್ತದೆ. ಇಷ್ಟರಲ್ಲೇ ಒಂದೆರಡು ಸಲ ಅವರು

ಈಗಾಗಲೇ ಮೃತ್ಯುವಿನ ಸುಳಿವನ್ನು ಕಂಡಿದ್ದಾರೆ. ಖಂಡಿತವಾಗಿಯೂ ಕೊನೆಯ ಬಾರಿಗೆ, ತನ್ನ ಮಗನಿಗೆ ಯಾವುದೋ ಗೂಢ ವಿಷಯವನ್ನು ಹೇಳಲು ಇರೋದಿಲ್ಲ. ಅಪ್ಪನ ಸಿಟ್ಟು ಮಾಯವಾಗಿ, ಯಾವೊಂದು ಭಾವನೆ ಮೂಡುತ್ತಿದೆಯೋ, ಅದನ್ನು ಕರುಣೆ ಎಂದು ಹೇಳಲೇ ಅಥವಾ ತಪ್ಪೆಂದು ಹೇಳಲೇ ತಿಳಿಯುವುದಿಲ್ಲ. ಅವರಿಗೆ ಮನಸ್ಸಿನಲ್ಲಿ ತಾವು ತುಂಬಾ ಅಸಹಾಯಕರೆಂದೆ ಇದ್ದಿರಬೇಕು. ನನ್ನೆರಡೂ ಕೈಗಳನ್ನು ಅವರೆಡೆಗೆ ಚಾಚಬೇಕೆಂದೆನಿಸುತ್ತದೆ. ಒಮ್ಮೊಮ್ಮೆ ಅಪ್ಪ ಜೋರಾಗಿ ಕೆಮ್ಮುತ್ತಲಿರುತ್ತಾರೆ. ಘೈ ಘೈ ಎಂದು, ಕೆಮ್ಮಿನ ದನಿ ಕೇಳಿಬರುತ್ತದೆ. ಎದೆ ತುಂಬಾ ಕಫ. ಅವರದನ್ನು ಕ್ಯಾಕರಿಸಿ ಪಕ್ಕದಲ್ಲಿನ ಡಬ್ಬದಲ್ಲಿ ಉಗುಳುತ್ತಾರೆ. ಎದ್ದು ಹೋಗಿ ಅವರ ಉಗುಳನ್ನು ಒರೆಸಬೇಕೆಂದೆನಿಸುತ್ತದೆ ನನಗೆ. ಕೈಯಿಂದ ಅವರ ಉಗುಳನ್ನು ಮುಟ್ಟುವ ಯೋಚನೆ ಬಂದಾಗಲೂ, ನನ್ನಲ್ಲಿ ಯಾವೊಂದು ರೀತಿಯ ಅಸಹ್ಯ ಭಾವನೆಯೂ ಉಂಟಾಗುವುದಿಲ್ಲ. ಅವರಿಗೊಂದಿಷ್ಟು ಒಳ್ಳೇ ಮಾತನಾಡಬೇಕೆಂದು ಇಚ್ಛೆಯಾಗುತ್ತದೆ. ಆದರೆ ಯಾವ ರೀತಿ ಮಾತು ಪ್ರಾರಂಭಿಸಬೇಕೆಂಬುದು ತಿಳಿಯುವುದಿಲ್ಲ. ಚಿಕ್ಕಂದಿನಿಂದಲೂ, ನಾನು ಅಪ್ಪನೊಡನೆ ಆತ್ಮೀಯವಾಗಿ ಮಾತನಾಡುವುದನ್ನು ಕಲಿತಿಲ್ಲ. ಕತ್ತಲಲ್ಲಿ ಇಬ್ಬರು ವ್ಯಕ್ತಿಗಳು, ರಕ್ತ ಸಂಬಂಧಿಕರು, ಕುಳಿತಿದ್ದೇವೆ. ಆದರೆ ಮಾತುಕತೆಯಾಡಲು ನಾವು ಭಾಷೆಯನ್ನೇ ಅರಿಯೆವು. ಏನೂ ಮಾತನಾಡಲಾಗದೆ ನಾನು ಸುಮ್ಮನೆ ಎದ್ದು ಸಿಗರೇಟಿನ ಕೆಂಪು ಬೆಳಕಿನಲ್ಲಿ ಅಪ್ಪನ ಅಸ್ಪಷ್ಟ ಮುಖವನ್ನೇ ದಿಟ್ಟಿಸುತ್ತೇನೆ.

ಕೆಲವು ದಿನಗಳ ನಂತರ ಆಫೀಸಿಗೆ ಹೋದರೆ, ಮೇಜಿನ ತುಂಬೆಲ್ಲ ಕಾಗದ ಬಿದ್ದಿರುವುದನ್ನು ಕಂಡೆ. ಹಿಂದಿನ ದಿನವಷ್ಟೇ ಶೇಖರ ನನಗೆ ಫೋನ್ ಮಾಡಿದ್ದನಂತೆ, ನಾನು ಬಂದೊಡನೆ ಐದನೇ ನಂಬರಿನ ಮನೆಯಲ್ಲಿ ಅವನನ್ನು ಕಾಣಬೇಕೆಂದು ತಿಳಿಸಿ ಎಂದಿದ್ದನಂತೆ.

ಹಾಗಾದ್ರೆ ಶೇಖರ ಯಾವೊಂದು ಉದ್ದೇಶವೂ ಇಲ್ಲದೆ ಸುಮ್ಮನೆ ಸುತ್ತಾಡುತ್ತಲಿದ್ದಾನೆ. ಐದನೇ ನಂಬರಿನ ಮನೆಗೆ ಈಗ ಅವನ್ಯಾಕೆ ಹೋದ ? ಆ ಸ್ಥಳಗಳಿಗೆ ಹೋಗಲು ನನಗೊಂದಿಷ್ಟೂ ಇಷ್ಟವಾಗೋದಿಲ್ಲ. ವಿಷಯ ಏನೂಂತ ನೋಡೋಣ ಎಂದುಕೊಂಡು, ಅವನ ಆಫೀಸಿಗೆ ಫೋನ್ ಮಾಡಿದೆ. ಆಫೀಸಿನಲ್ಲಿ ಶೇಖರನಿರಲಿಲ್ಲ. ಕಳೆದ ಐದು ದಿನಗಳಿಂದ ಅವನು ಆಫೀಸಿನ ಕಡೆಯೇ ಬಂದಿಲ್ಲವಂತೆ. ಅದಲ್ಲದೆ ಮೂರು ವಾರ ರಜೆ ಬೇಕೆಂದು ಅಪ್ಲಿಕೇಷನ್ ಬೇರೆ ಕೊಟ್ಟಿದ್ದಾನಂತೆ. ಕಲಕತ್ತೆಯಲ್ಲೇ ಇದ್ದುಕೊಂಡು ಹುಡುಗ ಆಫೀಸಿಗೆ ಯಾಕೆ ಹೋಗಿಲ್ಲ ? ನಾನು ಶೇಖರನ ಮನೆಗೆ ಫೋನ್ ಮಾಡಿದೆ.

ಟೆಲಿಫೋನ್ ಎತ್ತಿಕೊಂಡವಳು ತಪತಿ. ತಪತಿಯ ದನಿಯನ್ನು ಕೇಳುತ್ತಲೇ ನಾನು ನಡುಗಿದ್ದೆ. ತಪತಿಗೆ ಕಿವಿ ಚೆನ್ನಾಗಿ ಕೇಳೋದಿಲ್ಲ. ಅವಳೊಡನೆ ಫೋನ್‌ನಲ್ಲಿ ಮಾತನಾಡೋದು ತೀರಾ ಕಷ್ಟದ ಕೆಲಸ. ಆಫೀಸಿನಿಂದ ಅವಳೊಡನೆ ಜೋರಾಗಿ, ಕಿರುಚಿ ಹೇಗೆ ನಾನು ಮಾತನಾಡಲಿ ? ಇಂಗ್ಲಿಷಿನಲ್ಲಿ ಮಾತನಾಡಲು ಪ್ರಾರಂಭಿಸಿದರೆ

ಚೆನ್ನಾಗಿರೋದಿಲ್ಲ. ಕಾರಣ ಕೆಪ್ಪ ಜನರು ಬಹಳ ಚೆನ್ನಾಗಿ ಇಂಗ್ಲಿಷನ್ನು ಅರ್ಥ ಮಾಡಿಕೊಂಡು ಬಿಡ್ತಾರೆ. ಏನೇ ಆಗಲಿ, ನಾನು ಗಂಟಲಿನ ದನಿ ಸಾಧ್ಯವಾದಷ್ಟು ಮಟ್ಟಿಗೆ ಎತ್ತರಿಸಿ ಪ್ರಶ್ನಿಸಿದೆ, ಶೇಖರ ಇದ್ದಾನೆಯೋ ? ಆ ಕಡೆಯಿಂದ ತಪತಿಯ ದನಿ ತೇಲಿ ಬಂತು, ಹಲೋ ನೀವು ಯಾರು ಮಾತನಾಡ್ತಾ ಇರೋದು ?

ಶೇಖರ ಇದ್ದಾನೋ ಇಲ್ವೋ ?

ನೀವು ಯಾರು ಮಾತನಾಡ್ತಾ ಇರೋದು ?

ಹೇಳಿದರೂ ಅದನ್ನ ಕೇಳಿಸಿಕೊಳ್ಳೋದಕ್ಕಾಗೋದಿಲ್ಲವಲ್ಲ. ಹೆಸರು ಹೇಳಿ ಅದರಿಂದ ಏನು ಲಾಭ ? ಬೇಗನೇ ಬೇರಿನ್ಯಾರಿಗಾದ್ರೂ ಟೆಲಿಫೋನ್ ಕೊಡು.

ಸುನೀಲ್‌ದಾ ? ಗಂಟಲಿನ ದನಿ ಕೇಳಿಯೇ ಅಂದುಕೊಂಡೆ. ಅಣ್ಣ ಮನೇನಲ್ಲಿಲ್ಲ.

ಮನೇನಲ್ಲಿಲ್ಲ ಅಂದ್ರೆ, ಇಷ್ಟು ದಿನದಲ್ಲಿ ಒಮ್ಮೆಯೂ ಮನೆಗೆ ಬಂದಿಲ್ಲವೇ ? ಇಲ್ಲಾ. ಹಾಗಾದ್ರೆ, ಈಗಲೂ ಮನೇನಲ್ಲಿಲ್ಲವೇ ? ಇಷ್ಟು ದೊಡ್ಡ ವಾಕ್ಯವನ್ನು ಅವಳಿಗೆ ತಿಳಿಸುವುದು ನನ್ನಿಂದ ಅಸಾಧ್ಯ.... ದೊಡ್ಡ ತೊಂದರೆ.

ಅಣ್ಣ ಕಲಕತ್ತೆಯಿಂದ ಹೊರಗೆ ಹೋಗಿದ್ದಾನೆ. ಏಳು ದಿನಗಳವರೆಗೂ ಹಿಂತಿರುಗೋದಿಲ್ಲ ಅಂತ ಹೇಳಿ ಹೋಗಿದಾನೆ.

ನೀನು ನನ್ನ ಮಾತುಗಳನ್ನು ಕೇಳಿಸ್ಕೋತಾ ಇದೀಯ ತಾನೆ ? ಸರಿ, ಹಾಗಾದ್ರೆ ತಪತಿ ನೀನು ಹೇಗಿದೀಯಾ ?

ಇನ್ನೇನಾದ್ರೂ ಹೇಳೋದಿದೆಯೇ ? ಅಮ್ಮನ ಹತ್ತಿರ ಮಾತನಾಡ್ತೀರಾ ? ನೀವು ಚೆನ್ನಾಗಿದೀರಾ ತಾನೆ ?

ಇದಾದ ನಂತರ ನಾನು ಒಂದು ಅಸ್ಪಷ್ಟ ದನಿ ಮಾಡಿ ಟೆಲಿಫೋನ್ ಇಟ್ಟು ಬಿಟ್ಟೆ. ತಪತಿ ನನ್ನ ಎಲ್ಲ ಮಾತುಗಳನ್ನು ಕೇಳಿಸಿಕೊಂಡಳೋ ಇಲ್ವೋ ? ಅಥವಾ ಬರೀ ವ್ಯರ್ಥವೋ ? ಆದರೆ ಅವಳಾದ್ರೂ ಏನು ಮಾಡ್ತಾಳೆ. ಕಿವುಡರಿಗೆ ಮುಖದೆದುರು ನಿಂತು ಬಹಳಷ್ಟು ವಿಷಯಗಳನ್ನು ಹೇಳಬಹುದು. ಅಂಥವಳು ಟೆಲಿಫೋನ್‌ನಲ್ಲಿ ಹೇಗೆ ತಾನೇ ಕೇಳಿಸಿಕೊಂಡಾಳು ? ಯಾರಿಗೆ ಗೊತ್ತು, ಅವಳದೇನು ಅರ್ಥ ಮಾಡಿಕೊಂಡಳೋ ಏನೋ ?

ಒಂದು ವಿಷಯವನ್ನು ನಾನು ಮೊದಲೇ ತೀರ್ಮಾನಿಸಿಕೊಂಡು ಬಿಟ್ಟಿದ್ದೆ. ಸುವಿಮಲ ಬರುವ ಮೊದಲೇ ನಾನಿವತ್ತು ಹೊರಟುಬಿಡಬೇಕು. ಸುವಿಮಲನನ್ನು ಕಂಡ ಮೇಲೆ ಇನ್ನು ಅವಿನಾಶನೋ ಅಥವಾ ಪರೀಕ್ಷಿತ್ ಅಥವಾ ತಾಪಸನ ಜೊತೆ ಹೋಗಿ ಸೇರಿಕೊಳ್ಳಬೇಕು. ಅಲ್ಲಿಂದಲೇ ಗಲಾಟೆ ಪ್ರಾರಂಭ. ಇಂದು ಅವರೊಡನೆ ನಾನು ಬೆರೆಯೋದಿಲ್ಲ. ಶೇಖರನನ್ನು ಹುಡುಕಿಕೊಂಡು ನಾನು ಐದನೇ ನಂಬರಿನ ಮನೆಗೂ ಹೋಗೋದಿಲ್ಲ. ಅದಲ್ಲದೆ ಮನೆಯವರಿಗೀಗಾಗಲೇ ಶೇಖರನ ಸುದ್ದಿ ತಿಳಿದೇ ಇದೆ. ಇದರಲ್ಲಿ ನನ್ನ ಹೊಣೆಗಾರಿಕೆ ಏನೊಂದೂ ಇಲ್ಲ.

ಆಫೀಸಿನ ಕೆಲವು ಕೆಲಸಗಳನ್ನು ತೆಗೆದುಕೊಂಡು, ನಾನು ಪ್ರೆಸ್ ಕಡೆ ಹೊರಟೆ. ಹೊರಡುವ ಮೊದಲು ಬಾಗಿಲಲ್ಲೇ ರಿಸೆಪ್‌ಷನಿಸ್ಟ್‌ಳನ್ನು ಪ್ರಶ್ನಿಸಿದೆ, ಮಿಸ್ ನವಮಿ, ರಜೆ ತೆಗೆದುಕೊಂಡು, ಎರಡು ದಿನ ಏನು ಮಾಡಿದಿರಿ ?

ಹುಡುಗಿ ಮುಸಿ ಮುಸಿ ನಕ್ಕಳು. ಅವಳ ಬೆರಳಲ್ಲಿ ಮುತ್ತಿನ ಬಂಗಾರದುಂಗುರವನ್ನು ಕಂಡೆ. ನಾನೆಂದೆ, ಎಂಗೇಜ್‌ಮೆಂಟ್ ಆಯ್ತು ಅಂತ ಕಾಣುತ್ತೆ. ಛೆ, ನೀವು ತುಂಬಾ ನಿರಾಸೆ ಮಾಡಿಬಿಟ್ರಿ, ನನಗೂ ಒಂದು ಛಾನ್ಸ್ ಇದೆ ಅಂತ ಅಂದುಕೊಂಡಿದ್ದೆ. ಎನಿವೇ ಕಂಗ್ರಾಟ್ಸ್.

ಹುಡುಗಿ ಜೋರಾಗಿ ನಕ್ಕು ಹೇಳಿದಳು, ಯು ಆರ್ ಎ ಡಿಯರ್ ................

ಗಮನವಿಟ್ಟು ಐದೂವರೆವರೆಗೂ ನಾನು ಪ್ರೆಸ್‌ನಲ್ಲಿ ಕೆಲಸ ಮಾಡಿದೆ. ಒಂದೊಂದೇ ಲೈನನ್ನು ಕಂಪೋಜ್ ಮಾಡಿ ತಂದ ಮೇಲೆ, ತುಟಿ ಕೊಂಕಿಸಿ ಹೇಳಿದೆ, ಊಹೂಂ, ಇದು ತಿರುಗಾಮುರಗ ಆಗ್ಹೋಗಿದೆ. ಇದನ್ನು ಬದಲಿಸಿ, ಇಲ್ಲಿ ಡಬಲ್ ಗ್ರೇಡ್ ಕಂಪ್ರೆಸ್ಡ್ ಕೊಡಿ. ನಿಮ್ಮಲ್ಲಿ ನಲವತ್ತೆಂಟರ ಪಾಯಿಂಟ್ ಟೈಪ್ ಇಲ್ಲವಾ ? ಹೊಸ ಟೈಪ್ ಕೊಂಡುಕೊಳ್ಳಿ, ಬರೀ ಅದನ್ನೇ ಹಳೇದನ್ನು ಉಪಯೋಗಿಸಿ..... ನನಗೆ ಬೇಕಾಗಿದ್ದು, ಕೂದಲಿನೆಳೆಯಂತಾ ಗೆರೆ, ಆದರೆ ನೀವು ಒಳ್ಳೆ ದಪ್ಪ ಗೆರೆ ಎಳೆದು ಬಿಟ್ಟಿದೀರಾ. ಈ ತರಹ ಮಾಡಿದರೆ ಕೆಲಸವಾಗುತ್ತಾ? ಚಿತ್ರವನ್ನು ಕಟ್ ಔಟ್ ಮಾಡಿ, ಪ್ಯಾಪಿನ ಮೇಲೆ ಕೂಡಿಸಬೇಕು. ಇಷ್ಟು ಚಿಕ್ಕ ಕೆಲಸಕ್ಕೆ ಪುನಃ ಎರಡು ಗಂಟೆ ತೊಗೋಬೇಡಿ.

ಒಮ್ಮೊಮ್ಮೆ ಈ ರೀತಿ ಒರಟು ದನಿಯಲ್ಲೇ ಮಾತನಾಡಬೇಕಾಗುತ್ತೆ. ಅದರಿಂದ ಅವರಿಗನಿಸುತ್ತೆ ನನಗೆ ತುಂಬಾ ಚೆನ್ನಾಗಿ ಕೆಲಸ ತಿಳಿದಿದೆ ಅಂತ. ಇಲ್ಲಾಂದ್ರೆ ಅವರು ಲಕ್ಷ್ಯವನ್ನೇ ಕೊಡೋದಿಲ್ಲ. ಅವರಂದುಕೊಳ್ತಾರೆ, ನಾನು ಕೇವಲ ಕಂಪನಿ ಮಾಲೀಕರ ಮೈದುನನೆಂದು ಬಂದು ಕೆಲಸ ನೋಡ್ಕೋತಾ ಇದೀನಿ ಅಂತ. ಇಲ್ಲಾಂದ್ರೆ ಕೇಳೋತನಕ ಕೇಳಿ ಆಮೇಲೆ ಅಪಹಾಸ್ಯ ಮಾಡ್ತಾರೆ. ನಾನು ಅವರ ನಡುವೆ ಬಂದು ಕುಳಿತು ಮುಖದಲ್ಲಿ ಸಿಡುಕಿನ ಭಾವ ಪ್ರದರ್ಶಿಸುತ್ತೇನೆ. ನನ್ನ ಮುಖ ನೋಡಿದ್ರೆ ಯಾವ ಕ್ಷಣದಲ್ಲಾದ್ರೂ ಅವರ ತಪ್ಪು ಕಂಡುಹಿಡಿದು ಅವರ ಕೆಲಸಕ್ಕೆ ತೊಂದ್ರೆ ಉಂಟು ಮಾಡ್ತೇನೇನೋ ಅನ್ನೋ ತರಹ. ಒಂದು ವೇಳೆ ನಾನು ಅವರುಗಳಂತೆ ಸಾಧಾರಣ ಅಂತ ಅವರಿಗರ್ಥವಾಗಿ ಬಿಟ್ರೆ ಅವರು ಮರ್ಯಾದೇನೇ ಕೊಡೋದಿಲ್ಲ. ಆಗ ಅವರು ನನ್ನನ್ನು ಉಳಿಯಬಿಡೋದಿಲ್ಲ. ದರ್ಪ ಹಾಗೂ ಅಧಿಕಾರ ಇವೇ ಇಂದು ಎಲ್ಲಾ ಕೆಲಸಗಳಲ್ಲಿನ ಮೂಲಮಂತ್ರ ಅನ್ನೋದನ್ನ ನಾನು ಬಹಳ ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ.

ಪ್ರೆಸ್‌ನಿಂದ ಹೊರಬಂದು, ಕೈ ಮುಖ ತೊಳೆದುಕೊಂಡು, ಒಂದು ಕರವಸ್ತ್ರವನ್ನು ಕೊಂಡುಕೊಂಡೆ. ಅಗಲನೆಯ, ದೊಡ್ಡ ಚೌಕಾಕಾರದ ಕರವಸ್ತ್ರ. ಕರವಸ್ತ್ರದಿಂದ ಒಮ್ಮೆ ಮುಖವನ್ನು ಚೆನ್ನಾಗಿ ಒರೆಸಿಕೊಂಡೊಡನೆ, ಕರವಸ್ತ್ರ ಕೊಳೆಯಾಗಿ ಹೋಯಿತು. ಮುಖದಲ್ಲಿ ಅದೆಲ್ಲಿಂದ ಅಷ್ಟೊಂದು ಕೊಳೆ ಇರುತ್ತೋ ಏನೋ ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ, ಮುಖ ಸ್ವಚ್ಛವಾಗಿಯೇ ಕಾಣುತ್ತೆ. ಆದರೆ ಕರವಸ್ತ್ರದಲ್ಲಿ ಪಟ್ಟೆ ಪಟ್ಟೆಯಾಗಿ ಕೊಳೆ ಹತ್ತಿತ್ತು. ಅದನ್ನು ಬಿಸಾಡಿ ಬಿಡೋಣವೆಂದೆನಿಸಿತು. ಕೊಳಕಾದ ಕರವಸ್ತ್ರವನ್ನು ಕೈ ಜೇಬಿನಲ್ಲಿಟ್ಟುಕೊಳ್ಳಬೇಕೆಂದರೆ, ಮೈಯೆಲ್ಲಾ

ಉರಿಯುತ್ತೆ. ಅನೇಕರು ಕರವಸ್ತ್ರವನ್ನು ತಿರುಗಾ ಮುರುಗಾ ಮಡಚಿ, ಅದನ್ನೇ ಜೇಬಿನಲ್ಲಿಟ್ಟುಕೊಂಡು ಬಿಡುತ್ತಾರೆ. ಯೋಚಿಸಿದರೆ ವಾಕರಿಕೆ ಬರುತ್ತೆ. ಏನೇ ಆಗಲಿ, ಈ ಕರವಸ್ತ್ರವನ್ನು ತಿರುಗಾ ಮುರುಗಾ, ಮಡಿಚಿಟ್ಟುಕೊಂಡು, ನಾನಿವತ್ತು ಅದನ್ನು ಇನ್ನೊಮ್ಮೆ ಉಪಯೋಗಿಸಲೇಬೇಕು.

ನನಗಿನ್ನೂ ಒಂದೆರಡು ಗಂಟೆಗಳ ಸಮಯವಿತ್ತು. ಅಷ್ಟರಲ್ಲೇ ಯಾವುದಾದರೊಂದು ಸಿನೇಮಾನೂ ನೋಡೋಕಾಗೋದಿಲ್ಲ. ನಾನೊಂದು ರೆಸ್ಟೋರೆಂಟ್‌ಗೆ ನುಗ್ಗಿ, ಆರಾಮವಾಗಿ ಕುಳಿತು, ಚಹ ಸೇವಿಸತೊಡಗಿದೆ. ಚಹದ ನಂತರ ಸಿಗರೇಟ್ ಹೊತ್ತಿಸಿ, ಒಂಟಿಯಾಗಿ ಕುಳಿತಿರುವುದರಲ್ಲಿ ಮೋಜೆನಿಸಿತು. ಈ ರೀತಿ ಇಷ್ಟವಾಗಿ, ತುಂಬಾ ದಿನಗಳೇ ಕಳೆದಿದ್ದವು. ಸಂಜೆಯ ಹೊತ್ತಿನಲ್ಲಿ ಒಂಟಿಯಾಗಿರುವುದರ ದುಃಖ, ಮತ್ತಿನ್ಯಾವುದರಲ್ಲೂ ಇಲ್ಲ. ನನಗೆ ಸುವಿಮಲನ ವ್ಯಥೆ ಅರ್ಥವಾಯಿತು. ಸಂಜೆಯ ಹೊತ್ತು ಯಾರು ಟ್ಯೂಷನ್ ಹೇಳಿಕೊಡುವುದಿಲ್ಲವೋ ಅಥವಾ ಪಾರ್ಟ್‌ಟೈಮ್ ಪ್ರೇಮ ಮಾಡುವುದಿಲ್ಲವೋ, ಯಾರ ಮನೆಯ ಮುಂದೆ ತೋಟಗಾರಿಕೆ ಮಾಡಲು ಸ್ಥಳವಿರುವುದಿಲ್ಲವೋ, ಯಾರ ಮನೆಯಲ್ಲಿ ಸ್ವಂತಕ್ಕಂತ ಪ್ರತ್ಯೇಕ ಕೋಣೆಯಿರುವುದಿಲ್ಲವೋ, ಅವರುಗಳೆಲ್ಲರೂ ಸಂಜೆಯ ಹೊತ್ತನ್ನು ಯಾವ ರೀತಿ ಕಳೆಯಬೇಕು ? ಆಟಪಾಠವಾಡಿಕೊಂಡೇ ? ಕಲ್ಕತ್ತೆಯಲ್ಲಿ ಆಟವಾಡೋದು ಒಂದು ಸಾಂಘಿಕ ವಿಷಯ. ಕಾಲೇಜಿನಲ್ಲಿ ಆಟವಾಡಲು, ಆಟಗಾರನಾಗಿರಲೇಬೇಕು. ಫುಟ್‌ಬಾಲ್, ಕ್ರಿಕೆಟ್, ಬ್ಯಾಡ್ಮಿಂಟನ್ ಯಾರೆಲ್ಲಿ ಆಟವಾಡ್ತಾರೋ, ಅವರೆಲ್ಲ ತಾವು ಸ್ಪೋರ್ಟ್ಸ್‌ಮನ್ ಆಗಲೇಬೇಕೆಂದು ಬಯಸುತ್ತಾರೆ. ಯಾರೊಬ್ಬರೂ ಬಿಡುವಿನ ಸಮಯ ಕಳೆಯಲೆಂದು ಆಟವನ್ನು ಆಡೋದಿಲ್ಲ. ಆಟವಾಡಲೆಂದೇ ಅವರೆಲ್ಲ ವ್ಯಸ್ಥರಾಗಿರುತ್ತಾರೆ. ಸಮಯ ಕಳೆಯಲೆಂದು ಆಡುವ ಆಟ ಒಂದೇ ಒಂದು, ಇಸ್ಪೀಟು. ಇಸ್ಪೀಟ್ ಆಟ ಆಡ್ತಾನೇ, ಕೆಲವರು ಆಟಗಾರರಾಗಿ, ಕಾಂಪಿಟೇಷನ್ನುಗಳಲ್ಲಿ ಹೆಸರು ಬಯಸುತ್ತಾರೆ. ಕಾಂಪಿಟೇಷನ್ನಿನಲ್ಲಿ ಹೆಸರು ಬರದೇ, ಸುಮ್ಮನೆ ಹಾಗೇ ಇಸ್ಪೀಟು ಆಟ ಆಡೋದಕ್ಕೆ ಬೇಜಾರು ಬಂದು ಬಿಡುತ್ತೆ. ಅದಕ್ಕೇ ಹಣವಿಟ್ಟು ಆಟ ಆಡೋದು. ಹಣವಿಟ್ಟು ಮೂರೆಲೆ ಆಟ ಆಡ್ತಾರೆ. ವಯಸ್ಸಾಗದ ಹೊರತು ಬ್ರಿಜ್ ಆಟ ರುಚಿಸೋದಿಲ್ಲ. ಬರೀ ಹೊಡೆದಾಟವಾಗುತ್ತೆ. ಅರ್ಥಾತ್ ಜೂಜು. ಜೂಜಿನೊಂದಿಗೆ ಗುಂಡು. ಗುಂಡಿನ ಜೊತೆ ಇನ್ನು – ಅಯ್ಯೋ ದೇವರೇ ಹೊರಡೋದೇ ಇನ್ನು –

ಬೇಕೆಂದೇ ಒಂಟಿಯಾಗಿರುವುದರಲ್ಲೇ ಒಂದು ರೀತಿಯ ಆನಂದವಿದೆ. ನಾನಂತೂ ಸುವಿಮಲ ಹಾಗೂ ಅವಿನಾಶರ ಜೊತೆ ಸೇರಿಕೊಂಡು ಅನಾಯಾಸವಾಗಿಯೇ, ರಾದ್ಧಾಂತ ಎಬ್ಬಿಸಿ ಬಿಡುತ್ತಿದ್ದೆ. ಹಾಗಲ್ಲದೆ, ಪಾರ್ಕ್ ಸ್ಟ್ರೀಟಿನಲ್ಲಿನ ಅಂಗಡಿಯಲ್ಲಿ ಒಂಟಿಯಾಗಿ ಕುಳಿತು ಸಿಗರೇಟ್ ಸೇದೋದು ಬಹಳ ಇಷ್ಟವಾಗುತ್ತೆ. ಈ ನಡುವೆ ಸಂಜೆ ಹೊತ್ತು ಬಲು ಬೇಗನೇ ಕತ್ತಲಾಗಿ ಬಿಡುತ್ತೆ. ನನಗೀಗ ಏನೇ ಇಷ್ಟವಾದರೂ, ಆದರಂತೆ ಮನ ಬಂದಂತೆ ವರ್ತಿಸಲು ಸಾಧ್ಯ. ಈಗ ಆರ್ಟ್ಸ್ ಎಗ್ಸಿಬಿಷನ್‌ಗೆ ಹೋಗಲು ನನ್ನಿಂದ ಅಸಂಭವವೇನಲ್ಲ.

ನಾನು ದಿಟವಾಗಿಯೂ ಎದ್ದು ಬಂದು ಎಗ್ಸಿಬಿಷನ್ ಒಳ ನುಗ್ಗಿದೆ. ಗಡ್ಡಧಾರಿ, ಉದ್ದನೆಯಾತ ನನ್ನನ್ನು ನೋಡಿ ಮುಗುಳ್ನಕ್ಕ. ಖಂಡಿತವಾಗಿಯೂ ಅವನೇ ಆರ್ಟಿಸ್ಟ್ ಇರಬೇಕು. ಒಟ್ಟು ಇಪ್ಪತ್ತೈದು ಫ್ರೇಮುಗಳು, ಆದರೆ ಫ್ರೇಮಿನೊಳಗೆ, ರಂಗು ಹಾಗೂ ರೇಖೆಗಳಲ್ಲಿ, ಸರ್ವ ಜನನಿ, ನಾರೀ ಸೌಂದರ್ಯವನ್ನು ಹುಡುಕಲಾಗಲಿಲ್ಲ. ಯಾವುದರಲ್ಲಿ ನಾರೀ ಸೌಂದರ್ಯವನ್ನು ಪಡೆಯಲಾಗುವುದಿಲ್ಲವೋ, ನನಗದು ಖಂಡಿತವಾಗಿಯೂ ಸುಂದರ ಅಂತ ಅನ್ನಿಸೋದೇ ಇಲ್ಲ. ಇದಕ್ಕೆಂದೇ ಅಸಂಖ್ಯಾತ ಸುಂದರ ನಾರಿಯರು ಕೂಡಾ ನನಗೆ ಸುಂದರಿಯರು ಅಂತ ಅನಿಸಿಲ್ಲ. ಒಬ್ಬಾತ ಸೋವೆನಿಯರ್ ಅನ್ನು ಮಾರಲು ಬಂದ, ಬೆಲೆ ಒಂದು ರೂಪಾಯಿ. ಸಮಯ ಕಳೆಯಲೆಂದು ಬಂದಿದ್ದೆ, ಅಂದ ಮೇಲೆ ಇನ್ನೊಂದು ರೂಪಾಯಿ ಏಕೆ ಖರ್ಚು ಮಾಡಬೇಕು? ಬೇಡ ಬೇಡ ಚಿತ್ರಗಳ ಹೆಸರನ್ನು ತಿಳಿದುಕೊಳ್ಳುವ ಅವಶ್ಯಕತೆ ನನಗಿಲ್ಲ.

ನೋಡಲು ಬಂದವರಲ್ಲೂ ಅನೇಕರ ಮುಖಚರ್ಯೆ ಆರ್ಟಿಸ್ಟಿನ ತರಹವೇ, ಅರ್ಥಾತ್ ಕೆದರಿದ ಕೂದಲು, ಒಣಗಿದ ಗಡ್ಡ, ಹೆಗಲಿನಲ್ಲಿ ಒಂದು ಚೀಲ. ಇವರುಗಳ ಜೊತೆ ಅನೇಕ ಯುವತಿಯರೂ ಇದ್ದಾರೆ. ಇಂಥ ಆರ್ಟಿಸ್ಟ್‌ಗಳ ಬಳಿ, ಅನೇಕ ಶ್ರೀಮಂತರ ಮನೆಗಳ ಮುದ್ದು ಹುಡುಗಿಯರು ಬಂದಿರೋದನ್ನ ನಾನು ಕಂಡಿದೀನಿ. ಈ ಬಾಂಗ್ಲಾದೇಶದಲ್ಲಿ ಅವರಿನ್ಯಾವ ಆಸೆಯಿಂದ ತಾನೇ ಬಂದಿರ್ತಾರೆ ಹೇಳಿ? ಅದೂ ಅಲ್ಲದೆ ಈ ಹೆಣ್ಣುಮಕ್ಕಳಲ್ಲಿ, ಆರ್ಟಿಸ್ಟ್‌ಗಳಿಂದ ಮಾತ್ರಾನೇ, ಹೆಣ್ಣಿನ ನಿಜ ಸ್ವರೂಪ ತಿಳಿದುಕೊಳ್ಳೋಕೆ ಸಾಧ್ಯ ಅನ್ನೋ ಧೋರಣೆ ಇರುತ್ತೆ. ಈ ಹೆಣ್ಣುಗಳ ಚರ್ಮದ ಬಣ್ಣಾನ ಕ್ಯಾನ್‌ವಾಸಿನ ಮೇಲೋ, ಕಲ್ಲಿನಲ್ಲೋ, ಗೋಡೆಯ ಮೇಲೋ ಮೂಡಿಸೋದಕ್ಕೆ ಸಾಧ್ಯವಿಲ್ಲ. ಈ ಆರ್ಟಿಟ್ಸ್‌ಗಳು, ನಗ್ನ ಹೆಣ್ಣುಗಳನ್ನು ಮಾಡೆಲ್ ಮಾಡಿಕೊಂಡು, ರಂಗು, ರೇಖೆಗಳ ಕಾಂಪೋಸಿಷನ್ ಬಗ್ಗೆ ಬರೀ ಆಟ ಆಡ್ತಾರೆ. ಅವರ ಮುಂದಾಮೋಚಿತು, ಬೇರಿನ್ನೇನು ತಾನೆ ಮಾಡ್ತಾರೆ.

ಸುನೀಲ್, ಏನು ಒಂಟಿಯಾಗಿಯೇ ಬಂದಿದ್ದೆಯಾ? ನಾನು ಭೂತವನ್ನು ಕಂಡಂತೆ ಆಶ್ಚರ್ಯಗೊಂಡೆ. ಇಲ್ಲಿಯೂ ಕೂಡಾ ನಾನು ಪರಿಚಿತರ ಕೈಗೆ ಸಿಕ್ಕಿ ಬೀಳಬೇಕೆ? ದೂರದಿಂದಲೇ ನಿಂತು ನೋಡಿದೆ. ಪರೀಕ್ಷಿತ, ನೂರೂಲ್ ಹಾಗೂ ಒಬ್ಬ ಅಮೇರಿಕನ್ ಹುಡುಗ. ಅವನ ಮುಖದಲ್ಲೂ ಕೂಡಾ ಗಡ್ಡ, ಕೊಳಕಾದ ಉಡುಪು, ಹೆಗಲಲ್ಲಿ ಚೀಲ. ನೂರೂಲನೆಂದ, ನೀವು ಶೇಖರ ಬಾಬುಗಳನ್ನು ಕಂಡಿದ್ದೀರಾ? ಅವರು ನಿಮ್ಮನ್ನೇ ತುಂಬಾ ಹುಡುಕಾಡ್ತಾ ಇದ್ದರು.

ನಾನು ಒಂದಿಷ್ಟೂ ಹಿಂದೆ ಮುಂದೆ ನೋಡದೆ ಹೇಳಿದೆ, ಹೌದು ಕಂಡಿದ್ದೆ.

ಪರೀಕ್ಷಿತ ಕೇಳಿದ, ಯಾವಾಗ ನೋಡಿದ್ದೆ?

ಇದೇ ಇವತ್ತು ಮಧ್ಯಾಹ್ನ ನಾಲ್ಕರ ವೇಳೆಗೆ.

ಪರೀಕ್ಷಿತ ಕಣ್ಣೆಯುಬ್ಬಿಸಿ ನಕ್ಕು ಹೇಳಿದ, ಶೇಖರ ಏನು ಹಗರಣ ಮಾಡಿಕೊಂಡಿದ್ದಾನೆ ಗೊತ್ತಾ?

ನಾನೆಂದೆ, ಖಂಡಿತವಾಗಿಯೂ ಶೇಖರ ಒಮ್ಮೆಗೇ ಬೇರೆಯವನಾಗಿ ಬಿಟ್ಟಿದ್ದಾನೆ.

ಇಲ್ಲಿ ಬಾತ್‌ರೂಮ್ ಎಲ್ಲಿದ್ಯೋ ?

ಗೊತ್ತಿಲ್ಲ, ಆ ದಿನ ನೀನು ಬಾರೀನ್‌ದಾ ಜೊತೆ ಯಾಕೆ ಹೊಡೆದಾಡಿದೆ ? ನಿನ್ನ ಮುಖ ಮೂತಿ ನೋಡ್ದೆ ಚಚ್ಚಿ ಹಾಕಿಬಿಟ್ಟ.

ಸರಿ, ನಾನು ಬಾರೀನ್‌ದಾ ಹಾಗೂ ಅವಿನಾಶರ ಜಗಳವನ್ನು ಬಿಡಿಸಲು ಹೋಗಿದ್ದೆ.

ಇರಲಿ ಬಿಡೋ, ನಿನ್ನ ಮೇಲೆ ಬಾರೀನ್‌ದಾಗೆ ಏನೂ ಸಿಟ್ಟಿಲ್ಲ. ಇವತ್ತು ನೀನು ಒಂಟಿಯಾಗಿ ಯಾಕೆ ಇಲ್ಲಿಗೆ ಬಂದಿದೀಯಾ ?

ಇಲ್ಲಿ, ಚಿತ್ರ ಬಿಡಿಸಿರೋದು ನಮ್ಮಕ್ಕನ ಮೈದುನ. ಬಾ ಅಂತ ತುಂಬ ಬಲವಂತ ಮಾಡಿ ಕರೆದಿದ್ದ. ನಡಿ ನಿನ್ನ ಅವನಿಗೆ ಪರಿಚಯ ಮಾಡಿಕೊಡ್ತೀನಿ.

ಬೇಡ ಬಿಡು. ಪರಿಚಯ ಮಾಡಿಸುವ ಅಗತ್ಯವೇನಿಲ್ಲ. ನಾವು ಇಲ್ಲಿಗೆ ಬಂದಿರೋದು ಈ ಸಾಹೇಬರಿಗೋಸ್ಕರ. ಅವನಿಗೆ ನಿನ್ನ ಪರಿಚಯ ಮಾಡಿ ಕೊಡ್ತೀನಿ. ಮೀಟ್ ಅವರ್ ಫ್ರೆಂಡ್ ಸ್ಯಾಂಡಿ ಗ್ರೋವರ್, ಈತ ಸ್ವತಃ ಆರ್ಟಿಸ್ಟ್ ಗೊತ್ತಾ ? ಮೊದಲು ಶೇಖರನ ಜೊತೆ ಇವನ ಪರಿಚಯವಾಯ್ತು. ನಾನು ಹ್ಯಾಂಡ್ ಶೇಕ್ ಮಾಡಲು, ಕೈ ಮುಂದೆ ಸರಿಸುತ್ತಲೇ, ಆ ಹುಡುಗ, ನಮಸ್ಕಾರದ ಭಂಗಿಯಲ್ಲಿ ಎರಡೂ ಕೈ ಎತ್ತಿ ಮುಗಿದ. ನಾನೆಂದೆ, ಗ್ಲ್ಯಾಡು ಟು ಮೀಟ್ ಯು. ಹುಡುಗ ಗಂಭೀರ ಸ್ವರದಲ್ಲಿ ಹೇಳಿದ, ನಮಸ್ಕಾರ.

ಈಗಾಗಲೇ ಅವನು ಒಂದೆರಡು ಬಾಂಗ್ಲಾ ಪದಗಳನ್ನು ಕಲಿತುಕೊಂಡು ಬಿಟ್ಟಿದ್ದ. ಇದಾದ ಮೇಲೆ ಪ್ಯಾಂಟು ಶರ್ಟ್ ಬಿಟ್ಟು ಪೈಜಾಮ ಜುಬ್ಬಾ ಹಾಕಿಕೊಳ್ತಾನೆ. ಬಲಗೈಯಿಂದಲೇ ಅನ್ನ ತಿನ್ತಾನೆ. ಖಂಡಿತ ಈ ರೀತಿ ಮಾಡೇ ಮಾಡ್ತಾನೆ.

ಪರೀಕ್ಷಿತನೆಂದ, ನಡಿ ಶೇಖರನ ಬಳಿಗೆ ತಾನೇ ಹೋಗೋದು. ಸ್ಯಾಂಡಿಯೂ ನಮ್ಮ ಜೊತೆ ಬರ್ತಾನೆ.

ನಾನು ಗೆಲುವಿನಿಂದ ಹೇಳಿದೆ, ಎಲ್ಲಿಗೆ ? ಐದನೇ ನಂಬರಿನ ಮನೆಗೆ ತಾನೇ ? ನಾನೂ ಬರ್ತೀನಿ ನಡೀರಿ. ನನಗಿನ್ನೇನೂ ಕೆಲಸವಿಲ್ಲ. ಸ್ವಲ್ಪ ಇರಿ ನಾನು ಬಾತ್‌ರೂಮಿಗೆ ಹೋಗಿ ಬರ್ತೀನಿ, ನೀವು ಅಷ್ಟರಲ್ಲಿ ಚಿತ್ರಗಳನ್ನು ನೋಡಿ.

ಹಲಧರ್‌ನಿಂದ ಹೊರಟು ನಾನು ಸ್ವಲ್ಪ ಹೊತ್ತು ಮಾತನಾಡದೆ ವಿದ್ಯುತ್ ವೇಗದಲ್ಲಿ ನೇರವಾಗಿ ಪಾರ್ಕ್ ಸ್ಟ್ರೀಟಿಗೆ ನಡೆದು ಬಂದೆ. ಚಲಿಸುತ್ತಿರುವ ಟ್ಯಾಕ್ಸಿಯೊಂದನ್ನು ನಿಲ್ಲಿಸಿ, ಹತ್ತಿ ಕುಳಿತುಕೊಂಡೆ.

ಇನ್ನೂ ಸಮಯವಾಗಿರಲಿಲ್ಲ. ಟ್ಯಾಕ್ಸಿಯಿಂದಿಳಿದು ನಾನು ಮರದ ಕೆಳಗೆ ಸ್ವಲ್ಪ ಹೊತ್ತು ನಿಂತುಕೊಂಡೆ. ಹುಡುಗಿಯರ್‍ಯಾರೂ ಇನ್ನೂ ಬಂದಿರಲಿಲ್ಲ. ಈ ರಸ್ತೆಯಲ್ಲಿ ಜನರು ಓಡಾಡೋದು ಬಲು ಕಡಿಮೆ, ಅದಕ್ಕೆ ಈ ರಸ್ತೆ ನೀರಸವಾಗಿರುತ್ತೆ. ಇನ್ನೇನು ಸಂಗೀತ ಶಾಲೆ ಬಿಡುವ ಸಮಯವಾಯ್ತು. ತಕ್ಷಣ ರಸ್ತೆಯಲ್ಲಿ ಬೆಳಕು ಮೂಡುತ್ತೆ. ನನಗನಿಸುತ್ತೆ ಈ ದೊಡ್ಡ ಮರ, ಎರಡೂ ಕಡೆಗಳಲ್ಲಿನ ಮನೆಗಳು, ಇವೂ ನನ್ನ ಹಾಗೇ ಅದೇ ಸಮಯಕ್ಕಾಗಿ ಪ್ರತೀಕ್ಷೆ ಮಾಡುತ್ತಿವೆಯೋ ಏನೋ ಎನ್ನುವಂತೆ.

ಐದು ನಿಮಿಷದಲ್ಲೇ, ಅವರುಗಳು ಕಲಕಲ ಸದ್ದು ಮಾಡುತ್ತ ಹೊರ ಹೊರಟು ಬಂದರು. ಬೇರಿನ್ಯಾವ ಹುಡುಗಿಯ ಕಡೆಗೂ ನನ್ನ ದೃಷ್ಟಿ ಹೊರಳಲಿಲ್ಲ. ಇಂದು

ನಾನು ಮೊದಲಿಗೇ ಜಮುನಾಳನ್ನು ಕಂಡೆ. ಇವತ್ತು ಅವಳು ಚೆನ್ನಾಗಿ ಅಲಂಕರಿಸಿಕೊಂಡು ಬಂದಿದ್ದಳು. ತಲೆಗೂದಲನ್ನು ಗಂಟು ಹಾಕಿಕೊಂಡು, ತೋಳಿಲ್ಲದ ರವಿಕೆ ತೊಟ್ಟು, ಎಳೆ ಬಾಳೆ ಎಲೆ ಬಣ್ಣದ ಸೀರೆ ಉಟ್ಟಿದ್ದಳು. ತುಂಬಾ ಬೆಲೆ ಬಾಳುವ ಸೀರೆ ಇರಬೇಕು. ತುಂಬಾ ಅಲಂಕರಿಸಿಕೊಂಡಿದ್ದರೂ ಅವಳ ಸೌಂದರ್ಯ ವೃದ್ಧಿಸಿರಲಿಲ್ಲ. ಸೌಂದರ್ಯ ಯಾರಲ್ಲಿ ಇರುತ್ತೋ ಅದು ಹೆಚ್ಚು ಕಡಿಮೆಯಾಗೋದಿಲ್ಲ. ಸುಂದರ ಸ್ತ್ರೀಯರ ಮುಖದಲ್ಲಿ ಹುಣ್ಣಾದರೂ ಅದು ಸುಂದರವೇ.

ಯಾವಾಗ ಜಮುನಾಳ ದೃಷ್ಟಿ ನನ್ನ ಮೇಲೆ ಬೀಳುತ್ತೋ ಎಂದು ನಾನು ನೇರವಾದ ದೃಷ್ಟಿಯಿಂದ ನೋಡುತ್ತಲೇ ಇದ್ದೆ. ಹುಡುಗಿಯರೆಲ್ಲ ಸೇರಿ ಒಟ್ಟಾಗಿ ನಿಂತು ಮಾತನಾಡುತ್ತಿದ್ದರು. ಯಾರು ಯಾರಿಗೆ, ಏನು, ಹೇಳ್ತಿದ್ರಾರೋ ದೇವರೇ ಬಲ್ಲ. ಆ ಹುಡುಗಿಯರ ಮಧುರ ಕಲರವದ ಮಾತಿನಿಂದಾಗಿ ರಸ್ತೆಯಲ್ಲಿನ ಜನರೂ ಕೂಡಾ ಅವರ ಕಡೆಯೇ ನೋಡುತ್ತಾ ಹೋಗುತ್ತಲಿದ್ದರು. ಜಮುನಾ ಗುಂಪನ್ನು ಬಿಟ್ಟು ಬಸ್ ಸ್ಟಾಪಿನ ಕಡೆಗೆ, ಬೇಗನೆ ನಡೆದು ಬಂದಳು. ಅವಳೇ ಮೊದಲು ನನ್ನನ್ನು ಕಂಡು ಕೇಳಿದಳು, ನೀವು ? ಯಾವಾಗ ಬಂದಿರಿ ?

ಇದೇ ಈಗ ಬಸ್ ಹತ್ತುತ್ತಿದ್ದೆ, ನಿನ್ನನ್ನು ನೋಡಿ ಇಳಿದು ನಿಂತಿದ್ದೇನೆ.

ಅವತ್ತು ನೀವು ಬರಲೇ ಇಲ್ಲ. ?

ಯಾವತ್ತು ?

ಎಂದು ನಿಮ್ಮನ್ನು ನೋಡಿದ್ದೆನೋ ಅದರ ಮುಂದಿನ ವಾರ ?

ನಾನು ಆ ದಿನಾನೇ ಬರ್ತೀನಿ ಅಂತ ಹೇಳಿರಲಿಲ್ಲ.

ನೀವು ಹೇಳಿದಿರಿ. ವಾರನೇ ದಿನ ಬರ್ತೀರಲ್ಲಾಂತ ನಾನು ನಿಮಗಾಗಿ ಕಾದೇ ಇದ್ದೆ.

ವಾರನೆಯ ದಿನಾನೇ ಅಂತ ಹೇಳಿರಲಿಲ್ಲ. ಮುಂದೆ ಎಂದಾದರೊಂದು ದಿನ ಬರ್ತೀನಿ ಅಂತ ಹೇಳಿದ್ದೆ. ನೀನು ನಿಜವಾಗಿಯೂ ನನಗೋಸ್ಕರ ಕಾಯ್ತಾ ಇದ್ದಿಯಾ ?

ಹೌದು, ತುಂಬಾ ಹೊತ್ತು. ನನಗೇನೋ ಅವತ್ತು ನೀವು ಬರ್ತೀರ ಅಂತ ಅನ್ನಿಸ್ತಾ ಇತ್ತು.

ಜಮುನಾ ನನಗಾಗಿ ಕಾದಿದ್ದಳು. ಇದನ್ನು ಕೇಳಿ ನನ್ನ ಮನಸ್ಸು ನೀರಿನ ತರಹ ಕರಗಿ ಬಿಟ್ಟಿತು. ಇಷ್ಟು ಮುದ್ದಾದ ಹುಡುಗಿ ನನಗಾಗಿ ಕಾದಿದ್ದಳೇ ? ಅದನ್ನು ಕೇಳಿಯೇ ಎದೆಯೊಳಗೆ ಒಂದು ರೀತಿ ಕಂಪನ ಎದ್ದಿತು. ಎಷ್ಟೊಂದು ಸುಂದರ, ಆಕರ್ಷಣೀಯ ಕಂಠದಿಂದ ಹೇಳಿದ್ದಳು – ನಾನು ನಿಮಗಾಗಿ ಕಾದಿದ್ದೆ ಅಂತ. ಈ ತರಹ ಪರಿಶುದ್ಧವಾದ ಸತ್ಯವನ್ನು ನನ್ನಿಂದಲೂ ಕೂಡಾ ಹೇಳಲಾಗುವುದಿಲ್ಲ. ಯಾರಿಂದಲೂ ಸಾಧ್ಯವಿಲ್ಲ. ಮತ್ತು ಬೇರಿನ್ಯಾವ ಬಾಯಿಂದಲೂ ಕೇಳಿಲ್ಲ. ಜಮುನಾಳನ್ನು ಬಿಟ್ಟು ಮಿಕ್ಕೆಲ್ಲರೂ ಈ ಪ್ರಪಂಚದಲ್ಲಿ ಬೆಳೆದು ದೊಡ್ಡವರಾಗಿ ಬಿಟ್ಟಿದ್ದಾರೆ.

ನಾನೆಂದೆ, ಜಮುನಾ ನಿಜವಾಗಿಯೂ ನಾನು ಆ ದಿನ ಬರಬೇಕೂಂತಲೇ ಇದ್ದೆ. ಆಕಸ್ಮಾತ್ ನಿನ್ನನ್ನು ಆ ದಿನ ನೋಡಿದ ಮೇಲೆ ನನ್ನ ಮನಸ್ಸಿಗೆ ಎಷ್ಟೊಂದು ಸಂತೋಷವಾಯ್ತು ಗೊತ್ತಾ? ದಿನಾ ನಿನ್ನನ್ನು ನೋಡಬೇಕು ಅಂತ ಅನ್ನಿಸುತ್ತೆ. ನಾವಿಬ್ಬರೂ ಇನ್ನು ಸ್ನೇಹಿತರಾಗಿಬಿಟ್ಟೆವು ಅಲ್ವಾ? ಆ ದಿನ ನಾನು ಯಾಕೆ ಬರಲಿಕ್ಕಾಗಲಿಲ್ಲ ಗೊತ್ತಾ? ಅದರ ಮಾರನೆಯ ದಿನವೇ ನಮ್ಮ ದಾದಾಮೊಶಾಯ್ ತೀರಿಕೊಂಡುಬಿಟ್ಟರು.

ಓ ಅದೇ ಗೊತ್ತಾಯ್ತು, ನೀವು ಯಾಕೆ ಚರ್ಮದ ಬೂಟು ಹಾಕಿಕೊಂಡಿದೀರಾ ಅಂತ. ನಿಮಗೆ ಸೂತಕ ಅಲ್ವಾ?

ದಾದಾಮೊಶಾಯ್ ಸತ್ರೆ, ಕೇವಲ ಮೂರು ದಿನ ಮಾತ್ರ ಸೂತಕ, ಅದು ಮುಗೀತು.

ನಡಿ, ನಾನೂ ನೀನೂ ಇಬ್ಬರೂ ಮೆಲ್ಲನೆ ನಡ್ಕೊಂಡು ಮನೆವರೆಗೂ ಹೋಗೋಣ. ಹೋಗ್ತಾ ಹೋಗ್ತಾನೇ ತುಂಬಾ ಮಾತನಾಡಬಹುದು.

ಆದರೆ ಅದು ಇವತ್ತು ಸಾಧ್ಯವಿಲ್ಲ. ಆಗಲೇ ತುಂಬಾ ಹೊತ್ತಾಗಿ ಬಿಟ್ಟಿದೆ. ಇವತ್ತು ಮನೆಯಿಂದ ಎಲ್ಲರೂ ನೈಟ್ ಷೋ ಸಿನೇಮಾಗೆ ಹೋಗ್ತಾ ಇದೀವಿ. ಮನೆಗೆ ಹೋಗುತ್ತಲೇ ಊಟ ಮುಗಿಸಿ, ಅವರುಗಳ ಜೊತೆ ಹೊರಡಬೇಕು. ಅಮ್ಮ ಇವತ್ತು ಸಂಗೀತ ಶಾಲೆಗೆ ಹೋಗೋದೇ ಬೇಡ ಅಂತ ಅಂದಿದ್ದಳು. ಆದರೆ ಮುಂದಿನ ತಿಂಗಳೇ ನನಗೆ ಹಾಡಿನ ಪರೀಕ್ಷೆ.

ಇವತ್ತು ನಿನ್ನನ್ನು ನೋಡೋ ಅದೃಷ್ಟವಿತ್ತು ಅಂತ ಕಾಣುತ್ತೆ. ಅದಕ್ಕೆ ನಿನ್ನನ್ನು ನೋಡೋ ಹಾಗಾಯ್ತು.

ವಾಹ್, ನೀವು ಮನೆಗೆ ಬರಬಾರದೇ? ನಿಮ್ಮ ವಿಷಯ ಅಮ್ಮನಿಗೆ ನಾನು ಆ ದಿನವೇ ಹೇಳಿದ್ದೆ. ಇನ್ನೊಂದ್ಸಲ ನೋಡಿದ್ರೆ, ಬಲವಂತ ಮಾಡಿ ಅವರನ್ನು ಮನೆಗೆ ಕರ್ಕೊಂಡು ಬಾ ಅಂತ ಅಮ್ಮ ಹೇಳಿದ್ದಳು. ಅಕ್ಕ ಕೇಳಿದಳು. ನಿಮಗೆ ಅವಳ ಜ್ಞಾಪಕವಿದೆಯೋ ಅಂತ.

ನಾನೆಂದೆ, ನಿಮ್ಮಕ್ಕನ ಹೆಸರು ಸರಸ್ವತಿ ಅಂತಲ್ವೇ? ಯಾವುದೂ ನೆನಪಿರೋದಿಲ್ಲ, ಏಕೆ?

ಸರಸ್ವತಿಯ ನೆನಪಾದೊಡನೆ ನನಗೆ ಸ್ವಲ್ಪ ಮುಜುಗರವೆನಿಸಿತು. ಅವಳದು ಯಾವ ತರಹದ ಮುಖ ಅಂದ್ರೆ ತಮ್ಮ ಸುಖ ಬಯಸಿ ಇತರರು ಸುಖವಾಗಿರೋದನ್ನು ಯಾರು ಸಹಿಸೋದಿಲ್ವೋ ಆ ತರಹ. ಸರಸ್ವತಿ ನನಗೆ ಯಾವಾಗಲೂ, ಇಷ್ಟವಾಗುತ್ತಿರಲಿಲ್ಲ. ಜಮುನಾಳ ಅಕ್ಕ ಅಂತ ಸ್ವಲ್ಪ ರಿಯಾಯಿತಿ ತೋರಿಸಬಹುದಷ್ಟೇ.

ಜಮುನಾಳೆಂದಳು, ಇವತ್ತು ಬನ್ನಿ.

ಇವತ್ತು ಬಂದು ನಾನೇನು ಮಾಡಲಿ? ಇವತ್ತು ನೀವೆಲ್ಲ ಸಿನೇಮಾಗೆ ಹೊರಟಿದ್ದೀರ.

ಓ ಹೌದಲ್ಲಾ. ಹಾಗಾದ್ರೆ ಮನೆಗೆ ಯಾವಾಗ ಬರ್ತೀರಾ?

ನಿನ್ನ ಸಂಗೀತದ ಕ್ಲಾಸ್ ಇರೋದು ನಾಡದ್ದಲ್ಲವೇ ?

ಹೌದು, ಆರೂವರೆಯಿಂದ ಎಂಟರವರೆಗೆ. ಓ ಅಲ್ಲಿ ಬಸ್ ಬರ್ತಾ ಇದೆ....

ನಡಿ ಹತ್ತು. ನಾನು ನಿನ್ನ ಜೊತೆ ಬಸ್ ಹತ್ತುತ್ತೇನೆ. ನಾನೂ ಆ ಕಡೇನೇ ಹೋಗಬೇಕು. ಬನ್ನಿ ಬೇಗ ಬನ್ನಿ, ತುಂಬಾ ಗದ್ದಲವಿದೆ....

ನಿಜವಾಗಿಯೂ ಬಸ್ ಕಿಕ್ಕಿರಿದಿತ್ತು. ಯಾವಾಗಲೂ, ಯಾರಾದರೊಬ್ಬರು ಬಸ್ ಹತ್ತಿ ಜಾಗವನ್ನು ಆಕ್ರಮಿಸಿಕೊಂಡು ಬಿಟ್ಟಿರ್ತಾರೆ. ಈ ಜನರಿಗೆ ಈ ನೂಕು ನುಗ್ಗಲೇ ಏಕೆ ಬೇಕು ? ಬಸ್ಸಿನ ಗುಂಪಿನ ಜನರನ್ನು ನೋಡಿ, ನನ್ನ ಮೈ ಉರಿಯಿತು. ಅಂತೂ ಜಮುನಾ ಹಾಗೂ ಹೀಗೂ ಮಾಡಿ ಬಸ್ ಹತ್ತಿಯೇ ಬಿಟ್ಟಳು. ನಾನು ಅವಳಿಗೆಂದೆ, ನಡಿ, ಮೇಲ್ಗಡೇನೇ ಹೋಗೋಣ. ಮೆಟ್ಟಲಿನ ಹತ್ತಿರದ ಜನರು ಜಮುನಾಳಿಗೆ ಜಾಗ ಬಿಟ್ಟೊಡನೆ, ನಾನೂ ನುಗ್ಗಿ ಹತ್ತಿಬಿಟ್ಟೆ. ಯಾರೊಬ್ಬರೂ ಜಮುನಾಳೊಂದಿಗೆ, ಅಸಭ್ಯ ರೀತಿಯಲ್ಲಿ ವರ್ತಿಸದಂತೆ, ಜಾಕರೂಕನಾಗಿದ್ದೆ. ಒಂದು ವೇಳೆ ಅಸಭ್ಯ ರೀತಿಯಿಂದ ವರ್ತಿಸಿ, ಜಮುನಾಳ ಶರೀರವನ್ನೇನಾದರೂ ಮುಟ್ಟಿದರೆ ಆಗ ನಾನು ಹಿಮ್ಮಡಿ ಹಾಕಿಸಿರುವ ಬೂಟಿನಿಂದ ಅವರ ಕಾಲುಗಳನ್ನು ಕತ್ತರಿಸಿ ಬಿಡಬೇಕೆಂದುಕೊಂಡೆ. ಮೇಲ್ಗಡೆ ಕುಳಿತುಕೊಳ್ಳಲು ಸ್ಥಳವಿರಲಿಲ್ಲ. ಲೇಡೀಸ್ ಸೀಟಿನಲ್ಲಿ, ಒಬ್ಬಾಕೆಯ ಪಕ್ಕದಲ್ಲಿ, ಯುವಕನೊಬ್ಬ ಕುಳಿತಿದ್ದ. ಜಮುನಾಳನ್ನು ನೋಡುತ್ತಲೇ, ಅವಳಿಗೆ ಸೀಟು ಬಿಟ್ಟು ಕೊಟ್ಟು ನನ್ನ ಪಕ್ಕದಲ್ಲಿ ಬಂದು ನಿಂತುಕೊಂಡ. ನಾವಿಬ್ಬರೂ, ಒಬ್ಬರನ್ನೊಬ್ಬರು ಬೇಸರದಿಂದ ನೋಡಿಕೊಂಡೆವು. ಜಮುನಾಳ ಬೆನ್ನಿನ ಹತ್ತಿರ, ಸೀಟಿನ ಮೇಲೆ ನನ್ನ ಕೈ ಇತ್ತು.

ಮನೆ ಹತ್ತಿರವಾಗುತ್ತಿದ್ದಂತೆಯೇ, ಜಮುನಾ ಎದ್ದು ನಿಂತಳು. ನೀವು ಇಳಿಯೋದಿಲ್ವೆ ಎಂದು ಕೇಳಿದಳು.

ನಾನೆಂದೆ, ಇಲ್ಲ. ನೀನು ಇಳಿದು ಬಿಡು. ಇನ್ನೊಮ್ಮೆ ನೋಡೋಣ. ಅಷ್ಟರಲ್ಲೇ ಒಂದು ಸೀಟು ಖಾಲಿಯಾಗುತ್ತಲೇ ನಾನು ಅಲ್ಲಿ ಕುಳಿತುಕೊಂಡು, ರಸ್ತೆಯನ್ನು ದಿಟ್ಟಿಸತೊಡಗಿದೆ. ಜಮುನಾ ಬಸ್ಸಿನಿಂದ ಜಿಗಿದು, ಸ್ವಲ್ಪ ದೂರ ಓಡಿದಳು, ಅನಂತರ ಮೇಲೆ ದಿಟ್ಟಿಸಿದಳು. ನನ್ನನ್ನು ನೋಡಿ ಹೂವರಳುವಂತೆ ಮುಗುಳ್ನಕ್ಕಳು. ನಾನು ಕಿಟಕಿಯಿಂದ ನನ್ನ ಕೈ ಚಾಚಿ, ನನ್ನ ನಗುವನ್ನು ಅವಳಿಗೆ ಮುಟ್ಟಿಸಿದೆ.

ಅನಂತರ ನನ್ನ ಮನಸ್ಸಿಗೆ ಹೊಳೆಯಿತು. ಈ ಬಸ್ಸಿನಲ್ಲಿ ನಾನು ತುಂಬಾ ಹೊತ್ತು ಕುಳಿತಿರಬೇಕಾಗುತ್ತೆ. ನಿಜವಾಗಿ ಹಾಗೆಯೇ ಇದ್ದೆ. ಬಸ್ ಡಿಪೋಗೆ ಬಂದು ನಿಂತ ಮೇಲೂ ನಾನು ಸುಮ್ಮನೆ ಮೇಲ್ಗಡೆ ಕಿಟಕಿಯಿಂದ ನೋಡುತ್ತಲೇ ಕುಳಿತಿದ್ದೆ. ಈಗ ಸಿಗರೇಟ್ ಹೊತ್ತಿಸಿದರೆ, ಯಾರೂ ಆಕ್ಷೇಪಿಸುವುದಿಲ್ಲ. ಅನಂತರ ಪುನಃ ಬಸ್ ಬಿಟ್ಟಾಗ, ನನಗೆ ಸ್ವಲ್ಪ ಕಣ್ಣೆಳೆದಂತಾಗಿ ನಿದ್ದೆ ಬಂತು. ಸ್ವಲ್ಪ ಜೊಂಪಿನಲ್ಲೇ ಬಸ್‌ನಲ್ಲಿ ಕುಳಿತು, ದೀರ್ಘ ಪ್ರಯಾಣದ ನಂತರ ನಾನು ಇಳಿದು, ನೇರವಾಗಿ ಮನೆಗೆ ಹೊರಟು ಬಂದೆ. ಮನೆಯೊಳಗೆ ಹೋಗುವ ಮುನ್ನ ನನ್ನ ಬಾಯಿಂದ ಸುಂದರವಾದ ನಿಶ್ವಾಸ ಹೊರ ಹೊಮ್ಮಿತು.

ಟೆಲಿಫೋನ್ ದೊಡ್ಡ ಭಾವನವರದು. ಹಾಗೆಂದು ಸ್ನೇಹಿತರುಗಳಿಗೆ ನಾನು ಹೇಳಿ

ಬಿಟ್ಟಿದ್ದೆ, ಸಂಜೆಯ ಮೇಲೆ ಯಾರೂ ನನಗೆ ಫೋನ್ ಮಾಡಬೇಡಿ ಎಂದು. ಅಲ್ಲಿ ಟೆಲಿಫೋನ್‌ನಲ್ಲಿ ಮಾತನಾಡಲು ತುಂಬಾ ಸಂಕೋಚವಾಗುತ್ತೇಂತ ಅವರಿಗೆಲ್ಲ ಹೇಳಿದ್ದೆ. ಯಾವತ್ತು ಪಾರ್ಟಿ ಅಥವಾ ಅಪಾಯಿಂಟ್‌ಮೆಂಟ್ ಇರೋದಿಲ್ವೋ ಅಂಥಾ ದಿನಗಳಲ್ಲಿ ಭಾವನವರು ಮನೆಗೆ ಹಿಂತಿರುಗಿ ಬಿಡುತ್ತಿದ್ದರು. ಮನೆಯಲ್ಲೇ ಕುಳಿತು, ಆಫೀಸಿನ ಕೆಲಸ ಕಾರ್ಯ ಮಾಡಿಕೊಳ್ಳುತ್ತಿದ್ದರು. ಪಬ್ಲಿಸಿಟಿ ಲೈನಿನ ಮನುಷ್ಯ. ಆದ್ದರಿಂದ ವರ್ಷವಿಡೀ ಅವರು ಪಾರ್ಟಿಗಳಿಗೆ ಹೋಗುತ್ತಲೇ ಇರಬೇಕಾಗುತ್ತೆ. ಆದಕ್ಕೆ ಅವರಿಗೆ ಗುಂಡು ಹಾಕೋದು ಅಭ್ಯಾಸವಾಗಿ ಹೋಗಿಬಿಟ್ಟಿದೆ. ಮನೆಯಲ್ಲೂ ಅವರು ಬಾಟಲಿ ತಂದಿಟ್ಟುಕೊಂಡಿರುತ್ತಿದ್ದರು. ಕೆಲಸ ಮಾಡುವಾಗ, ಸಂಜೆ ಹೊತ್ತು ಅಲ್ಪ ಸ್ವಲ್ಪ ಕುಡಿಯುತ್ತಿದ್ದರು. ಆ ಸಮಯದಲ್ಲಿ ಅವರಿಗೆ, ಯಾರೂ ತೊಂದರೆ ಮಾಡಬಾರದೆಂದು, ಅಕ್ಕ ಮನೆಯಲ್ಲಿ ಕಟ್ಟಾಜ್ಞೆ ವಿಧಿಸಿದ್ದಳು.

ರಾತ್ರಿ ಹನ್ನೊಂದೂವರೆ ಸುಮಾರು, ದೊಡ್ಡಕ್ಕ ನನ್ನ ಕೋಣೆಯ ಬಾಗಿಲನ್ನು ಬಡಿದು ಹೇಳಿದಳು, ಮಲಗಿ ಬಿಟ್ಟೆಯೋ ಏನೋ ? ಯಾರೋ ನಿನಗೆ ಫೋನ್ ಮಾಡಿದ್ದಾರೆ.

ನಾನು ಪರದೆ ಸರಿಸಿ, ಕಾಗದ ಪತ್ರಗಳನ್ನು ಬದಿಗಿಟ್ಟು ಬಂದೆ. ಈ ಹೊತ್ತಿನಲ್ಲಿ ನನಗ್ಯಾರು ಫೋನ್ ಮಾಡಿರಬಹುದು ? ಭಾವನವರಿಗೆ, ಆ ಸಮಯದಲ್ಲಿ ತೊಂದರೆ ಕೊಡಲು, ನಿಜವಾಗಿಯೂ ನನಗೆ ನಾಚಿಕೆಯಾಯಿತು. ಭಾವನವರು ಆಗಲೇ ಮಲಗಿಬಿಟ್ಟಿದ್ದರು. ಹಾಸಿಗೆಯ ಮೇಲೆ, ಒಂದು ಕೈ ಮೇಲೆ ಮುಖವಿಟ್ಟು ಮಲಗಿಕೊಂಡಿದ್ದರು. ಕೆಲಸ ಮಾಡುತ್ತಲೋ, ಹಾಗೇ ಯೋಚನೆ ಮಾಡುತ್ತಲೋ ಅವರಿಗೆ ನಿದ್ದೆ ಬಂದು ಬಿಟ್ಟಿರಬೇಕು.

ಮೇಜಿನ ಮೇಲಿನಿಂದ ಅಕ್ಕ ಬಾಟಲಿ, ಲೋಟಗಳನ್ನು ಸರಿಸಿಟ್ಟಳು. ಕೋಣೆಯ ತುಂಬಾ ಹಗುರವಾಗಿ, ರಮ್‌ನ ವಾಸನೆ ಹಬ್ಬಿತ್ತು. ನಾನು ಟೆಲಿಫೋನ್ ಎತ್ತಿ ಮೃದು ಸ್ವರದಲ್ಲಿ ಪ್ರಶ್ನಿಸಿದೆ, ಹಲೋ ? ಯಾರು ?

ಬಹರಾಂಪುರದಲ್ಲಿದ್ದಾಗ, ಬೆಳಗಿನ ಜಾವ ಯಾವ ರೀತಿ ಶೇಖರ ಬಂದು ಕಿಟಕಿಯಿಂದ ಪಿಸುಗುಟ್ಟುತ್ತಿದ್ದನೋ, ಅದೇ ತರಹದ ದನಿಯಲ್ಲಿ ಹೇಳಿದ, ಏಯ್ ಸುನೀಲ್, ಇಷ್ಟು ಬೇಗ ಮನೆಗೆ ಬಂದು ಏನೋ ಮಾಡ್ತಾ ಇದೀಯ ? ನೀನು ಈ ಕಡೆ ಬರಲೇ ಇಲ್ಲ ಯಾಕೆ ?

ತುಂಬಾ ದಿನಗಳ ನಂತರ ಶೇಖರನ ದನಿ ಕೇಳಿದೆ. ಯಾವುದೋ ರಹಸ್ಯವನ್ನು ಅರಿತು, ತುಂಬಾ ಉನ್ಮತ್ತನಾದಂತಿದ್ದ. ನಾನು ಸ್ವಲ್ಪ ಬೇಸರಗೊಂಡೆ. ಅತ್ತಿತ್ತ ನೋಡಿದೆ, ಕೋಣೆಯಲ್ಲಿ ಅಕ್ಕ ಇರಲಿಲ್ಲ. ಭಾವನವರು ನಿಜವಾಗಿಯೂ ಮಲಗಿಬಿಟ್ಟಿದ್ದರು. ನಾನು ಪ್ರಶ್ನಿಸಿದೆ, ಎಲ್ಲಿದೀಯೋ ನೀನು ಈಗ ?

ಐದನೇ ನಂಬರಿನ ಮನೇನಲ್ಲಿ, ವೀಣಳ ಹತ್ತಿರ. ತುಂಬಾ ಚೆನ್ನಾಗಿ ಗುಂಪು ಸೇರಿದೆ. ಈಗಲೇ ಹೊರಟು ಬಾ.

ಈಗ್ಲೇನಾ ? ಇಲ್ಲ...

ತಥ್, ಬಾ ಅಂದ್ರೆ ಬರಬೇಕಪ್ಪಾ. ಬಂದರೆ ನಿನ್ನಿಂದ ಯೋಚಿಸಲೂ,

ಅಸಾಧ್ಯವಾದದ್ದನ್ನು ಕಾಣಬಹುದು. ನಿನ್ನ ಆಫೀಸಿಗೆ ಸುದ್ದಿ ತಿಳಿಸಿದ್ದೆ. ಅವರು ತಿಳಿಸಲಿಲ್ಲವೇ ?

ಸಿಕ್ಕಿತ್ತು, ಆದರೆ ಒಂದು ವಿಶೇಷವಾದ ಕೆಲಸವಿತ್ತು.

ಇಲ್ಲಿ ತುಂಬಾ ಜನ ಸೇರಿದೀವಿ. ಮನೆಯಿಂದ ತಕ್ಷಣ ಹೊರಟು ಬಾ.

ನನಗೆ ವಿಪರೀತ ತಲೆನೋವು, ಬಹುಶಃ ಜ್ವರ ಇದೆ ಅಂತ ತೋರುತ್ತೆ.

ನೀನು ಸಂಜೆ, ಪರೀಕ್ಷಿತನಿಂದ ತಪ್ಪಿಸಿಕೊಂಡು ಎಲ್ಲಿ ಹೊರಟು ಹೋಗಿದ್ದಿ ?

ಅದೇ ಹೇಳಿದೆನಲ್ಲ ಆರೋಗ್ಯ ಸರಿ ಇರಲಿಲ್ಲ ಅಂತ. ಆಗ ಜ್ವರ ಇತ್ತು.

ನೀನು ಹೊರಟು ಬಂದು ನೋಡಿದ್ರೆ ನಿನಗೇ ಗೊತ್ತಾಗುತ್ತೆ ಏನು ಅಂತ. ಒಂದೇ ನಿಮಿಷದಲ್ಲಿ ನಿನ್ನ ಜ್ವರ ಬಿಟ್ಟು ಹೋಗುತ್ತೆ. ಬೇಕಾದ್ರೆ ಮಾತು ಕೊಡ್ತೇನೆ. ನನ್ನನ್ನು ನಂಬು. ಖಂಡಿತ ಹೊರಟು ಬಂದುಬಿಡು.

ಶೇಖರ, ಯಾಕೆ ನನಗೆ ತೊಂದರೆ ಕೊಡ್ತಾ ಇದೀಯಾ ? ಹೇಳ್ತಾ ಇದೀನಲ್ಲಾ ಬರೋಕಾಗೋಲ್ಲಾ ಅಂತ.

ನಿಲ್ಲು, ನಿಲ್ಲು, ಫೋನ್ ಇಡಬೇಡ. ಹಾಗಾದ್ರೆ ನಾಳೆ ಆಫೀಸು ಬಿಟ್ಟ ಮೇಲೆ ನೇರವಾಗಿ ಇಲ್ಲಿಗೇ ಬಂದು ಬಿಡು.

ಸರಿ ಬರ್ತೀನಿ.

ಖಂಡಿತ ಬರಬೇಕು. ಇಲ್ಲಿಗೆ ನೂರ್‌ಜಹಾನ್ ಬಂದಿದ್ದಾಳೆ, ತುಂಬಾ ಇಂಟರೆಸ್ಟಿಂಗ್ ವಿಷಯ.

ನೂರ್‌ಜಹಾನ್ ಯಾರು ?

ನಿನಗೆ, ನೆನಪಿಲ್ಲವೇ ? ವೀಣಾಳ ಅಕ್ಕ ನೂರ್‌ಜಹಾನ್. ಕೆಲವು ದಿನದಿಂದ ಕೇವಲ ಅವಳ ಅಳುವನ್ನು ನೋಡ್ತಾ ಇದೀನಿ. ಸುಂದರ ಯುವತಿಯ ಅಳು ಕೂಡಾ ನೋಡೋದಕ್ಕೆ ಎಷ್ಟೊಂದು ಚೆನ್ನಾಗಿರುತ್ತೆ.

ಸರಿ, ಸರಿ, ಗೊತ್ತಾಯ್ತು. ನಾನು ಈಗ ಇಟ್ಟುಬಿಡ್ತೀನಿ.

ಛೆ, ಇವತ್ತು ನೀನು ಬರಲಿಲ್ಲ. ನಾಳೆ ಖಂಡಿತ ಬರ್ತೀಯಾ ತಾನೆ. ನನಗೆ ನಿನ್ನ ಅಗತ್ಯ ಬಹಳವಿದೆ. ನಾಳೆ ಸಂಜೆ ನಿನ್ನ ಆಫೀಸಿಗೇ ಫೋನ್ ಮಾಡ್ತೀನಿ.

ಮನೆಯಿಂದ ಕದ್ದುಮುಚ್ಚಿಟ್ಟುಕೊಂಡು, ಬೇರೆ ಸ್ಥಳದಲ್ಲಿ ರಾತ್ರಿ ಕಳೀತಾ ಇದೀಯಲ್ಲ. ಇದೇನಿದು ನಿನ್ನ ಹುಡುಗಾಟ ? ಶೇಖರನ ನಗುವಿನ ದನಿ ಕೇಳಿ ಬಂತು.

ಎಂಥಾ ಮುಚ್ಚುಮರೆ ಇಲ್ಲದ ನಗು !

ಅವನೆಂದ, ಹುಡುಗಾಟ ಅಲ್ವೋ, ನೀನು ಬಂದ್ರೆ ಗೊತ್ತಾಗುತ್ತೆ. ಸರಿ ಈಗ ಇಟ್ಟು ಬಿಡ್ತೇನೆ.

ಆದರೆ ನಾಳೆ ಸರಿಯಾಗಿ.....

ಆ ದಿನ ನಾನು ನಿದ್ದೆಯಲ್ಲಿ ಘೋರ ದುಃಸ್ವಪ್ನಗಳನ್ನು ಕಂಡೆ. ನಿಜವಾಗಿಯೂ ನನ್ನ ನಿದ್ದೆ ದುಃಸ್ವಪ್ನದಿಂದಾಗಿ ಭಂಗವಾಗುತ್ತಿತ್ತು ಮತ್ತು ಅದೇ ನಿದ್ದೆಯಾಗಿತ್ತು. ನಾನು ಬೇಸರದಿಂದ ಮಗ್ಗುಲು ಬದಲಾಯಿಸಿದೆ. ಆಗ ಪುನಃ ಇನ್ನೊಂದು ದುಃಸ್ವಪ್ನ. ಪೂರ್ವ ಬಂಗಾಲದ ಗ್ರಾಮದಲ್ಲಿ ಅದೇ ವಿಶಾಲವಾದ ವಟವೃಕ್ಷದಲ್ಲಿ ಹಾವಿನ ಸದ್ದು.

ಅದರಲ್ಲೇ ಯಾರೋ ಒಬ್ಬರು ಹಗ್ಗದಿಂದ ನೇಣು ಹಾಕಿಕೊಂಡಿದ್ದಾರೆ... ಮನೀಷ ನಗುನಗುತ್ತ ಬಂದು ಶೇಖರನ ಎಲೆಗಳನ್ನು ಮುಟ್ಟಿಬಿಟ್ಟಳು. ನಾನು ಅರುಣನಿಗೆ ಹೇಳಿದೆ, ಖಂಡಿತವಾಗಿಯೂ ಯಾವೊಂದು ಹುಚ್ಚರ ಗುಂಪಿನಲ್ಲೂ ಸ್ಥಳ ದೊರಕ್ತಾ ಇಲ್ಲ. ಮನೀಷಳಿಂದ ನನಗೆ ತುಂಬಾ ತೊಂದ್ರೆಯಾಯಿತು. ಅರುಣ ಚಿಂತಿತನಾಗಿ ಹೇಳಿದ, ಅವಳನ್ನು ಆನಂದನ ಮನೆಗೆ ಕಳಿಸೋಣ ಅಂತ ಅಂದ್ಕೋತಾ ಇದೀನಿ... ಬಾರೀನ್‌ದಾ ಒಂದು ಕಬ್ಬಿಣದ ಸಲಾಕೆಯನ್ನು ಎತ್ತಿ ನನ್ನ ತಲೆಗೆ ಹೊಡೆದ. ನನ್ನ ತಲೆ ಒಡೆದು ಮಿದುಳು ಹೊರ ಬಂದಿತು. ಅವಿನಾಶನ ಮೈಮೇಲೆ ಬೀಳುತ್ತಲೇ ಅವನೆಂದ, ನೀನೇನೂ ಯೋಚಿಸಬೇಡ. ನಾನು ಬಾರೀನ್‌ಗೆ ಎಂಥಾ ಪಾಠ ಕಲಿಸ್ತೀನಿ ಎಂದರೆ... ಎಷ್ಟೋ ಸಲ ಬಾಗಿಲ ಚಿಲಕ ಹಾಕಲು ಪ್ರಯತ್ನಿಸ್ತಾನೆ, ಆದರೆ ಅದು ಬಿದ್ದೂ ಬಿದ್ದೂ ಹೋಗತ್ತೆ. ಹೊರಗಿನಿಂದ ಯಾರೋ, ಬಾಗಿಲನ್ನು ದೂಡುತ್ತಿದ್ದಾರೆ, ನಾನು ಪ್ರಾಣವನ್ನೇ ಮುಡಿಪಾಗಿಟ್ಟು ಬಾಗಿಲನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದೇನೆ, ಇನ್ನು ನನ್ನಿಂದ ಸಾಧ್ಯವಿಲ್ಲ. ಅಷ್ಟರಲ್ಲೇ ಅವನು ಒಳ ನುಗ್ಗಿ ಬರುತ್ತಾನೆ. ತಾಪಸ ಹೇಳಿದ, ನಿನಗೆ ಗೊತ್ತಿದೆಯೇನೋ, ಛಾಯಾಳ ಮನಸ್ಸಿಗೆ ತುಂಬಾ ಬೇಸರವಾಗಿದೆ. ಅವಳ ಮೈಮೇಲಿನ ಕಲೆ ಕ್ರಮೇಣ ಹೆಚ್ಚಾಗ್ತಾ ಇದೆ. ಅವಳ ಅನಿಸಿಕೆ ಏನೆಂದರೆ, ನಾನು ಅವಳನ್ನು ಮುಟ್ಟಿಬಿಟ್ಟರೆ, ನನಗೂ ಬಿಳುಪಾಗಿ ಬಿಡುತ್ತೇಂತ. ನಾನು ನೋಡಿದೆ, ಒಬ್ಬ ಪ್ಯೂನ್ ಪತ್ರ ಕೊಡಲೆಂದು ಕೈಮುಂದೆ ಮಾಡಿದ್ದಾನೆ. ಅವನ ಮೈಮೇಲೆಲ್ಲ ಬಿಳಿ ಬಿಳಿ ಮಚ್ಚೆ. ಅವನಿಗೆ ಕುಷ್ಟ ತಗುಲಿದೆ. ಅದೇ ಕೈಯಲ್ಲಿ ಪತ್ರ ಹಿಡಿದಿದ್ದಾನೆ. ನಾನೆಂದೆ, ನನಗೆ ಆ ಪತ್ರ ಬೇಕಿಲ್ಲ. ಪತ್ರ ಓದದೆ ಹಿಂತಿರುಗಿ ಕೊಡುವ ನಿಯಮವಿಲ್ಲ. ನಾನು ಪತ್ರವನ್ನು ಇಸಿದುಕೊಂಡೊಡನೆ ಅದು ಹಾರತೊಡಗಿತು.....

ಅವೆಲ್ಲ ಬರೀ ಸುಳ್ಳು ಕನಸುಗಳು. ಹಾಸಿಗೆಯಿಂದೆದ್ದು ನಾನು ಗಟಗಟನೆ ಸ್ವಲ್ಪ ನೀರು ಕುಡಿದೆ. ನೀರಿನ ರುಚಿ ಅಷ್ಟೇನೂ ಚೆನ್ನಾಗಿರಲಿಲ್ಲ. ರಾತ್ರಿ ಗುಂಡು ಹಾಕಿದರೆ, ಬೆಳಗಿನ ಹೊತ್ತಿನ ನೀರಿನ ರುಚಿ, ಯಾವ ತರಹ ಸಿಹಿಯಾಗಿರುತ್ತೇಂತ, ಮತ್ತಿನ್ಯಾವಾಗಲೂ ಆ ರೀತಿ ಇರೋದಿಲ್ಲ. ಯಾರು ಜೀವನದಲ್ಲಿ, ಒಮ್ಮೆಯೂ ಹೆಂಡ ಕುಡಿದಿಲ್ಲವೋ ಅವರು ನೀರಿನ ನಿಜವಾದ ರುಚಿಯನ್ನು ಅರಿಯಲು ಸಾಧ್ಯವೇ ಇಲ್ಲ. ರಾತ್ರಿಯ ಹೊತ್ತು, ನಿದ್ದೆಯಿಂದೆಚ್ಚೆತ್ತು, ಒಂದು ಸಲ ದೀಪ ಹಾಕಿದರೆ, ಆಗ ಕನಸುಗಳು ನಿಲ್ಲುತ್ತವೆ ಅಂತ ಕೇಳಿದ್ದೆ. ಇರಲಿ ಕನಸುಗಳು ನಿಲ್ಲುವ ಅವಶ್ಯಕತೆ ಏನಿಲ್ಲ. ಅಮ್ಮ ಅಪ್ಪ ಮಧ್ಯಾಹ್ನವೇ ಬಹರಾಂಪುರಕ್ಕೆ ಹೊರಟು ಹೋಗಿದ್ದಾರೆ. ಅಪ್ಪನ ಮಂಚ ಇನ್ನೂ ನನ್ನ ಕೋಣೆಯಲ್ಲೆ ಹಾಕಲ್ಪಟ್ಟಿದೆ. ನಾನು ಕತ್ತಲಲ್ಲಿಯೇ ನನ್ನ ಮಂಚ ಬಿಟ್ಟು, ಅಪ್ಪನ ಮಂಚದ ಮೇಲೆ ಮಲಗಿಕೊಂಡೆ. ಹಾಸಿಗೆ ಬದಲಾಯಿಸಿ ಏಕೆ ನೋಡಬಾರದೆಂದೆನಿಸಿತು. ಈ ಭಯಂಕರ ಸ್ವಪ್ನಗಳ ಬದಲು, ಒಂದು ಚಿಕ್ಕ ಸುಂದರವಾದ ಸ್ವಪ್ನವನ್ನಾದರೂ ನಾನು ಕಾಣಬಾರದೆ? ನಾನು ಕಣ್ಣುಮುಚ್ಚಿಕೊಂಡೆ. ಜಮುನಾಳ ಹಗುರವಾದ ಮುಖ ಕತ್ತಲಲ್ಲಿ ತೇಲಿ ಬಂತು. ಒಂದು ಸ್ವಪ್ನದ ಆಹ್ವಾನವನ್ನು ತಿಳಿಸಿದೆ. ರಾತ್ರಿ ಗಾಢವಾದ ನಿದ್ದೆ ಹತ್ತಿತು. ಇನ್ನು ಬೇರಿನ್ನಾವ ಸ್ವಪ್ನವಿಲ್ಲ.

ನಿದ್ರೆಯಿಂದ ಎದ್ದೊಡನೆ, ಈ ಶೇಖರನಿಂದ ಯಾವ ರೀತಿ ತಪ್ಪಿಸಿಕೊಳ್ಳೋದೆಂದು ನನಗೆ ದೊಡ್ಡ ಯೋಚನೆಯಾಯಿತು. ನಾನು ಹಾಗೂ ಶೇಖರ ಇಬ್ಬರೂ ಒಟ್ಟಿಗೆ, ಜೀವನವನ್ನು ಪ್ರಾರಂಭಿಸಿದ್ದೆವು. ಆದರೆ, ಜೀವನವಿಡೀ ಒಟ್ಟಾಗಿಯೇ ನಡೆಯಬೇಕೆಂಬ ನಿಯಮವೇನಿಲ್ಲ. ನಾನು ವಿರಕ್ತನಾಗಿ ಬಿಟ್ಟಿದ್ದೇನೆ. ಶೇಖರನಂತೆ ಹೊಸ ಹೊಸ ರೋಮಾಂಚನವನ್ನು, ಹುಡುಕೋದ್ರಲ್ಲಿ ನನಗಿನ್ನು ಆಸಕ್ತಿ ಇಲ್ಲ. ವಾಸ್ತವವಾಗಿ ಎಲ್ಲಿಯೂ ರೋಮಾಂಚನವೆನ್ನುವುದೇ ಇಲ್ಲ. ಖಂಡಿತವಾಗಿಯೂ ಆಶ್ಚರ್ಯಚಕಿತನಾಗುವುದನ್ನು ಮರೆತೇ ಬಿಟ್ಟಿದ್ದೇನೆ. ಎಲೆಕ್ಟ್ರಿಕ್ ದೀಪ ಹತ್ತಿಸುತ್ತಲೇ, ಒಮ್ಮೆಗೇ ಥಟ್ಟನೆ ಭೂತ ಹೂವಿನಬಳ್ಳಿಯಾಗಿಬಿಡುತ್ತೆ. ಅದೇ ತರಹ, ಮನುಷ್ಯನನ್ನು ವಾರೆಗಣ್ಣಿಂದಲೇ ಸ್ವಲ್ಪ ನೋಡಿದರೆ ಅವನ ಅವಗುಣಗಳೆಲ್ಲ ಹೊರಬೀಳುತ್ತೆ. ಪ್ರತಿಯೊಬ್ಬನೂ ಲಜ್ಜೆಯಿಂದ ಹೇಳಿಬಿಡ್ತಾನೆ, ಹೌದು ನಾನೂ ನಿನ್ನ ತರಹಾನೇ. ಇತರರೂ ನನ್ನ ತರಹಾನೇ. ಇದನ್ನು ತಿಳಿದು ನನಗೇನೂ ಅನಿಸೋದಿಲ್ಲ. ನಾನೂ ಕೂಡಾ ಇತರರೊಂದಿಗೆ ಹೋಲಿಸಿಕೊಳ್ಳಲು ಸಾಧ್ಯ. ಇದರಿಂದ ಸ್ವಲ್ಪ ಅಸ್ವಸ್ಥನಾಗಬೇಕೇ. ಹಾಗಾದ್ರೆ ಆತ್ಮರಕ್ಷಣೆಯು ಅಷ್ಟೊಂದು ಪ್ರಯೋಜನವಿಲ್ಲವೇ. ಈಗ ನೆಲದ ಮೇಲೆ ನಾನು ಸ್ಥಿರನಾಗಿ ನಿಲ್ಲಲು ಸಾಧ್ಯವಾಗಿದೆ. ಬೆಕ್ಕನ್ನು ಒಂದು ವೇಳೆ ಮೇಲೆ ಎತ್ತರಕ್ಕೆ ಎತ್ತಿ ಹಿಡಿದರೆ, ಅದರ ಬಚ್ಚಿಟ್ಟುಕೊಂಡ ಎಲ್ಲ ಉಗುರುಗಳೂ ಹೊರ ಬರುತ್ತವೆ. ನಾನು ಅಪ್ಪಟ ಹಳ್ಳಿ ಹುಡುಗ, ಅದಲ್ಲದೆ ಬಂಗಾಲದವ ಹಾಗೂ ರೆಫ್ಯೂಜಿ ಉಗುರು ಬಿಚ್ಚಿ ತಯಾರಾಗಿ ಬಿಟ್ಟಿದ್ದೇನೆ. ಈ ಪಟ್ಟಣ ದೊಡ್ಡದು, ಅದರಿಂದೇನಾಗಬೇಕಾಗಿದೆ. ತನಗಿಂತ ಹತ್ತು ಪಟ್ಟು ಶಕ್ತಿಶಾಲಿಯಾದ ನಾಯಿಯು ಎದುರು ಬಂದಾಗಲೂ ಬೆಕ್ಕು ಥಟ್ಟನೆ, ಸೆಟೆದುಕೊಂಡು ನಿಲ್ಲುವುದಿಲ್ಲವೇ ? ಆಮೇಲೆ ನನಗನ್ನಿಸಿತು, ಈ ಪಟ್ಟಣವಿಡೀ ಹುಚ್ಚರ ಸಂತೆ, ಇಲ್ಲಿಯವರ ತಲೆಯೂ ಚೆನ್ನಾಗಿಲ್ಲ. ನಜರೂಲ್ ಇಸ್ಲಾಮರ* ತರಹ ಈ ಕಲ್ಕತ್ತೆ – ತನ್ನ ಸ್ವಂತ ಆಪತ್ತು ಅಥವಾ ಗೌರವದ ಬಗ್ಗೆ ತೀರಾ ಉದಾಸೀನವಾಗಿದೆ. ಇಲ್ಲಿ ನನಗೇನೂ ತೊಂದರೆ ಇಲ್ಲ. ಇಲ್ಲಿ ನನಗೆ ಸಮಸ್ಯೆ ಎನಿಸಿದ್ದು, ನನಗೆ ಸರಿಯಾದ ಸ್ಥಳವನ್ನು ದೊರಕಿಸಿಕೊಳ್ಳುವುದರ ಬಗ್ಗೆ ಮಾತ್ರ. ಶೇಖರನಿಗೆ ಆ ಸಮಸ್ಯೆಯೂ ಇಲ್ಲ. ಶೇಖರನಿಗೆ ಅಗತ್ಯವಿರುವುದು, ತನ್ನ ಸ್ಥಳದಿಂದ ಹೇಗೆ ಹೊರಬರುವುದು ಎಂದು ಮಾತ್ರ. ಹೊರ ಬಂದು ಎಲ್ಲಿಗೆ ಹೋಗಲಿ ಎಂದವನು ಯೋಚಿಸುತ್ತಿರುತ್ತಾನೆ. ಆದರೆ ನಾನು ಹೊರಗಿನಿಂದ ಬಂದವನು, ನಾನು ಎಲ್ಲಿ ನೆಲೆಗೊಳ್ಳಲಿ ಎನ್ನುವುದರ ಬಗ್ಗೆ ಯೋಚಿಸ್ತಾ ಇದೀನಿ. ಇದಕ್ಕಾಗಿ ಎಲ್ಲಾ ಭೂಮಿಯನ್ನು ಒತ್ತೆ ಇಡಬೇಕಾಗಿ ಬಂದಿದೆ. ಆದರೂ ನನಗೆ ಸ್ವಲ್ಪ ಪ್ರಯೋಜನವಾಗಿದೆ.

ಈಗ ಶೇಖರನಿಂದ, ತಪ್ಪಿಸಿಕೊಂಡು ಹೋಗೋದು ಅಷ್ಟೇನೂ ಸುಲಭವಲ್ಲ. ಸಂಜೆ ಎಲ್ಲಿಗೇ ಹೋಗಿರಲಿ, ಹುಡುಕಿ, ಹೊರಗೆಳೆದು ಬಿಡುತ್ತಾನೆ. ಶೇಖರನಿಲ್ಲದಿದ್ದರೂ, ಸುವಿಮಲ ಅಥವಾ ತಾಪಸ ಅಥವಾ ಪರೀಕ್ಷಿತ ಇನ್ಯಾರಾದ್ರೂ

*ಬಾಂಗ್ಲಾದೇಶದ ಪ್ರಖ್ಯಾತ ಕವಿ. ದೇಶದ ವಿಭಜನೆಯ ಆಘಾತಕ್ಕೊಳಗಾಗಿ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡಿದ್ದರು.

ಇದ್ದೇ ಇರುತ್ತಾರೆ. ಆದರೆ ನಾನು ಅವರಿಗೆ ಸಿಕ್ಕಿ ಹಾಕಿಕೊಳ್ಳಲು ಸಿದ್ಧನಿಲ್ಲ. ಆದರೆ ತಪ್ಪಿಸಿಕೊಂಡು ಹೋಗೋದಾದ್ರೂ ಎಲ್ಲಿಗೆ? ಏನೇ ಆದರೂ, ನಾನು ಒಂಟಿಯಾಗಿ ತಪ್ಪಿಸಿಕೊಂಡು ಹೋಗಿ, ಗಂಗೆಯ ದಡದ ಮೇಲೆ ಕುಳಿತುಕೊಳ್ಳಲಾಗುವುದಿಲ್ಲ. ಕಡ್ಲೆಪುರಿ ಮಾರುವವನು ಕೂಡಾ ನನ್ನನ್ನು ಕಂಡು ನಗುತ್ತಾನೆ. ಸುವಿಮಲ ಬರುವ ಮೊದಲೇ ಒಂದೂವರೆ ಸುಮಾರಿಗೆ, ಪ್ರೆಸ್‌ಗೆ ಹೋಗುವ ನೆಪ ಮಾಡಿಕೊಂಡು ಆಫೀಸಿನಿಂದ ಹೊರ ಹೊರಟೆ. ಹೊರ ಬಂದು ನೇರವಾಗಿ ಒಂದು ಸಿನೇಮಾ ನೋಡಲೆಂದು ನುಗ್ಗಿದೆ. ಮನಸ್ಸಿನಲ್ಲೇ ಒಂದು ವಿಷಯವನ್ನು ಯೋಚಿಸಿಕೊಂಡೆ, ಇನ್‌ಗ್ರಿಡ್ ಬರ್ಗ್‌ಮನ್‌ನ ಚಿತ್ರ, ನಾನೊಂದು ಚೂರೂ ಗಮನ ಕೊಡೋದಿಲ್ಲ. ಆದರೆ ಇವತ್ತು ಈ ಚಿತ್ರದ ಕೊನೆಯ ದಿನ ನೋಡದೇ ವಿಧಿಯಿಲ್ಲ. ಇದನ್ನೇ ನೋಡಬೇಕು. ಒಂಟಿಯಾಗಿ ಕುಳಿತು ಸಿನೇಮಾ ನೋಡುವುದು ಅಪರಾಧವೇ? ಸುವಿಮಲನಿಗೆ ಸಿನೇಮಾ ಅಂದ್ರೆ ಅಷ್ಟೇನು ಇಷ್ಟವಿಲ್ಲ. ಒಂದು ವೇಳೆ ನಾನು ಅವನನ್ನು ಕರೆದರೂ, ಅವನು ಬರ್ತಿರಲಿಲ್ಲ. ಅಲ್ಲದೆ ಸುಮ್ಮನೆ ನನ್ನನ್ನು ಹೋಗದಂತೆ ಅಡ್ಡಿ ಮಾಡುತ್ತಿದ್ದ. ಇಂದು ಸುವಿಮಲ ಆಫೀಸಿಗೆ ಬಾರದೇ ಇರಬಹುದು. ನಿನ್ನೆಯೂ ಬಂದಿರಲಿಲ್ಲವಂತೆ.

ಸಿನೇಮಾ ಥಿಯೇಟರ್‌ನಲ್ಲಿ ಕುಳಿತು, ನಾನು ಜಮುನಾಳ ಮನೆಗೆ ಹೋಗಬೇಕೆಂದು ತೀರ್ಮಾನಿಸಿಕೊಂಡೆ. ಇಂದು ಸಂಗೀತ ಶಾಲೆಗೆ ರಜೆ. ಇವತ್ತು ಇನ್ನು ಜಮುನಾಳ ಮನೆಗೆ ಹೋಗದಿದ್ದರೆ, ಅವಳನ್ನು ಕಾಣಲಾಗುವುದಿಲ್ಲ. ಬೇರಿನ್ನೆಲ್ಲಾದ್ರೂ ಹೋಗೋಣವೆಂದುಕೊಂಡೆ. ಆದರೆ ಎಲ್ಲಾ ಕಡೆಯೂ ಜಮುನಾಳ ವಿಷಯವೇ ನೆನಪಾಗುತ್ತೆ. ಮೊದಲು ವೃತ್ತಪತ್ರಿಕೆ ಆಫೀಸಿಗೆ ಹೋಗಿ, ಶಶಾಂಕನೊಡನೆ ಹರಟೆ ಹೊಡೆಯೋಣವೆಂದುಕೊಂಡಿದ್ದೆ. ಅಲ್ಲಿ ಹೋದ್ರೆ ಸ್ವಲ್ಪ ಹೊತ್ತು ಮಾತನಾಡಿದ ಮೇಲೆ ಅವನೆನ್ನುತ್ತಿದ್ದ, ಸ್ವಲ್ಪ ಕೂತಿರಪ್ಪ, ಕೈನಲ್ಲಿನ ಕೆಲಸ ಮುಗಿಸಿ ಬಿಡ್ತೀನಿ. ರಂಜನನ ಕ್ಲಬ್‌ಗೇನೋ ಹೋಗಬಹುದು. ಅಲ್ಲಿ, ಇಲ್ಲಾ ನಾಟಕದ ರಿಹರ್‌ಸಲ್ ನಡೀತಿರುತ್ತೆ ಅಥವಾ ಇಸ್ಪೀಟಿನ ಆಟ ನಡೀತಿರುತ್ತೆ. ಈ ನಡುವೆ ಇಸ್ಪೀಟಿನ ವಿಷಯ ಎತ್ತಿದರೆ ನನ್ನ ಮೈ ಉರಿಯುತ್ತೆ. ವಿಮಲೇಂದುವಿನ ಮನೆಯಲ್ಲೂ ಗುಂಪು ಸೇರುತ್ತೆ. ವಿಮಲೇಂದು ಗುಂಡು ಹಾಕೋದಿಲ್ಲ, ಅವನದನ್ನು ದ್ವೇಷಿಸ್ತಾನೆ. ವಿಮಲೇಂದು ಫ್ರೆಂಚ್ ಕಲಿತಿದ್ದಾನೆ. ಅವನದಂತೂ ಬರೀ ಮಾತು. ಅಲ್ಲಯ್ಯಾ ನಾನು ಫ್ರೆಂಚ್ ಕಲ್ತಿದೀನೀಂತ, ನಿನ್ನನ್ನೇನಾದ್ರೂ ದ್ವೇಷಿಸ್ತಿದೀನಾ, ಹಾಗೇನೆ ನಾನು ಗುಂಡು ಹಾಕೋದಿಲ್ಲಂತ ನೀನ್ಯಾಕೆ ನನ್ನನ್ನು ದ್ವೇಷಿಸಬೇಕು? ನಾನು ಕುಡಿಯದೇ ಇದ್ದ ದಿನವೂ ಒಂದು ವೇಳೆ ವಿಮಲೇಂದುವನ್ನು ಕಂಡರೆ, ಅವನು ಗುಂಡು ಹಾಕುವುದರ ದುಷ್ಪರಿಣಾಮಗಳ ಬಗ್ಗೆ ದೊಡ್ಡ ಭಾಷಣಾನೇ ಬಿಗೀತಾನೆ. ನನಗೆ ಫಾರಿನ್ ಭಾಷೆಯ ರಸಸ್ವಾದ ಮಾಡಲು ಬರೋದಿಲ್ಲ. ಅದಕ್ಕೆ ನಾನು ಅವನನ್ನು ನಿಂದಿಸಲು ಹೋಗೋದಿಲ್ಲ. ನೀನಂತು ಗುಂಡು ಹಾಕೋದರ ರುಚಿ ಅರಿತಿಲ್ಲ. ಹಾಗಾದ್ರೆ ಅದನ್ನು ನಿಂದಿಸುವಂತ ದುರ್ಬುದ್ಧಿ ನಿನಗ್ಯಾಕೆ? ದಡ್ಡ, ಹೆಂಡವನ್ನು ದ್ವೇಷಿಸಿ, ವಿದೇಶಿ ಭಾಷೆ ಕಲ್ತಿದಾನೆ. ಜೀವನದಲ್ಲಿ ಅವನು ಏನನ್ನು

ಕಲಿಯಲೂ ಸಾಧ್ಯವೇ ಇಲ್ಲ. ವಿದೇಶಿಯರು ಕೇಳಿದರೆ ಏನಂದಾರು ?

ಮಹತೋಷ, ವಿಮಾನ, ಅವರುಗಳ ಬಳಿ ಹೋಗುವ ಪ್ರಶ್ನೆಯೇ ಏಳೋದಿಲ್ಲ, ಅವರುಗಳು ಗಂಭೀರವಾದ ರಾಜಕೀಯ ವಿಷಯದ ಬಗ್ಗೆ, ಚರ್ಚೆ ನಡೆಸುತ್ತಿರುತ್ತಾರೆ. ನಾನಂತೂ ದೇಶದ ವಿವಿಧ ವಿಷಯಗಳ ಬಗ್ಗೆ ಯೋಚಿಸಿ ತಲೆ ಕೆಡಿಸಿಕೊಳ್ಳುವಂತವನಲ್ಲ. ಎಷ್ಟೋ ಜನರಿಗೆ ತಿನ್ನೋದಕ್ಕೆ ಇಲ್ಲ ಅನ್ನೋದು ಗೊತ್ತಿದ್ರೂ, ನಾನು ಎರಡೂ ಹೊತ್ತು ಉಣ್ಣುತ್ತೇನೆ. ದೇಶದಲ್ಲಿ ಎಷ್ಟೋ ಜನರಿಗೆ ತೊಡಲು ಬಟ್ಟೆಬರೆ ಇಲ್ಲ. ಆದರೆ ನನ್ನ ಬಟ್ಟೆಗೆ ಇಸ್ತ್ರಿ ಇಲ್ಲದಿದ್ದರೆ, ನನಗಾಗೋದಿಲ್ಲ. ಫುಟ್‌ಪಾತಿನಲ್ಲಿ ಸಾವಿರಾರು ಜನ ಮಲಗಿಕೊಂಡಿರ್ತಾರೆ ಇದನ್ನು ತಿಳಿದೂ, ನನ್ನ ಮಲಗುವ ಕೋಣೆಯಲ್ಲಿನ, ಹಾಸಿಗೆ ಹೊದಿಕೆ ಒಂದಿಷ್ಟು ಕೊಳೆಯಾಗಿದ್ದರೂ ನಾನು ಸಹಿಸೋದಿಲ್ಲ. ಹೌದು ನಾನು ಇದನ್ನೆಲ್ಲ ಬಯಸ್ತೇನೆ, ನಾನು ಸ್ವಾರ್ಥಿ, ನಾನು ಅಪರಾಧಿ, ನಾನು ಅಮಾನುಷಿ ಕ್ರೂರಿ. ಎಷ್ಟೋ ಜನರಿಗೆ ವಂಚನೆ ಮಾಡಿ ನಾನೊಬ್ಬನೇ ಆರಾಮವಾಗಿದ್ದೇನೆ, ಅದು ಸರಿಯಲ್ಲ. ಆದರೆ ನಾನಿವ್ಯಾವುದನ್ನು ಬಿಡಲು ಸಾಧ್ಯವಿಲ್ಲ. ಮಹತೋಷ, ವಿಮಾನ ಇವರುಗಳು ತುಂಬಾ ಸುಖವಾಗಿದ್ದಾರೆ, ಕಾರಣ ಅವರು ದೇಶದ ಸಮಸ್ಯೆಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಬಲ್ಲರು ಮತ್ತು ಪ್ರತ್ಯೇಕವಾಗಿ ಒಂದೊಂದಕ್ಕೆ ಪರಿಹಾರವನ್ನು ಅವರು ಹುಡುಕಬಲ್ಲರು. ನಾನು ಒಂದನ್ನಂತೂ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇನೆ ನಾನು ಕೇವಲ ಯುಕ್ತಿಯಿಂದಲೇ, ಜಡವಸ್ತುವನ್ನು ಬದಲಾಯಿಸಲು ಸಾಧ್ಯವಿಲ್ಲ ಅನ್ನೋದನ್ನ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೀನಿ. ಒಂದು ವೇಳೆ ಯುದ್ಧಾನೋ ರಾಷ್ಟ್ರದ ಸಮಸ್ಯೇನೋ ಎದುರಾದರೆ, ನಾನಂತೂ ಮೊದಲು ಎಲ್ಲವನ್ನು ಬಿಟ್ಟು ಓಡಿ ಹೋಗಿ, ಬಂದೂಕು ಕೈಗೆತ್ತಿಕೊಳ್ಳೋದಂತು ದಿಟ. ನನ್ನ ಈ ಮಾತನ್ನ ಕೇಳಿ, ಅವರುಗಳೆಲ್ಲ ನನ್ನದೆಲ್ಲ ಬರೀ ರೊಮ್ಯಾಂಟಿಕ್ ವಿಚಾರ ಅಂತ ನಗ್ತಾರೆ. ಆದರೆ ರೊಮ್ಯಾಂಟಿಕರನ್ನು ಬಿಟ್ಟರೆ ಬೇರಿನ್ಯಾರು ತಾನೇ ಚರಿತ್ರೆಯನ್ನು ಬದಲಾಯಿಸಿದ್ದಾರೆ ಹೇಳಿ ? ನನ್ನ ಹಾಗೂ ಅಪ್ಪನ ನಡುವಲ್ಲಿ ಮೆಲ್ಲ ಮೆಲ್ಲನೆ ಪರಿಸ್ಥಿತಿ ಬದಲಾಗಲೇ ಬೇಕು. ನಾನು ಸತ್ತ ಮೇಲೆ ದೇಶದ ಉನ್ನತಿಯಾಗುತ್ತಿತ್ತೋ ಏನೋ ? ಆದರೆ ಆ ಉನ್ನತಿಯಲ್ಲಂತೂ ನನ್ನ ಪಾತ್ರವೇನೂ ಇಲ್ಲ. ಭವಿಷ್ಯತ್ತಿನ ಯುಗವನ್ನು ಸಂತೋಷಗೊಳಿಸುವುದರ ಬಗ್ಗೆ ಖಂಡಿತವಾಗಿಯೂ ನಾನು ಯೋಚಿಸುವವನಲ್ಲ. ಒಟ್ಟಾರೆ, ಈ ಜನರೇಷನ್, ಊಟವಿಲ್ಲದೆ ಎಲುಬಿನ ಗೂಡಿನಂತಾಗಿ ಬದುಕುಳಿದರೆ, ಖಂಡಿತವಾಗಿಯೂ ಇವರುಗಳು ಒಣಗಿದೆದೆ, ಗಂಟಲಿನ ವಂಗಜರ ಮತ್ತೊಂದು ಗುಂಪನ್ನು ಬಿಟ್ಟು ಹೋಗೋದು ದಿಟ. ಅನಂತರ ದೇಶದ ಉನ್ನತಿಯ ಗತಿ ? ಇಲ್ಲ, ನಾನು ಆ ತರಹ ಅಲ್ಲ, ನಾನು ತುಂಬಾನೇ ಸ್ವಾರ್ಥಿ, ನಾನು ಬದುಕಿರೋವರೆಗೂ ಆರಾಮವಾಗಿ, ಸಂಪೂರ್ಣ ಬಾಳನ್ನು ಬದುಕ ಬಯಸುತ್ತೇನೆ. ನಾನು ಯುದ್ಧದಲ್ಲಿ ಬೇಕಾದ್ರೆ ನನ್ನ ಪ್ರಾಣಾರ್ಪಣೆ ಮಾಡಬಲ್ಲೆ. ಯಾಕೆಂದರೆ ಯುದ್ಧದಲ್ಲಿ ಯಾವೊಂದು ತೊಂದರೆ ಇಲ್ಲದೆ ಸರಳವಾಗಿ, ಸಹಜವಾಗಿ ಸಾಯಬಹುದು. ಅದೂ ಒಂದು ರೀತಿ ರೊಮ್ಯಾಂಟಿಕ್ ಸಾವೇ ! ಹಿಂದೆ ಧೃಷ್ಟದ್ಯುಮ್ನನೂ ಅಶ್ವತ್ಥಾಮನಿಗೆ ತನ್ನನ್ನ ಕೊರಳು ಹಿಚುಕಿ ಸಾಯಿಸಬೇಡ, ಖಡ್ಗದಿಂದ ತಿವಿದು ಸಾಯಿಸು ಅಂತ ಕೇಳಿಕೊಂಡಿದ್ದನಂತೆ.

ಸುಮ್ಮನೆ ಮಧ್ಯಾಹ್ನದ ಹೊತ್ತು ಇನ್ನೆಲ್ಲೂ ಹೋಗಲು ಸ್ಥಳವಿಲ್ಲ. ಆಶ್ಚರ್ಯವೆಂದರೆ, ಅರುಣನ ಮನೆಗೆ ಹೋಗಿ, ಮನೀಷಳನ್ನು ಕಂಡು ಮಾತನಾಡಿಸಿ ಬರುವ ಇಚ್ಛೆ ನನ್ನಲ್ಲಿ ಒಮ್ಮೆಯೂ ಉಂಟಾಗಿರಲಿಲ್ಲ. ಮನೀಷಳ ಬಗ್ಗೆ ಯೋಚಿಸುತ್ತಲೇ, ಒಂದು ಕ್ಷಣ ಅವಳ ಮುಖ ನನ್ನ ಕಣ್ಣಮುಂದೆ ತೇಲಿ ಬಂತು. ನನ್ನ ಕಣ್ಣ ಮುಂದೆ ತೇಲಿ ಬಂದದ್ದು, ಮನೀಷಳ ಅದೇ ಮುಖ, ಕುಲು ಕುಲು ನಗು. ನಾನು ನಗುಮುಖದಿಂದಲೇ, ಕಲ್ಪನೆಯಲ್ಲೇ ಮನೀಷಳ ಕಡೆ ನೋಡಿದೆ. ಇಲ್ಲ ಮನೀಷಳ ಬಗ್ಗೆ ನನ್ನಲ್ಲಿ ಯಾವೊಂದು ವ್ಯಥೆಯೂ ಇಲ್ಲ. ಕೇವಲ ಜಮುನಾಳ ವಿಷಯವೇ ನನ್ನಲ್ಲಿ ಪುನಃ ಪುನಃ ಮೂಡಿ ಬರುತ್ತದೆ. ಜಮುನಾಳ ವಿಷಯ ಯೋಚಿಸುತ್ತಲೇ ಸ್ವಲ್ಪ ವ್ಯಥೆಯಾಗುತ್ತದೆ. ಅವಳ ಬಗ್ಗೆ ಯೋಚಿಸುತ್ತಲೇ, ಅವಳನ್ನು ಕಾಣುವ ತೀವ್ರ ಬಯಕೆ ನನ್ನ ಮನದಲ್ಲಿ ಜಾಗೃತಗೊಳ್ಳುತ್ತದೆ. ಸಿನೇಮಾ ಮುಗಿಯುವ ಮೊದಲೇ ಎದ್ದು ಹೊರ ಹೊರಟು ಬಿಡಬೇಕೆಂದು ಆಲೋಚಿಸಿದೆ. ಆದರೆ ಆಫೀಸಿನ ಸಮಯ ಪೂರ್ತಿಯಾಗದೆ, ಅವಳನ್ನು ನೋಡಲು ಹೋಗಲು ಹೇಗೆ ಸಾಧ್ಯ ? ಆದಕ್ಕಾಗಿ ಸಿನೇಮಾ ಮುಗಿದ ನಂತರವೂ ನಾನು ಚಹ ಕುಡಿಯುತ್ತ ನನ್ನ ಸಮಯವನ್ನು ಕಳೆದಿದ್ದೆ.

ಜಮುನಾ ನನಗೆ ಯಾವ ರೀತಿ ಆತ್ಮೀಯಳಾದಳು ? ಕಕ್ಕನ ಮನೆಯಲ್ಲಿ, ಜಮುನಾಳ ಅಮ್ಮ ಅಪ್ಪ ನನ್ನನ್ನು ಕಂಡಿದ್ದರು. ಆಗ ಅವಳಿನ್ನೂ ಚಿಕ್ಕ ಹುಡುಗಿ. ನಾನು ಅವಳನ್ನು ಗಮನಿಸಿಯೇ ಇರಲಿಲ್ಲ. ಜಮುನಾಳ ಅಕ್ಕ, ಸರಸ್ವತಿಯೊಡನೆ, ಒಮ್ಮೆ ಸ್ವಲ್ಪ ಪರಿಚಯವಾಗಿತ್ತು. ಆದರೆ ಸರಸ್ವತಿ ನನಗೆ ಅಷ್ಟೊಂದು ಇಷ್ಟವಾಗಿರಲಿಲ್ಲ. ಏನೋ ಒಂದು ರೀತಿ ಅವಳ ಸ್ವಭಾವ ಎಂದು ನನಗನಿಸಿತ್ತು. ಅವಳ ಮೈ ಮುಟ್ಟಿದರೆ ನನ್ನ ಕೈ ಕತ್ತರಿಸಿ ಹೋಗುತ್ತೇನೋ ಎಂದು ಭಯವಾಗಿತ್ತು. ಕಕ್ಕಿಯ ಶ್ರಾದ್ಧದ ದಿನ, ಸರಸ್ವತಿ ನನ್ನ ಕೋಣೆ ಹೊಕ್ಕು ಹೇಳಿದ್ದಳು, ಏಯ್, ನನ್ನ ಎರಡೂ ಕೈ ಸರಿಯಿಲ್ಲ. ಬೆನ್ನಿನ ಗುಂಡಿ ಈಗ ಬಿಚ್ಚಿ ಹೋಗಿದೆ, ಹಾಗೇ ಸ್ವಲ್ಪ ಸೇಫ್ಟಿ ಪಿನ್ ಹಾಕಿಬಿಡಿ. ನಾನಾಗ ಒಂದು ಪುಸ್ತಕ ಓದುತ್ತಲಿದ್ದೆ. ಯಾರು ಗುಂಡಿ ಹರಿದಿದೆ, ಪಿನ್ ಹಾಕಿ ಅಂತ ಹೇಳ್ತಿದಾರೆಂದು, ಕಣ್ಣೆತ್ತಿ ನೋಡಿದೆ. ಅವಳು ನನ್ನ ಕಡೆ ಎದೆ ಮಾಡಿ ನಿಂತುಕೊಂಡಿದ್ದಳು. ಎದುರಾ ಬದಿರಾ ನಿಂತುಕೊಂಡು, ಹಿಂದುಗಡೆ ಪಿನ್ ಹಾಕೋದಾದ್ರೂ ಹೇಗೆ ? ನಾನೆಂದೆ, ಪಿನ್ ಎಲ್ಲಿದೆ ? ಅವಳೆಂದಿದ್ದಳು, ಇದೇನಿದು ನಿಮ್ಮ ಹತ್ರ ಏನೂ ಇಟ್ಟುಕೊಂಡಿಲ್ಲವಾ ? ನನ್ನ ಬಳೆಗೆ ಸಿಕ್ಕಿಸಿಕೊಂಡಿದೀನಿ, ಬಿಚ್ಚಿಕೊಳ್ಳಿ. ಅನಂತರ ನಸುನಕ್ಕು ಹೇಳಿದ್ದಳು, ಹಾಗ್ಯಾಕೆ ದಿಟ್ಟಿಸಿ ನೋಡ್ತಾ ಇದೀರ. ನನಗೀಗ ಸಮಯವಿಲ್ಲ ಬೇಗ ಬೇಗನೆ ಹಾಕಿ ಬಿಡಿ. ನಾನೀಗ ಅಡಿಗೆ ಮನೆಗೆ ಹೋಗಬೇಕು. ಯಾವ ಹುಡುಗಿಯ ಎದೆಗೆ ನಾನು ಒರಗಿಲ್ಲವೋ, ಅಂಥವಳು ನನಗ್ಯಾಕೆ ಬ್ಲೌಸಿನ ಗುಂಡಿ ಹಾಕಿ ಅಂತಾಳೆ ? ಇಲ್ಲ ನನಗದು ಇಷ್ಟವಾಗಲಿಲ್ಲ.

ಸರಸ್ವತಿಯ ತಾಯಿ ನಮ್ಮ ಕಕ್ಕಿಯ ತಂಗಿ, ಅರ್ಥಾತ್ ಅವರೇನೂ ನನಗೆ ಆತ್ಮೀಯರೇನಲ್ಲ. ಜಮುನಾಳ ತಾಯಿಯನ್ನು, ನಾನೆಂದೂ ಯಾವ ಹೆಸರನ್ನು ಹಿಡಿದೂ ಕರೆಯುತ್ತಿರಲಿಲ್ಲ. ಇವತ್ತು ನಾನು ಅವರನ್ನು ಕಕ್ಕಿ ಎಂದೇ

ಸಂಬೋಧಿಸುವೆ.

ಕಕ್ಕಿ ತುಂಬಾ ದಿನವಾಯ್ತು ನಿಮ್ಮನ್ನು ಕಂಡು.

ಹೌದು ಬಾ, ಬಾ. ಗುರುತೇ ಸಿಗಲಿಲ್ಲ. ಎಷ್ಟೊಂದು ಬದಲಾಗಿಬಿಟ್ಟಿದೀಯ ನೀನು.

ನೀವು ಹೇಗಿದೀರಾ? ಒಂದು ದಿನ ಅಕಸ್ಮಾತ್ ರಸ್ತೆಯಲ್ಲಿ ಜಮುನಾಳ ಭೇಟಿಯಾಯ್ತು.

ಹೌದು ಮುನ್ನಿ ಹೇಳಿದ್ದಳು, ನಿನ್ನನ್ನು ಕಂಡಿದ್ದೆ ಅಂತ. ನಾನೆಂದಿದ್ದೆ, ಕರ್ಕೊಂಡು ಯಾಕೆ ಬರಲಿಲ್ಲಾಂತ. ಒಂದೇ ಸಲಕ್ಕೆ ಮರೆತೇ ಬಿಟ್ಟಿದ್ದೆ ನಾನು. ಬೇಡ ಬೂಟ್ಸು ಬಿಚ್ಕೋದೇನೂ ಬೇಕಿಲ್ಲ. ನಮ್ಮನೇಲಿ ಬೂಟು ಹಾಕಿಕೊಂಡೇ ಎಲ್ಲರೂ ಒಳಗೆ ಬರ್ತಾರೆ. ಬಾ ಒಳಗೆ ಬಾ, ನಿಮ್ಮಮ್ಮ ಹೇಗಿದಾರೆ?

ಅಮ್ಮ ಚೆನ್ನಾಗಿದ್ದಾಳೆ. ನಿಮ್ಮ ವಿಚಾರ ಅಮ್ಮ ಯಾವಾಗಲೂ ಹೇಳ್ತಾ ಇರ್ತಾಳೆ.

ನಿಮ್ಮಮ್ಮನ್ನೂ ಯಾಕೆ ಕರ್ಕೊಂಡು ಬರಲಿಲ್ಲ? ಭಾವನವರನ್ನು ಕಂಡು ಬಹಳ ದಿನವಾಯ್ತು.

ಹೌದು, ಕಕ್ಕ ಈ ನಡುವೆ ಧರ್ಮದ ಬಗ್ಗೆ ಹುಚ್ಚು ಹಿಡಿಸಿಕೊಂಡು ಬಿಟ್ಟಿದ್ದಾರೆ.

ನೀನು ಈ ಕಡೆಯೇ ಸರಿದುಕೊಂಡು ಕೂತ್ಕೊ, ಫ್ಯಾನಿನ ಕೆಳಗೆ ಬಾ. ಏನು ಸೆಖೆಯಪ್ಪಾ ಇವತ್ತು. ಇರು ನಾನು ಸತಿಯನ್ನು ಕರೀತೀನಿ.

ಹಿಂದೆ ಭಾರತವರ್ಷ*, ಪ್ರವಾಸಿ*ಗಳಲ್ಲಿ ಆಧುನಿಕವಾದವುಗಳು ಎಂದು ಯಾವೆಲ್ಲಾ ಚಿತ್ರಗಳು ಪ್ರಕಟಗೊಂಡಿದ್ದವೋ, ಆ ಹೆಂಗಸರು ವಯಸ್ಸಾದ ಮೇಲೆ ಯಾವ ರೀತಿ ಕಾಣಬಹುದೋ, ಅದೇ ರೀತೀನೇ ಜಮುನಾಳ ತಾಯಿಯೂ ಇರೋದು. ಕಣ್ಣಿಗೆ ಬಂಗಾರದ ಫ್ರೇಮಿನ ಕನ್ನಡಕ. ಸೀರೆ ಉಡುವ ರೀತೀನೂ ಸ್ವಲ್ಪ ಭಿನ್ನ ಅಂತಲೇ ಹೇಳಬಹುದು. ಕಾಲಿಗೆ ಜಿಂಕೆ ಚರ್ಮದ ಚಪ್ಪಲಿ. ಸಾಧಾರಣವಾಗಿ ನಾವುಗಳು ನಮ್ಮ ಮನೆಗಳಲ್ಲಿ ಕಾಣೋ ಅಮ್ಮ ಚಿಕ್ಕಮ್ಮಂದಿರದಂತಲ್ಲ ಅವರ ಮುಖ. ಆಕೆ ನೋಡೋಕೂ ಸುಂದರವಾಗೇ ಇದ್ದಾರೆ. ಈ ಮನೆಗೆ ಬರುವವರ ಮುಖದಲ್ಲೂ ಒಂದು ರೀತಿಯ ಸ್ನಿಗ್ಧತೆ ಇದೆ. ಜಮುನಾ ಎಲ್ಲಿ? ಗೋಡೆಯ ಮೇಲೆ ತೂಗು ಹಾಕಿರೋ ಒಂದು ದೊಡ್ಡ ಫೋಟೋದಲ್ಲಿ, ಜಮುನಾ ಮೈಮೇಲೆ ಹೂವಿನಾಭರಣ ತೊಟ್ಟು, ನೃತ್ಯದ ಭಂಗಿಯಲ್ಲಿ ನಿಂತಿದ್ದಾಳೆ. ಜಮುನಾಳಿಗೆ ಹಾಡಿನ ಜೊತೆ ನೃತ್ಯವೂ ಬರುತ್ತೆ ಅಂತ ಕಾಣುತ್ತೆ. ಜಮುನಾಳ ಫೋಟೋ ಪಕ್ಕದಲ್ಲೇ, ಜಾಮಿನಿರಾಯರ ಬೆಕ್ಕು, ಅದರ ಹತ್ತಿರ ಗಾಜಿನ ಜಾಡಿಯಲ್ಲಿ ಮನಿಪ್ಲ್ಯಾಂಟ್, ಮಿಕ್ಕ ಗೋಡೆ ತುಂಬಾ ಹರಡಿದೆ. ಜಮುನಾಳ ಅಪ್ಪ ಪೋಲೀಸ್ ಇಲಾಖೆಯಲ್ಲಿ ಕೆಲಸ ಮಾಡ್ತಾರೆ, ಬಹುಶಃ ಅಸಿಸ್ಟೆಂಟ್ ಕಮೀಷನರ್ ಆಗಿದ್ದಾರೆ ಅಂತ ಕಾಣುತ್ತೆ. ಅವರು ಲಂಚ ತೊಗೊಳ್ಳೋದಿಲ್ಲ ಅಂತ ಅಂದುಕೊಂಡಿದ್ದೀನಿ. ಈ ರೀತಿಯ ಶಾಂತ ವಾತಾವರಣ ಮನೇನಲ್ಲಿ ಇರೋದಕ್ಕೆ ಸಾಧ್ಯವೇ ಅಂತ ನಾನು ಯೋಚಿಸ್ತೇನೆ. ಹಾಗಾದ್ರೆ ಜಮುನಾ ಇಷ್ಟೊಂದು ನಿರ್ಲಿಪ್ತಳಾಗಲು ಹೇಗೆ ತಾನೇ ಸಾಧ್ಯ? ಜಮುನಾಳ ಸುಳಿವಿಲ್ಲ? ಅವಳೆಲ್ಲಿ? ಬುಕ್ ಕೇಸಿನ ಮೇಲೂ ಒಂದಿಷ್ಟು ಪಿಕ್ಚರ್ ಪೋಸ್ಟ್‌ಕಾರ್ಡ್ ಇಡಲ್ಪಟ್ಟಿವೆ. ಬಹುಶಃ ವರುಣ

* ಹಿಂದೆ ಇದ್ದ ಬಂಗಾಲದ ಹೆಸರಾಂತ ಪತ್ರಿಕೆಗಳು.

ಅಮೆರಿಕಾದಿಂದ ಕಳಿಸಿದ್ದಿರಬೇಕು. ಜಮುನಾ ಎಲ್ಲಿ ?

ಸರಸ್ವತಿ ಹಾಗೂ ಜಮುನಾಳ ತಾಯಿ ಒಳಗೆ ಬಂದರು. ಕೈಯಲ್ಲಿ ತಿಂಡಿಯ ತಟ್ಟೆ ಹಾಗೂ ಲೆಮೆನ್ ಜ್ಯೂಸ್. ಇವರ ಮನೆಯಲ್ಲಿ ಖಂಡಿತವಾಗಿಯೂ ಫ್ರಿಜ್ ಇರಬೇಕು. ಸರಸ್ವತಿಯ ಹಣೆಯಲ್ಲಿ ಸಿಂಧೂರವಿಲ್ಲ, ಏಕೆ ಇನ್ನೂ ಮದುವೆಯಾಗಿಲ್ಲ? ಜಮುನಾ ಎಲ್ಲಿ? ಅಕ್ಕಪಕ್ಕದ ಮನೆಗೇನಾದ್ರೂ ಆಡಲಿಕ್ಕೆ ಹೋಗಿದಾಳೆಯೋ? ನಾನು ಕುರ್ಚಿ ಬಿಟ್ಟು ಎದ್ದೇಳುವ ಭಂಗಿ ಮಾಡಿ ಹೇಳಿದೆ, ಏನು ಗುರ್ತು ಸಿಗ್ತಾ? ಸರಸ್ವತಿ, ಸ್ವಲ್ಪ ನಕ್ಕು ಹೇಳಿದಳು, ಯಾಕೆ ಗುರ್ತು ಸಿಗೋದಿಲ್ಲ? ನೀವು ಗುರ್ತು ಹಿಡಿದಿರೋ ಇಲ್ವೊ ಅನ್ನೋದೆ ಅನುಮಾನ. ಮುನ್ನಿ ಬಲವಂತ ಮಾಡಿ ಹೇಳಿರೋದ್ರಿಂದ ಬಂದಿರಿ ಅಂತ ಕಾಣುತ್ತೆ.

ಇಲ್ಲ ನಾನೇ ಸ್ವತಃ ಬಂದೆ. ಈ ಕಡೆ ಬಹಳ ಬರೋದಿರೋದಿಲ್ಲ. ಆದರೆ ನೀವು ಸ್ವಲ್ಪ ಸೊರಗಿದೀರ.

ಬೇಕೆಂದೇ ಸಣ್ಣಗಾಗ್ತಾ ಇದೀನಿ. ನೋಡೋಕೆ ದಪ್ಪಗಿದ್ರೆ ಚೆನ್ನಾಗಿರೋದಿಲ್ಲ.

ಇಲ್ಲ, ಇಲ್ಲ. ನಿಮ್ಮನ್ನು ನೋಡಿ ತುಂಬಾ ದಿನವಾಯ್ತು. ಜಮುನಾ ಎಲ್ಲಿ ?

ಜಮುನಾಳ ತಾಯಿ ನಕ್ಕು ಹೇಳಿದರು, ನೀವು ಸತಿಯನ್ನು ನೀವು ಅಂತ ಕರೀಬೇಡಿ, ಅವಳು ನಿಮಗಿಂತ ಚಿಕ್ಕವಳು.

ಸರಸ್ವತಿ ಎಂದಳು, ಮೊದಲು ಅವರು ನನ್ನನ್ನು ನೀನು ಅಂತಲೇ ಕರೀತಿದ್ರು ಇದನ್ನು ಅವರು ಮರೆತಿದ್ದಾರೆ ಅಂತ ಕಾಣುತ್ತೆ.

ನಿಜವಾಗಿಯೂ ನಾನು ಅವಳನ್ನು ನೀನು ಅಂತ ಕರೆಯುತ್ತಿದ್ದೆನೇ? ನೆನಪಾಗಲಿಲ್ಲ. ಆದರೆ ಜಮುನಾ ಎಲ್ಲಿ? ಶುಭ್ರವಾದ ನಾಲ್ಕು ಗೋಡೆಗಳ ಮಧ್ಯದಲ್ಲಿ ಕುಳಿತು, ಲೆಮನ್ ಜ್ಯೂಸ್ ಹೀರುತ್ತ ಇವೆಲ್ಲ ಬೇಡದ ವ್ಯರ್ಥ ಮಾತುಗಳನ್ನಾಡಲೆಂದೇ ನಾನು ಇಲ್ಲಿಗೆ ಬಂದದ್ದು? ಜಮುನಾ ಎಲ್ಲಿ?

ಜಮುನಾಳ ತಾಯಿ ಹೇಳಿದರು, ಜಮುನಾ ನಾಟಕದ ರಿಹರ್ಸಲ್‌ಗೆ ಹೋಗಿದಾಳೆ. ನನ್ನ ಮಾವನ ಮಗ ರಣೇನ್ ಒಂದು ಹೊಸ ನಾಟಕವನ್ನು ಬರೆದಿದ್ದಾನೆ. ನೀವು ರಾಜೇನ್ ಮೈತ್ರನ ಹೆಸರನ್ನು ಕೇಳಿಲ್ಲವೇ? ನಾನು ತಲೆ ಅಲ್ಲಾಡಿಸಿ ಹೇಳಿದೆ, ಹಾಂ ಹಾಂ ಖಂಡಿತವಾಗಿಯೂ ಯಾರಿಗೆ ಗೊತ್ತಿಲ್ಲ ಅವರು ಯಾರು ಅಂತ. ಜಮುನಾಳ ತಾಯಿ ಹೇಳಿದರು, ಅವರ ಕ್ಲಬ್‌ನಲ್ಲಿ ನಾಟಕ ಇದೆ, ಜಮುನಾಳ ಹತ್ತಿರ ಒಂದು ಚಿಕ್ಕ ಡ್ಯಾನ್ಸ್ ಮಾಡಿಸ್ತಾನೆ. ನೀವು ಬರುವ ಸ್ವಲ್ಪ ಹೊತ್ತಿನ ಮೊದಲೇ ಹೊರಟಳು.

ನನ್ನ ಮುಖ ವಿವರ್ಣವಾಗಿ ಹೋಯಿತು. ನಾನು ಆತುರಗೊಂಡು ಹೇಳಿದೆ, ರಿಹರ್ಸಲ್‌ಗೆ ಹೋಗಿದ್ದಾಳಾ ?

ಯಾಕೆ ನಿಮಗೆ ಇವತ್ತು ಬನ್ನಿ ಅಂತ ಹೇಳಿದ್ದಳಾ ? ಇವತ್ತು ಅವಳಿಗೆ ರಿಹರ್ಸಲ್ ಬಗ್ಗೆ ಗೊತ್ತಿತ್ತು.

ನಾನು ನನ್ನನ್ನೇ ನಿಯಂತ್ರಿಸಿಕೊಂಡು ಉತ್ತರಿಸಿದೆ, ಇಲ್ಲ, ಇಲ್ಲ. ಅವಳೇನು ನನಗೆ ಯಾವ ವಿಷಯವನ್ನು ಹೇಳಿರಲಿಲ್ಲ. ಜಮುನಾಳಿಗೆ ನೃತ್ಯ ಸಂಗೀತ ಎರಡರಲ್ಲೂ

ಪರಿಶ್ರಮವಿದೆ ಅಂತ ಕಾಣುತ್ತೆ? ಏನು ಓದ್ತಾ ಇದಾಳೆ ಈಗ?

ಪಿ.ಯು.ಸಿ. ಪಾಸ್ ಮಾಡಿ ಈ ವರ್ಷ ಫಸ್ಟ್ ಇಯರ್ ಆರ್ಟ್ಸ್‌ಗೆ ಸೇರಿಕೊಂಡಿದ್ದಾಳೆ. ಬ್ರೆಬೌರ್ನ್ ಕಾಲೇಜಿಗೆ ಸೇರಿದಾಳೆ. ನೃತ್ಯವನ್ನೇನೋ ಚೆನ್ನಾಗೇ ಕಲ್ತಿದಾಳೆ. ಆ ಫೋಟೋ ನೋಡಿ ಅದು ಬಂಗಾಲಿ ಕಾನ್‌ಫೆರೆನ್ಸ್‌ದು. ಇನ್ನೂ ತುಂಬಾ ಫೋಟೋಗಳಿವೆ. ಸತೀ ಆಲ್ಬಮ್ ತೋರ್ಸು.....

ಇನ್ನು ನನಗೆ ಒಂದಿಷ್ಟೂ ಇಷ್ಟವಾಗಲಿಲ್ಲ. ಒಂದು ವಿಷಯವನ್ನು ನಾನು ಹೊಸದಾಗಿ ಕಲಿತಂತಾಯ್ತು. ಮನಸ್ಸಿನ ಇಚ್ಛೆಯನ್ನು ಮುಚ್ಚಿಟ್ಟರೆ, ಅದರಿಂದ ಒಳ್ಳೆಯದಾಗೋದಿಲ್ಲ. ಸಿನೇಮಾ ಥಿಯೇಟರಿನಲ್ಲಿ ಕುಳಿತು ನನಗೆ, ಜಮುನಾಳನ್ನು ನೋಡುವ ಬಯಕೆಯಾಗಿತ್ತು. ಚಿತ್ರವನ್ನು ಅರ್ಧಕ್ಕೆ ಬಿಟ್ಟು ಆಗಲೇ ಹೊರಟು ಬಂದಿದ್ದರೆ ಅನಾಯಾಸವಾಗಿ ಜಮುನಾಳನ್ನು ಕಾಣಬಹುದಿತ್ತು. ಜಮುನಾಳನ್ನು ಕಾಣಲಾಗೋದಿಲ್ಲ ಅಂತ ಗೊತ್ತಾದಾಗ, ಇಡೀ ಸಂಜೆ ನೀರಸವಾದಂತೆನಿಸಿತು. ಒಂದೇ ಕ್ಷಣದಲ್ಲಿ ಮನಸ್ಸು ಬಣ್ಣಗೆಟ್ಟಿತ್ತು ಮತ್ತು ಮನಸ್ಸು ಕೆಟ್ಟಾಗ ಸಾಧಾರಣವಾಗಿ ನನಗೆ ಸಿಟ್ಟು ಬಂದು ಬಿಡುತ್ತೆ. ಸರಸ್ವತಿ ಆಲ್ಬಮ್‌ನ ಹಾಳೆಗಳನ್ನು ತಿರುವುತ್ತಿದ್ದಳು. ಅವಳ ಕೈಯಿಂದ ಆಲ್ಬಮ್ ಕಸಿದುಕೊಂಡು ಬಿಸಾಡಿ ಬಿಡಬೇಕೆಂದು ಅನ್ನಿಸಿತು.

ಜಮುನಾಳಿಗಾಗಿ ಕಾಯಲೇ? ಆದರೆ ಈ ರಿಹರ್ಸಲ್‌ಗಳು ಸುಲಭವಾಗಿ ಬೇಗ ಮುಗಿಯುವಂಥವಲ್ಲ. ಅದಲ್ಲದೆ ನಾಟಕಗಳನ್ನು ಬರೆದ ಸೋದರಮಾವ ತುಂಬಾ ನ್ಯಾಕ್ ಇರುವಾತ. ಅವರ ತಾಯಿಯದೇ ತಪ್ಪು, ಯಾರ್‍ಯಾರ ಜೊತೇನೋ ರಿಹರ್ಸಲ್ ಪಹರ್ಸಲ್ ಅಂತ ಕಳಿಸಬಾರದು. ಇಷ್ಟು ಚಿಕ್ಕ ಹುಡುಗಿಗೆ, ಆ ತರಹದ ವಾತಾವರಣ ಖಂಡಿತವಾಗಿಯೂ ಒಳ್ಳೆಯದಲ್ಲ, ನಾನಿದನ್ನು ಒಂದು ಚೂರೂ ಒಪ್ಪೋದಿಲ್ಲ. ಅದಲ್ಲದೆ ಎಷ್ಟು ಹೊತ್ತೂಂತ ಕುಳಿತುಕೊಳ್ಳೋದಕ್ಕಾಗುತ್ತೆ? ನನಗಿನ್ನೇನು ಮಾತನಾಡೋದು ಇರಲಿಲ್ಲ. ಮೊದಲನೇ ಸಲ ಬಂದಾಗ ತುಂಬಾ ಹೊತ್ತು ಇರಲೂಬಾರದು. ಅದಲ್ಲದೆ ಆಂಗ್ಲರ ಪದ್ಧತಿಯಂತೆ, ಆಲ್ಬಮ್ ತೋರಿಸೋದು ಎಂದರೆ ಎದ್ದು ಹೋಗು ಅಂತ ಅಲ್ವೇ? ಇದೆಲ್ಲ ಸರಿಯಾಗಿ ಗೊತ್ತಿರಲಿಲ್ಲ. ಒಂದು ಸಲ ಜೋಧ್‌ಪುರ ಪಾರ್ಕಿನ ಹತ್ತಿರ, ಒಬ್ಬ ಅತಿ ಪರಿಚಿತ ಸ್ನೇಹಿತನ ಮನೆಗೆ ಹೋಗಿದ್ದೆ. ರಾತ್ರಿ ಒಂಬತ್ತರ ಸಮಯ. ಸ್ನೇಹಿತನ ತಾಯಿ, ರಾತ್ರಿ ಊಟ ಮಾಡ್ಕೊಂಡೇ ಹೋಗು, ನಮಗೂ ತುಂಬಾ ಸಂತೋಷವಾಗುತ್ತೆ. ಊಟ ಮಾಡ್ತಾನೆ ಮಾತನಾಡೋಣ, ರಾತ್ರಿ ನಾವು ಒಟ್ಟಿಗೆ ಕುಳಿತು ಊಟ ಮಾಡ್ತೀವಿ. ಬಾ ನಾಚ್ಕೋಬೇಡ, ಇದೂ ನಿಮ್ಮ ಮನೆ ತರಹಾನೇ ಎಂದಿದ್ದರು. ಅಷ್ಟೊಂದು ಬಲವಂತವನ್ನು ತಳ್ಳಿಹಾಕಲಿಕ್ಕಾಗದೆ ಬಹಳ ಸಂಕೋಚಪಟ್ಟುಕೊಂಡು, ಮುಜುಗರದಿಂದಲೇ ಮೊದಲನೇ ಸಲ ಹೋದಾಗಲೇ ಅವರ ಮನೆಯಲ್ಲಿ ರಾತ್ರಿ ಊಟ ಮಾಡಿಕೊಂಡು ಬಂದಿದ್ದೆ. ನಂತರ ಶೇಖರ ಈ ವಿಷಯವನ್ನು ಕೇಳಿ, ನಕ್ಕು ಹೇಳಿದ್ದ. ನೀನಂತೂ ತೀರಾ ವಿಚಿತ್ರದವನು ಕಣಯ್ಯ. ನಿಜವಾಗಿಯೂ ಯಾರಾದ್ರೂ ಊಟ ಮಾಡ್ತಾರೇನೋ? ಅಷ್ಟೊಂದು ಊಟ ಮಾಡೂಂತ ಬಲವಂತ ಮಾಡಿದ್ರೆ, ಅದರ ಅರ್ಥ ಇನ್ನು ನೀವು ಹೋಗಬಹುದು, ಈಗ ನಮ್ಮ ಊಟದ ಸಮಯಾಂತ.

ಎಷ್ಟು ಬಲವಂತ ಮಾಡ್ತಾರೋ, ಅಷ್ಟೇ ತಿಳ್ಕೊ, ಹೋಗು ಅಂತ ಅದರರ್ಥ. ಯಾರನ್ನಾಂದ್ರೆ ಅವರನ್ನು, ಯಾವಾಗಂದ್ರಾವಾಗ, ಊಟಕ್ಕೆಬ್ಬಿಸೋ ಕಾಲ ಬಾಂಗ್ಲಾ ದೇಶದಲ್ಲಿ ಇನ್ನಿಲ್ಲ. ಹೂಂ, ಆಗ ನಾನು ತುಂಬಾ ಗವಾರನಾಗಿದ್ದೆ. ಈಗ ಅದೆಲ್ಲ ಅರ್ಥವಾಗುತ್ತೆ. ಯಾರು ತೀರಾ ಮರ್ಯಾದೆ ತೋರಿಸ್ತಾರೋ ಅಂಥವರ ಮೇಲೆ ಅತ್ಯಾಚಾರ ಮಾಡಬೇಕು. ಒಂದು ವೇಳೆ ಜಮುನಾಳ ತಾಯಿ ಊಟಕ್ಕೆಬ್ಬಿಸಿದರೆ, ನಾನು ಖಂಡಿತವಾಗಿಯೂ ಅದನ್ನು ಹೊರಟು ಹೋಗು ಅನ್ನೋ ನೋಟೀಸ್ ಅಂತ ತಿಳಿಯೋದಿಲ್ಲ. ಹಾಗಾದ್ರೆ ನಾನು ಖಂಡಿತವಾಗಿಯೂ ಇಲ್ಲೇ ಊಟ ಮಾಡ್ಕೊಂಡೇ ಹೋಗ್ತೀನಿ ಇನ್ನೊಬ್ಬರ ಮನೆ ಊಟ ಯಾವಾಗಲೂ ರುಚಿಯಾಗಿಯೇ ಇರುತ್ತೆ.

ನನ್ನ ಪಕ್ಕ ಬಂದು ಕುಳಿತುಕೊಂಡು ಸರಸ್ವತಿ ಆಲ್ಬಮ್ ತೋರಿಸುತ್ತಿದ್ದಾಳೆ. ಮೇಲಿಂದ ಮೇಲೆ ಅವಳ ಸೆರಗು ಎದೆಯಿಂದ ಜಾರಿ ಬೀಳುತ್ತಲಿದೆ. ಹೆಂಗಸರ ಸೆರಗು ಬೇಕೆಂದೇ ಬೀಳೋದಿಲ್ಲವೆನ್ನುವುದು ಯಾರಿಗೆ ತಾನೇ ಗೊತ್ತಿಲ್ಲ. ಒಂದು ವೇಳೆ ಹೆಂಗಸರಿಗೆ ಇಷ್ಟವಿಲ್ಲದಿದ್ದರೆ, ವೈಶಾಖದ ಗಾಳಿಗೂ ಎದೆಯ ಮೇಲಿನ ಸೆರಗನ್ನು ಜಾರಿಸಲು ಸಾಧ್ಯವಿಲ್ಲ. ಆದರೆ ಸರಸ್ವತಿಯ ಕಡೆ ನೋಡೋದಕ್ಕೂ ನನಗೆ ಇಷ್ಟವಾಗ್ತಾ ಇಲ್ಲ. ಸಾವಿರಾರು ಜನ ಸರಸ್ವತಿಯನ್ನು ಸುಂದರಿ ಎನ್ನಬಹುದು. ಆದರೆ ಅವಳು ಜಮುನಾಳ ಉಗುರಿನ ಸಮಕ್ಕೂ ಯೋಗ್ಯಳಲ್ಲ. ಸರಸ್ವತಿಯ ಮುಖದಲ್ಲಿ ಯಾವೊಂದು ಸ್ಪಷ್ಟತೆಯೂ ಇಲ್ಲ. ಅವಳು ಶಕ್ತಿ ಮೀರಿ ಪ್ರಯತ್ನಿಸಿ, ರಹಸ್ಯವನ್ನು ಹೇಳಬಯಸುತ್ತಿದ್ದಾಳೆ. ಆದರೆ ಎಲ್ಲ ಹೆಂಗಸರಿಂದಲೂ ರಹಸ್ಯವನ್ನು ಬಹಿರಂಗಪಡಿಸಲು ಸಾಧ್ಯವಿಲ್ಲ ಅಂತ ಮನಸ್ಸಿಗನಿಸುತ್ತೆ. ಸರಸ್ವತಿಯ ಮುಖದಲ್ಲಿ ಸ್ವಲ್ಪ ವ್ಯಥೆಯ ಛಾಯೆ ಇದೆ. ಏನೋ ಒಂದು ರೀತಿಯ ಆಘಾತವನ್ನು ಅವಳು ಹೊಂದಿರಬೇಕು. ಪ್ರೇಮದ ವ್ಯರ್ಥತೆಯೋ ಅಥವಾ ತಾಪ ಅವಳ ಶರೀರವನ್ನು ತಗುಲಿರಬೇಕು. ಇಷ್ಟು ದಿನ ಮದುವೆ ಮಾಡಿಕೊಳ್ಳದೇ ಇರುವುದಕ್ಕೆ ಇದೇ ಕಾರಣವಿರಬೇಕು ಅನ್ನೋದು ಇದರಿಂದಾನೆ ಗೊತ್ತಾಗಿಬಿಡುತ್ತೆ. ಇನ್ನೊಂದು ವಿಷಯ ನನ್ನ ಮನಸ್ಸಿಗನ್ನಿಸಿತು. ಆ ಸಂಜೆ, ಜಮುನಾ ಯಾವಾಗ ನಾನು ನಿಮಗಾಗಿ ಕಾದಿದ್ದೆ ಎಂದು ಹೇಳಿದ್ದಳೋ, ಆ ನಂತರದಿಂದ ನಾನು ಬೇರಿನ್ನ್ಯಾವ ಹುಡುಗಿಯನ್ನೂ ಕಣ್ಣೆತ್ತಿಯು ಸಹ ನೋಡಿರಲಿಲ್ಲ. ದಿನಾ ರಸ್ತೆಯಲ್ಲಿ ಎಷ್ಟೊಂದು ಅಸಂಖ್ಯಾತ ಹುಡುಗಿಯರನ್ನು ನೋಡಬೇಕಾಗುತ್ತದೆ. ರಸ್ತೆಯ ಆ ಕಡೆ, ಈ ಕಡೆ ಯುವತಿಯರ ಮುಖ ನೋಡುವುದೇ ಒಂದು ರೀತಿಯ ಹೋಕಗಾರಿಕೆ. ಯಾವುದಾದ್ರೂ ಪರಿಚಿತ ಹೆಣ್ಣಿನ ಮುಖ ಕಾಣದೇ ಹೋದಾಗ, ತುಂಬಾ ಹೊತ್ತು ನಿಂತೇ ಇರಬೇಕಾಗುತ್ತೆ, ಅವಳು ಒಮ್ಮೆಯಾದ್ರೂ ಮುಖ ತೋರಿಸುವಳೋ ಏನೋ ಎಂದು. ಆದರೆ ನಿನ್ನೆಯಿಂದ ನಾನು ಇನ್ನ್ಯಾವ ಹುಡುಗಿಯನ್ನು ನೋಡಿಲ್ಲ. ನೋಡಬೇಕೂಂತ ಅನ್ನಿಸಿಯೂ ಇಲ್ಲ. ಇಷ್ಟೊಂದು ಹತ್ತಿರದಲ್ಲಿಯೂ ನನಗೆ ಸರಸ್ವತಿಯನ್ನು ನೋಡಬೇಕೆಂದೆನಿಸುವುದಿಲ್ಲ.

ಜಮುನಾಳ ತಾಯಿ ಹೇಳಿದರು, ಸುನೀಲ್ ನಿನ್ನ ಸ್ನೇಹಿತರು ಯಾರಾದ್ರೂ ಅಮೇರಿಕೆಯಲ್ಲಿದ್ದಾರಾ ?

ನಾನೆಂದೆ, ಯಾಕೆ ಹೇಳಿ ?

ನನಗೊಂದು ವಿಷಯ ವಿಚಾರಿಸಿ ಹೇಳೋದಕ್ಕಾಗುತ್ತದೆಯೇ ?

ಸರಸ್ವತಿ ಎಂದಳು, ಅಮ್ಮ ಅವೆಲ್ಲ ಯಾಕೆ ?

ನಾನೆಂದೆ, ವರುಣ ಈ ಸೆಪ್ಟೆಂಬರಿಗೆ ಬರ್ತಾನೆ ಅಲ್ವಾ ?

ಅದೇ ಅವನು ಹಿಂತಿರುಗೋ ವಿಷಯ, ಈ ಸಲ ಇನ್ನೊಂದು ಸುದ್ದೀನೂ ಕೇಳಿದೆ.

ಸರಸ್ವತಿ ಎಂದಳು, ಅಮ್ಮ ನೀನು ಸುಮ್ಮ ಸುಮ್ಮನೆ, ಅವರಿಗೆ ಹೇಳಿದರೆ ಏನಾಗುತ್ತೆ ?

ನಿನಗೆ ಗೊತ್ತೇನಪ್ಪ ನನ್ನ ಮಗ ಅಲ್ಲಿ ಮದುವೆ ಮಾಡಿಕೊಂಡಿದಾನಂತೆ.

ಯಾರನ್ನು, ಬಂಗಾಲಿ ಹುಡುಗಿಯನ್ನೋ ಅಥವಾ ವಿದೇಶಿಯಳನ್ನೋ ?

ಹುಡುಗಿ ಸ್ಪ್ಯಾನಿಷ್‌ನವಳಂತೆ ನಮಗೆ ಒಂದು ಚೂರೂ ವಿಷಯ ತಿಳಿಸಿಲ್ಲ. ಅವನ ಸ್ನೇಹಿತನಿಂದ ನಮಗೆ ವಿಷಯ ಗೊತ್ತಾಯ್ತು. ಕೇಳಿ ನಮಗೆ ಭಯವಾಗ್ತಾ ಇದೆ. ಒಂದು ವೇಳೆ ಅದು ನಿಜವಾಗಿದ್ರೆ ?

ಸರಸ್ವತಿ ಎಂದಳು, ಅಮ್ಮ ಇದರಲ್ಲಿ ಭಯ ಏಕೆ ? ಅಣ್ಣ ಏನು, ಇನ್ನೂ ಚಿಕ್ಕ ಹುಡುಗನೇ ? ಹಿಂದೆ ಮುಂದೆ ನೋಡದೆ ಏನೋ ಒಂದು ಮಾಡೋದಕ್ಕೆ ? ಖಂಡಿತವಾಗಿಯೂ ಆ ಹುಡುಗಿ ಚೆನ್ನಾಗಿರಬೇಕು.

ಜಮುನಾಳ ತಾಯಿ ಸ್ವಲ್ಪ ಸಿಟ್ಟಿನ ದನಿಯಲ್ಲಿ ಮಗಳಿಗೆಂದರು, ಚಿಕ್ಕ ಹುಡುಗನೇನಲ್ಲದಿದ್ದರೂ ಎಲ್ಲಿಯೂ, ಯಾವಾಗಲೂ, ಅವನಿಗೆ ಸ್ವಂತ ಹಿತದ ಬಗ್ಗೆ ತಿಳಿಯೋದಿಲ್ಲ. ನಾನು ಬಹಳ ಕಂಡಿದೀನಿ.

ಸರಸ್ವತಿ ಮುಖವನ್ನು ಅರೆಕ್ಷಣ ಬೇರೆ ಕಡೆ ಹೊರಳಿಸಿ, ನಂತರ ಸ್ವಾಭಾವಿಕವಾಗಿ ಮುಖ ತಿರುಗಿಸಿದಳು. ತಾಯಿ ಮಗಳಿಬ್ಬರ ಕಣ್ಣುಗಳು ಒಂದಾದವು. ಏನೋ ಒಂದು ಹಳೆಯ ವೈಮನಸ್ಸಿನ ಛಾಯೆ ಅದರಲ್ಲಿತ್ತು. ತಾಯಿಯ ಕಣ್ಣುಗಳಲ್ಲಿ ಗರ್ವ ಹಾಗೂ ವೇದನೆ ಎದ್ದು ಕಾಣುತ್ತಿತ್ತು. ಸರಸ್ವತಿ ಶಾಂತಳಾಗಿ ಹೇಳಿದಳು, ಮಕ್ಕಳ ಬಗ್ಗೆ ಯೋಚ್ನೆ ಮಾಡಿ ನೀನು ನಿನ್ನ ಆರೋಗ್ಯ ಕೆಡಿಸಿಕೊಳ್ತಾ ಇದೀಯ, ಸುಮ್ಮನೆ ಯೋಚನೆ ಮಾಡದೆ ಇರಬಾರದೇ ?

ನಾನು ಅಂದುಕೊಂಡದ್ದೇ ಸರಿ, ಜಗತ್ತಿನಲ್ಲಿ ಜಮುನಾಳನ್ನು ಬಿಟ್ಟರೆ, ಬೇರಿನ್ಯಾರೂ ಸರಳರಿಲ್ಲ. ಈ ಮನೆಯ ವಾತಾವರಣ ಬಹಳ ಜಟಿಲವೆಂದೆನಿಸಿತು. ನಾನೆಂದೆ, ಕಕ್ಕಿ ನಾನಿನ್ನು ಬರ್ತೀನಿ, ಇನ್ನೂ ಒಂದು ಕಡೆ ಹೋಗಬೇಕು.

ನಿನ್ನಿಂದ ವಿಚಾರಿಸಿಕೊಂಡು ಬಂದು ಹೇಳಲು ಸಾಧ್ಯವೇ ?

ನನಗ್ಯಾರೂ ಆ ತರಹ ಸ್ನೇಹಿತರಿಲ್ಲ. ಅಮೇರಿಕಾಕ್ಕೆ ಹೋದವರೆಲ್ಲ ನನಗೆ ವಿಳಾಸ ಕೊಡ್ತಾರೆಯೇ ? ಸರಿ ನಾನು ಪರಿಚಯದವರ್‍ಯಾರಾದ್ರೂ ಇದ್ರೆ ವಿಚಾರಿಸಿಕೊಂಡು ಬಂದು ಹೇಳ್ತೀನಿ....

ಸ್ವಲ್ಪ ವಿಚಾರಿಸಿ ಹೇಳಪ್ಪಾ, ವರುಣ ಇರೋದು ಸ್ಯಾನ್‌ಫ್ರಾನ್ಸಿಸ್‌ಕೋದಲ್ಲಿ.

ಸರಸ್ವತಿ ಅನಾಯಾಸವಾಗಿ ನಕ್ಕು ಹೇಳಿದಳು, ಒಳ್ಳೆಯವರನ್ನು ನೀನು ವಿಚಾರಿಸಿಕೊಂಡು ಬಾ ಅಂತ ಹೇಳ್ತಾ ಇದೀಯ. ಅವರು ವಿಚಾರಿಸ್ತಾರೋ

ಇಲ್ವೋ ? ನಿಮ್ಮ ಮನೇಲಿ ಫೋನ್ ಇದೆಯಾ ?

ಅಷ್ಟರಲ್ಲೇ ಮೆಟ್ಟಿಲಿನ ಮೇಲೆ ಭಾರಿ ಸದ್ದು ಮಾಡುತ್ತ, ಜಮುನಾಳ ತಂದೆ ಜಗದೀಶ್ ರಾಯ್ ಬಂದರು. ಬಲಿಷ್ಠವಾದ ದೇಹ, ಪ್ರೌಢವಾದ ಸುಂದರ ಮುಖ, ದೊಡ್ಡ ಮೀಸೆಗಳಲ್ಲಿ ಪೋಲೀಸರ ದರ್ಪ ಇಣುಕುತ್ತಿತ್ತು. ವಾರೆಗಣ್ಣುಗಳಿಂದಲೇ, ಒಮ್ಮೆ ನನ್ನನ್ನು ನೋಡಿ, ನಿಧಾನವಾಗಿ ಟೈ ಗಂಟನ್ನು ಬಿಚ್ಚತೊಡಗಿದರು. ಜಮುನಾಳ ತಾಯಿ ಎಂದರು, ಇವನ್ಯಾರು ಅಂತ ಗೊತ್ತಾಯ್ತಾ ? ಇವನು ಸುನೀಲ, ದೊಡ್ಡಕ್ಕನ ಭಾವನವರ ಮಗ.

ಜಗದೀಶ್ ರಾಯ್, ನನ್ನ ಕಡೆ, ಇನ್ನೊಮ್ಮೆ ನೋಡದೆಯೇ ಹೇಳಿದರು, ಹುಂ ಗೊತ್ತು (ಅಸಂಭವ, ಅವರು ನನ್ನನ್ನು ಈ ಮೊದಲು, ಎಂದಾದರೂ ನೋಡಿದ್ದರೋ ಇಲ್ಲವೋ ಎನ್ನುವುದೇ ಸಂದೇಹ). ಬಹಳ ಚಿಕ್ಕವನಾಗಿದ್ದಾಗ ನೋಡಿದ್ದೆ.

ನಾನು ಒಂದು ಕ್ಷಣ ಎದ್ದು ನಿಂತು ವಿನೀತ ಭಾವದಿಂದ ಹೇಳಿದೆ, ತುಂಬಾ ಹೊತ್ತಾಯ್ತು, ಇನ್ನು ಬರ್ತೀನಿ. ಜಗದೀಶ್ ರಾಯ್ ಕೋಣೆಯೊಳಗೆ, ಒಳ್ಳೆ ಅಧಿಪತಿಗಳ ತರಹ ನಿಂತುಕೊಂಡಿದ್ದರು. ಎರಡೂ ಕೈ ಬಿಚ್ಚಿ ಅವರು ಕೋಟ್ ತೆಗೆದರು, ನನ್ನ ಉಪಸ್ಥಿತಿಯನ್ನು ಒಂದು ಚೂರೂ ಗಮನಿಸದೆ, ಅವರೆಂದರು, ಏಳು ಗಂಟೆ ಸುಮಾರಿಗೆ, ನನಗೇನಾದ್ರೂ ಫೋನ್ ಬಂದಿತ್ತೇ ?

ಅವರ ಹೆಂಡತಿ ಅಂದರು, ಇಲ್ಲವಲ್ಲ. ಅವರೆಂದರು, ನಾನು ಎರಡು ದಿನಕ್ಕೋಸ್ಕರ ಜಮಶೇಡ್‌ಪುರ್‌ಗೆ ಹೋಗಬೇಕು, ನನ್ನ ಸೂಟ್‌ಕೇಸ್ ರೆಡಿ ಮಾಡಿಟ್ಟುಬಿಡು. ಬೆಳಗಿನ ಜಾವವೇ ಪ್ಲೇನ್ ಇರೋದು.

ನಾನು ಮುಜುಗರ ಪಟ್ಟುಕೊಂಡು ನಿಂತೇ ಇದ್ದೆ. ಈ ಸಲ ನಾನು ದನಿ ಎತ್ತಿ ಹೇಳಿದೆ, ಕಕ್ಕಿ ನಾನಿನ್ನು ಬರ್ತೀನಿ. ನಂತರ ಮೂವರ ಕಡೆಯೂ ಒಮ್ಮೆ ನೋಡಿ ಹೇಳಿದೆ, ಬರ್ತೀನಿ ನಾನು. ಜಗದೀಶ ರಾಯ್, ಸೋಫಾದ ಮೇಲೆ ಕುಳಿತು, ಬಗ್ಗಿ ಬೂಟ್ಸಿನ ಲೇಸನ್ನು ಬಿಚ್ಚತೊಡಗಿದರು. ನನ್ನ ಮಾತಿಗೆ ಅವರು ಗಮನ ಕೊಡಲಿಲ್ಲ. ಅವರ ಹೆಂಡತಿ ಅನ್ಯಮನಸ್ಕರಾಗಿ ಹೇಳಿದರು, ಇನ್ಯಾವತ್ತಾದ್ರೂ ಇನ್ನೊಮ್ಮೆ ಬಾಪ್ಪಾ.

ಸರಸ್ವತಿ ನನ್ನನ್ನು ಹೊರಗಿನವರೆಗೂ ಬಿಡಲು ಹಿಂದೆಯೇ ಬಂದಳು. ಒಮ್ಮೆಯೂ ಹಿಂತಿರುಗಿ ನೋಡದೆ, ಬೇಗನೆ ನಾನು ಮೆಟ್ಟಿಲಿಳಿದು ಹೊರಟು ಬಂದು ಬಿಟ್ಟೆ. ಹೊರ ಬರುವಾಗ ದಢಾರನೆ ಬಾಗಿಲೆಳೆದುಕೊಂಡು ಬರಬೇಕೆಂದು ಮನಸ್ಸಾಯಿತು, ಆದರೆ ಲೆಟರ್‌ಬಾಕ್ಸ್ ಮುರಿದುಗಿರಿದು ಹೋದ್ರೆ ಏನು ಗತಿ ? ಹೊರ ಬಂದು ರಸ್ತೆಗಿಳಿದಾಗ ಒಂದು ಬೆಕ್ಕನ್ನು ಕಂಡೆ. ಅದನ್ನು ನಿವಾರಿಸಲೆಂದು ಸ್ವಲ್ಪ ಹೊತ್ತು ನಿಂತಿದ್ದು, ಮುಂದೆ ಹೊರಟೆ. ಒಂದು ಕಾರು, ಫುಟ್‌ಪಾತ್ ಮೇಲೆ ಹತ್ತಿಸಿ, ಪಾರ್ಕ್ ಮಾಡಲ್ಪಟ್ಟಿದ್ದನ್ನು ನಾನು ಗಮನಿಸಿದೆ. ದೊಪ್ಪನೆ ನಾನು ಅದರ ಕಿಟಕಿಗೆ ಢಿಕ್ಕಿ ಹೊಡೆದೆ, ಕಿಟಕಿಗೆ ಗಾಜಿಲ್ಲದಿದ್ದುದರಿಂದ ಅದು ಒಡೆಯಲಿಲ್ಲ. ಆದರೆ ನನ್ನ ಕೈಗೆ ಪೆಟ್ಟು ಬಿತ್ತು. ಹತ್ರಾನೇ ಒಂದು ನೀರಿನ ಟ್ಯಾಂಕ್. ಅದರ ಗಾಜು ಒಡೆದು, ಕೈ ಒಳಸರಿಸಿ, ನಲ್ಲಿ ತಿರುಗಿಸಿ ನೀರು ಬಿಡುವ ಇಚ್ಛೆಯಾಯಿತು. ಆದರೆ ಅದರ ಪಕ್ಕದಲ್ಲಿಯೇ ಗಡಸು ಮುಖದವರಿಬ್ಬರು ನಿಂತುಕೊಂಡಿದ್ದರು.

ಯಮುನಾಳನ್ನು ಭೇಟಿಯಾಗಲು ಸಾಧ್ಯವಾಗದೆ ಬೇಸರಗೊಂಡಿದ್ದ ಮನಸ್ಸು ನಿಧಾನವಾಗಿ ಸಿಟ್ಟಿಗೆ ಪರಿವರ್ತನೆಗೊಂಡಿತ್ತು. ಸಂಜೆ ಏಳೂವರೆ ಹೊತ್ತಿನಲ್ಲಿ ರಸ್ತೆಯಲ್ಲಿ ಒಂಟಿಯಾಗಿರುವುದು ನನಗೆ ಬೇಸರ ತರಿಸಿತ್ತು. ನನಗ್ಯಾರೋ ಮೋಸ ಮಾಡಿದ್ದಾರೆ. ಇಂದು ಸಂಜೆ ನನಗೆ ದುರ್ಲಭವಾದ ವಸ್ತುವೊಂದು ಲಭ್ಯವಾಗುವುದಿತ್ತು. ಆದರೆ ಇಲ್ಲಿ ನಾನೀಗ ಒಣಗಿದ ತರಗೆಲೆಯಂತೆ ಒಂಟಿಯಾಗಿ ರಸ್ತೆಯಲ್ಲಿ ತೇಲಾಡುತ್ತಿದ್ದೇನೆ. ಬೇರಿನ್ನೇನೋ ಘಟಿಸಬೇಕಿತ್ತು. ನನ್ನ ವಿಶ್ವಾಸವನ್ನು ಗಳಿಸಿಕೊಂಡು ನನಗ್ಯಾರೋ ಮೋಸ ಮಾಡಿರುವಂತೆ ಅನ್ನಿಸತೊಡಗಿತು. ನನ್ನ ಮನಸ್ಸು ಸಿಟ್ಟಿನಿಂದ ತುಂಬಿ, ಒಂದು ರೀತಿಯ ಉದಾಸೀನತೆ ಆವರಿಸಿಬಿಟ್ಟಿತು. ಛೆ! ನನ್ನ ಜಾಯಮಾನಕ್ಕಿದು ಒಗ್ಗೋ ಅಂಥಾ ವಿಷಯವಲ್ಲ. ಶೇಖರ ಹಾಗೂ ಇತರರು ಗುಂಪುಗೂಡಿಕೊಂಡು ಮೋಜು ಮಾಡುತ್ತಿದ್ದಾರೆ. ಆದರೆ ನಾನಿಲ್ಲಿ ಒಂಟಿಯಾಗಿ ರಸ್ತೆಯ ದೂಳು ಝಾಡಿಸುತ್ತಿದ್ದೇನೆ. ಮನೆಗೆ ಹಿಂದಿರುಗಲೋ ಬೇಡವೋ ಅಂತ ಯೋಚಿಸ್ತಿದೀನಿ. ಥಟ್ಟನೆ ನಾನು ವೀಣಾಳ ಮನೆ ಕಡೆ ಹೊರಡಲು ಟ್ಯಾಕ್ಸಿ ಹಿಡಿದೆ. ಜೇಬಿನೊಳಗೆ ಕೈ ಹಾಕಿ ಟ್ಯಾಕ್ಸಿ ಬಾಡಿಗೆ ಕೊಡಲು ಹಣ ಇದೆಯೋ ಇಲ್ವೋ ಅನ್ನೋದನ್ನ ಖಾತರಿಪಡಿಸಿಕೊಂಡೆ.

•

ಬನಿಯನ್ ತೊಟ್ಟು, ಪಂಚೆಯನ್ನು ಲುಂಗಿಯಂತೆ ಸುತ್ತಿಕೊಂಡು, ಪಲ್ಲಂಗದ ಮೇಲೆ ಕುಳಿತು, ಶೇಖರ ಕಾಲು ಆಡಿಸುತ್ತಿದ್ದಾನೆ. ಎಷ್ಟೋ ದಿನದಿಂದ ಅವನು ಅಲ್ಲೇ ಇದ್ದಂತಿತ್ತು. ಶೇಖರನೇ ಆ ಮನೆಯ ಮುಖ್ಯಸ್ಥನಂತೆ ಕಾಣುತ್ತಿದ್ದ. ಕನ್ನಡಿಯ ಮುಂದೆ ವೀಣಾ. ಅವಿನಾಶ ಒಂದು ಕುರ್ಚಿಯಲ್ಲಿ ಕುಳಿತುಕೊಂಡಿದ್ದಾನೆ. ಅವನ ಬಳಿಯೇ ಇನ್ನಿಬ್ಬರು ಅಪರಿಚಿತರು. ಪಲ್ಲಂಗದ ಕೊನೆಯಲ್ಲಿ ಇನ್ನೊಬ್ಬಾಕೆ ಕುಳಿತಿದ್ದಾಳೆ. ಚಿಂತಾಮಣಿ ಬಾಬುಗಳು ಎಲ್ಲೂ ಕಾಣಲಿಲ್ಲ. ನಾನು ಪರದೆ ಸರಿಸಿ ಒಳ ಹೊಕ್ಕೆ. ಅದೇ ಕ್ಷಣದಲ್ಲಿ, ಅವರೆಲ್ಲರೂ ಯಾವುದೋ ವಿಷಯಕ್ಕೆ 'ಹೋ' ಎಂದು ಕೇಕೆ ಹಾಕಿ ನಕ್ಕರು. ಆಗಲೇ ನಾನು ಕೋಣೆಯೊಳಗೆ ಕಾಲಿಟ್ಟೆ.

ವೀಣಾ ಮೊದಲು ನನ್ನನ್ನು ನೋಡಿ ಹೇಳಿದಳು, ಅವರು ಬಂದಿದ್ದಾರೆ. ನಿಮಗಾಗಿ ಎಷ್ಟೊಂದು ಹುಡುಕಾಡಿದ್ದು.

ಶೇಖರ ಕತ್ತು ಹೊರಳಿಸಿ ಕೇಳಿದ, ಬಂದ್ಯಾ, ನಿನ್ನನ್ನು ಹುಡುಕೀ ಹುಡುಕಿ ಸಾಕಾಗಿ ಹೋಯ್ತು.

ನಾನೆಂದೆ, ಅದ್ಯಾಕಪ್ಪಾ ನಾವೆಲ್ಲ ನಿನ್ನನ್ನೇ ಹುಡುಕಾಡ್ತಾ ಇದ್ದೆವು. ನಿನಗಾಗಿ ನಾವೇನೂ ಕಡಿಮೆ ಓಡಾಡಿಲ್ಲಪ್ಪಾ?

ಇರಲಿ ಬಿಡಯ್ಯ. ಇಲ್ಲಿಗೆ ಒಂದು ಸಲಾನಾದ್ರೂ ಬಂದಿದ್ಯೇನೋ?

ನಾನು ಇಲ್ಲಿಗೆ ಬರೋದೇ ಇಲ್ಲ ಅಂತೇನೂ ಹೇಳಿರಲಿಲ್ಲವಲ್ಲ.

ನೀನು ಇಲ್ಲಿಗೆ ಬರೋದನ್ನ ನಿಲ್ಲಿಸಿ ಬಿಟ್ಟಿದ್ದೆಯಲ್ಲ.

ಆದ್ರೆ ಇನ್ನು ಮುಂದೆ ಬರೋದೇ ಇಲ್ಲ ಅಂತೇನೂ ನಾನು ಹೇಳಿರಲಿಲ್ಲವಲ್ಲ.

ನಿನ್ನೇನೂ ನೀನು ಬರಲಿಲ್ಲ. ಒಂದು ಮಹತ್ವವಾದ ವಸ್ತುವನ್ನು ನೀನು ಮಿಸ್

ಮಾಡಿಕೊಂಡೆ. ನಿನ್ನೆವರೆಗೂ ನಿನಗೋಸ್ಕರಾ ಅಂತಲೇ ಇಟ್ಟಿದ್ದೆ.

ಇಲ್ಲ, ನೀನು ಹುಚ್ಚಾಟ ಆಡ್ತಾ ಇದೀಯ. ಅಲ್ಲಿ ನಿಮ್ಮಮ್ಮ ಯೋಚನೆ ಮಾಡ್ತಾ ಇದಾಳೆ. ನಿನ್ನ ಮುಖ ತೀರಾ ಇಳಿದು ಹೋಗಿದೆ, ನೋಡ್ಕೊಂಡಿದೀಯ.

ಅವಿನಾಶನೆಂದ, ಬಂಧ್ನಪ್ಪ ಇವನು ಒಳ್ಳೆ ಸ್ವಾಮಿಗಳ ತರಹ. ಬರೀ ಭಾಷಣ ಬಿಗೀತಾನೆ. ನೀನು ಸ್ವತಃ ಏನು ಮಾಡಿದೀಯ, ಅದರ ಬಗ್ಗೆ ನಮಗ್ಯಾರಿಗೂ ಸುಳಿವು ಸಿಕ್ಕಿಲ್ಲ ಅಂತ ಅಂದ್ಕೋಬೇಡ.

ಶೇಖರ ಕಾಲುಗಳನ್ನು ತೂಗಾಡಿಸುತ್ತಲೇ ಹೇಳಿದ, ನೀನೇನೂ ಯೋಚನೆ ಮಾಡಬೇಡ. ನಾನು ಮನೆಗೆ ಹೋಗಿ ಅಮ್ಮನನ್ನು ಒಂದು ಸಲ ನೋಡಿಕೊಂಡು ಬಂದಿದ್ದೀನಿ. ಕಲಕತ್ತೆಯಿಂದ ಹೊರಗೆ ಹೋಗ್ತಾ ಇದೀನಿ. ಒಂದು ವಾರದವರೆಗೂ ಹಿಂತಿರುಗೋದಿಲ್ಲ ಅಂತ ಹೇಳಿ ಬಂದಿದ್ದೀನಿ.

ಒಂದು ವಾರವೇ ? ಅಲ್ಲಿಯವರೆಗೂ ಇಲ್ಲಿ ಏನು ಮಾಡ್ತೀಯ ?

ಏನೂ ಇಲ್ಲ ಸುಮ್ಮನೆ ಇರ್ತೀನಿ. ಕೆಲವು ದಿನ ಮನೆಯಿಂದ ರಜೆ ಪಡೆದುಕೊಂಡಿದೀನಿ. ಮನುಷ್ಯನಿಗೆ ಛೇಂಜ್ ಇರಬೇಕಯ್ಯ. ನಾನು ಸ್ವಲ್ಪ ಛೇಂಜ್ ಪಡೆದುಕೊಳ್ತಾ ಇದೀನಿ, ಗಾಳಿ, ನೀರು, ಬದಲಿಸಿಕೊಳ್ಳಲಿಕ್ಕೆ.

ಅವಿನಾಶನೆಂದ, ಅದೆಲ್ಲ ಇರಲಿ. ನೀನು ಇಲ್ಲಿಗೆ ಬಂದದ್ದೇಕೆ ? ಕೆಲಸದ ವಿಷಯ ಮಾತನಾಡೋಣ. ಅಜಯ ಬಾಬುಗಳ ಮನೆ ಎಲ್ಲಿದೆ ?

ವೀಣಾ ಎಂದಳು, ಭಾವನವರಿರೋದು, ತಿಲಜಲಾದಲ್ಲಿ, ನಾಲ್ಕನೇ ನಂಬರಿನ ಗೇಟಿನ ಬಳಿ, ಇಲೆಕ್ಟ್ರಿಕ್ ಆಫೀಸಿನ ಹತ್ತಿರದ ರಸ್ತೆಯಲ್ಲಿ. ಮೊದಲು ಅವರು ಅಲ್ಲೇ ಇರುತ್ತಿದ್ದರು.....

ಅವಿನಾಶನೆಂದ, ಅಲ್ಲಿ ಇಲ್ಲದಿದ್ದರೂ, ಬೇರಿನ್ನೆಲ್ಲಾದ್ರೂ ಇದ್ದರೂ ಪತ್ತೆಹಚ್ಚಬಹುದು.

ನಾನು ಶೇಖರನ ಬಳಿ ಬಂದು, ಪಲ್ಲಂಗದ ಮೇಲೆ ಕುಳಿತುಕೊಂಡೆ. ಶೇಖರನ ಬಲಗೈಯ ತೋಳಿನಲ್ಲಿ ಒಂದು ದೊಡ್ಡ ತಾಯಿತವಿತ್ತು. ಹಿಂದೆ ಎಂದೂ ನಾನದನ್ನು ಕಂಡಿರಲಿಲ್ಲ. ನಾನು ನಕ್ಕು, ಇದೇನಿದು ಎಂದೆ. ಶೇಖರ ನಗುತ್ತ ಹೇಳಿದ, ಅಮ್ಮ ಕಟ್ಟಿದಾಳೆ. ಅದರಿಂದ ನನಗೆ ಯಾವ ಆಪತ್ತೂ ಬರೋದಿಲ್ಲ ಅಂತ. ಇರಲಿ ಬಿಡು, ಅಮ್ಮನಿಗೆ ಸಂತೋಷವಾಗೋದಾದ್ರೆ ಅದನ್ನು ಹಾಕಿಕೊಳ್ಳಲು ಅಡ್ಡಿ ಏನಿಲ್ಲ.

ಇನ್ನೊಬ್ಬಾಕೆ ಎಂದಳು, ನಿಮ್ಮ ಬಿಲ್ಲೆಯ ಡಿಸೈನ್ ಚೆನ್ನಾಗಿದೆ.

ಶೇಖರನೆಂದ, ನೀವು ಇದನ್ನು ಬಿಲ್ಲೆ ಅಂತ ಹೇಳ್ತೀರಾ ? ಬಂಗಾಲಿಗಳ ಮಾತು. ಹೂಂ, ಬಿಲ್ಲೆ ಕೇಳೋಕೆ ಒಂಥರಾ ಅನಿಸುತ್ತೆ. ನಾವು ಅದನ್ನು ತಾಯಿತಾ ಅಂತಾನೇ ಹೇಳೋದು.

ತಾಯಿತವನ್ನು ಕೊರಳಿಗೆ ಹಾಕಿಕೊಳ್ತಾರೆ.

ಇರಲಿ ಬಿಡಿ. ಏಯ್ ಸುನೀಲ್ ನೀನು ಇವರನ್ನು ಗುರುತು ಹಿಡಿದ್ಯಾ ? ಇವರು ವೀಣಾಳ ಅಕ್ಕ ಸಾಧನಾ, ವಿಖ್ಯಾತ ನೂರ್‌ಜಹಾನ್ ಬೇಗಂ.

ನಾನು ಕೈ ಎತ್ತಿ ನಮಸ್ಕಾರ ಎಂದೆ. ನಿಮ್ಮ ಹೆಸರನ್ನು ಕೇಳಿದ್ದೆ ಎಂದೆ. ಆಕೆ ಪ್ರತಿ

ನಮಸ್ಕಾರ ಮಾಡಿ ಹೇಳಿದಳು, ನಿಮ್ಮ ಸ್ನೇಹಿತರು ಒಂದೇ ಸಮನೆ ಹುಚ್ಚು ಹಿಡಿದವರಂತೆ ನಿಮ್ಮನ್ನು ಹುಡುಕಾಡಿದರು. ನಾನು ಕಣ್ಣಿನಿಂದಲೇ ಪ್ರಶ್ನಿಸುವಂತೆ ಶೇಖರನ ಕಡೆ ದಿಟ್ಟಿಸಿದೆ. ನಾನೆಂದೆ, ಇದೇ ನೋಡಪ್ಪಾ ಮಜಾ. ನಾನು ಅವನನ್ನು ಹುಡುಕುತ್ತಾ ಇದ್ದೆ. ಅವನು ನನ್ನನ್ನು ಹುಡುಕುತ್ತಾ ಇದ್ದ. ನಾನು ಖಂಡಿತವಾಗಿಯೂ ಮನೆಯಿಂದ ಓಡಿ ಹೋಗಿಲ್ಲ. ಆದರೆ ಅವನು ಓಡಿ ಬಂದಿದ್ದಾನೆ.

ನಿಜವಾಗಿಯೂ ನಿಮ್ಮ ಸ್ನೇಹಿತರು ಅದ್ಭುತ. ನಿನ್ನೆ ಅವರು ಏನು ಮಾಡಿದ್ದಾರೆ ಗೊತ್ತಾ?.....

ನಾನು ಪ್ರಶ್ನಾರ್ಥಕವಾಗಿ ಶೇಖರನ ಕಡೆ ದಿಟ್ಟಿಸಿದೆ.

ಶೇಖರನೆಂದ, ನೀನು ನಿನ್ನೆ ಯಾಕೆ ಬರಲಿಲ್ಲ? ನಿನಗಾಗಿ ನಿನ್ನೆಯವರೆಗೂ ಒಂದು ವಸ್ತುವನ್ನು ಇಟ್ಟಿದ್ದೆ. ಪರೀಕ್ಷಿತ ಬಂದು, ನಿನಗಿಟ್ಟಿದ್ದನ್ನೇ ಪೂರ್ತಿ ಮಾಡಿಬಿಟ್ಟ. ಅಂಥ ಸುಯೋಗವನ್ನು ನೀನು ಜೀವನದಲ್ಲಿ ಇನ್ನೊಮ್ಮೆ ಪಡೆಯೋದಿಲ್ಲ.

ಏನದು ?

ಎಲ್.ಎಸ್.ಡಿ.

ಎಲ್.ಎಸ್.ಡಿ. ಎಲ್ಲಿ ಸಿಗ್ತು? ಅದೇನೂ ಅಂಥ ಬಹು ಅಮೂಲ್ಯವಾದದ್ದೇನಲ್ಲ. ನನಗದರ ಆಸೇನೂ ಇಲ್ಲ ಬಿಡು.

ಸಾಧನಳೆಂದಳು, ನೀವದನ್ನು ತಿನ್ನೋದಿಲ್ವೆ? ಒಳ್ಳೆಯದೇ ಆಯ್ತು ಬಿಡಿ. ಅದು ತುಂಬಾ ಕೆಟ್ಟ ವಸ್ತು.

ನಾನು ಪ್ರಶ್ನಿಸಿದೆ, ನೀವದನ್ನು ಸೇವಿಸಿದ್ದೀರೋ ಹೇಗೆ?

ಸಾಧನಳ ಮುಖ ಸ್ವಲ್ಪ ಬದಲಾಯಿಸಿತು. ಕಣ್ಣು ಹೊರಳಿಸಿ, ಹೊರಗೆ ನೋಡುತ್ತ ಹೇಳಿದಳು, ಸ್ವಲ್ಪ ತಿಂದೆ. ಮನುಷ್ಯನಿಗೆ ಏನಿಲ್ಲದೇನೆ ಅಷ್ಟೊಂದು ವ್ಯಥೆ. ಇನ್ನು ಅದನ್ನು ತಿಂದ್ರಾಯ್ತು ಗತಿ.

ತಿಂದು ವ್ಯಥೆಯ ಬಗ್ಗೆ ಯಾಕೆ ಆಲೋಚಿಸಬೇಕು?

ಶೇಖರನೆಂದ, ನೀನು ಅದರಿಂದ ಬರೀ ವ್ಯಥೆಯನ್ನು ಪಡೆದುಕೊಂಡೆಯ? ಒಂದು ಚೂರೂ ಸುಖ ಸಿಗಲಿಲ್ಲವೇ?

ಇಲ್ಲ.

ಆದರೆ ನನಗಂತೂ ಸಿಕ್ಕಿತು. ಅದ್ಭುತ ಆನಂದ. ನನ್ನ ಶರೀರ ಎಷ್ಟೊಂದು ಹಗುರಾಗಿ ಹೋಯಿತು ಗೊತ್ತಾ! ತೇಲುತ್ತ ಎಲ್ಲೋ ಸೇರಿಬಿಡ್ತು.

ನಾನು ಶೇಖರನನ್ನು ತಡೆದು ಹೇಳಿದೆ, ಎಲ್.ಎಸ್.ಡಿ. ಹೆಸರನ್ನು ನಾನು ಮೊದಲೇ ಕೇಳಿದ್ದೆ. ಸರಿಯಾಗಿ ಹೇಳು ಏನು ವಿಷಯಾಂತ, ಹೇಗೆ ಸಿಗ್ತು ನಿನಗೆ ಅದು.

ವಾಸ್ತವವಾಗಿ ಇದೊಂದು ವೈದ್ಯರು ಪರೀಕ್ಷೆಗೇಂತ ಬಳಸುವ ಸಾಧನ. ಗೊತ್ತಾಯ್ತಾ. ಹುಚ್ಚರ ಚಿಕಿತ್ಸೆಗಾಗಿ ಇದನ್ನು ಉಪಯೋಗಿಸಿ ನೋಡ್ತಾರೆ. ಇದರಿಂದ ಅವರ ನೆನಪನ್ನು ಪುನಃ ಜಾಗೃತಗೊಳಿಸ್ತಾರೆ. ಆ ನೆನಪನ್ನು ಹಿಂದಿರುಗಿಸಲೆಂದೇ ಪ್ರಪಂಚದಲ್ಲೀಗ, ಕಳ್ಳತನದಿಂದ, ಇದರಿಂದ ಸಿಗುವ ಮತ್ತಿಗಾಗಿ ಇದನ್ನು

ಉಪಯೋಗಿಸಲಾಗುತ್ತಿದೆ.

ಹುಚ್ಚರ ಔಷಧಿ ? ಸದ್ಯ ನಾನು ನುಂಗಲಿಲ್ಲವಲ್ಲ.

ಒಂದು ಟ್ಯಾಬ್‌ಲೆಟ್ ತಿಂದಿದ್ದರೆ ಆಗ ನಿನಗೇ ಗೊತ್ತಾಗ್ತಾ ಇತ್ತು. ಸಾಧಾರಣವಾದ ಒಂದು ಚಿಕ್ಕ ಟ್ಯಾಬ್‌ಲೆಟ್ ತಿಂದ ಮೇಲೆ, ಏನಾಯ್ತು ಗೊತ್ತಾ? ಒಮ್ಮೆಗೇ ನನ್ನ ಶರೀರದ ಅವಸ್ಥೆಯೇ ಬದಲಾಯಿತು. ಕಣ್ಣಿನ ಮುಂದೆ ಅಸಂಖ್ಯಾತ ಸ್ವಪ್ನಗಳು, ಎಲ್ಲ ಭಯಂಕರ ಸ್ವಪ್ನಗಳು, ಸಾಲಾಗಿ ಒಂದರ ಮೇಲೊಂದರಂತೆ.

ನಾನು ಜೋರಾಗಿ ನಕ್ಕು ಹೇಳಿದೆ, ಕನಸು – ಕೇವಲ ಕನಸು ಕಾಣಲೆಂದು ಟ್ಯಾಬ್‌ಲೆಟ್ ತಿನ್ನೋದಕ್ಕಾಗುತ್ತಾ? ನೀವುಗಳೆಲ್ಲ ನಿನ್ನೆ ತಿಂದಿದ್ರಿ ಅಂತ ಕಾಣುತ್ತೆ? ಆದರೆ ನಾನಂತೂ ಏನೂ ತಿನ್ನದೇನೇ, ನಿನ್ನೆ ರಾತ್ರಿ ಮನೆಯಲ್ಲಿ ಮಲಗಿ ಅನೇಕ ಅದ್ಭುತ ಸ್ವಪ್ನಗಳನ್ನು ಕಂಡಿದ್ದೇನೆ.

ಶೇಖರ ವಿಚಲಿತನಾಗದೆ ಗಡುಸಾಗಿ ಹೇಳಿದ, ಇಲ್ಲ ಕಣೋ, ಖಂಡಿತವಾಗಿಯೂ ಬೇರೇನೇ ತರಹ. ನೀನು ತಿನ್ನೋ ತನಕ ನಿನಗೆ ನಂಬಿಕೆ ಉಂಟಾಗೋದಿಲ್ಲ, ನೀನು ನಾನು ಒಟ್ಟಾಗಿ ಬಹಳಷ್ಟರ ರುಚಿ ಕಂಡಿದ್ದೇವೆ. ಆದರೆ ಇದರ ರುಚಿ ಬೇರೇನೇ ತರಹ. ಖಂಡಿತವಾಗಿಯೂ ಜೀವನವೇ ಬದಲಾಯಿಸಿಬಿಟ್ಟಿತು.

ಜೀವನವನ್ನು ಬದಲಾಯಿಸಲೇಬೇಕೆಂಬ ಹಂಬಲ ಯಾಕೆ ನಿನಗೆ ಅಷ್ಟೊಂದು.

ಜಾಣತನ ತೋರಿಸಬೇಡ. ನಿನಗೇನೂ ಆಸೇನೇ ಇಲ್ವಾ? ನಿನಗೆ ಬದಲಾಗಬೇಕೂಂತ ಅನ್ನಿಸೋದಿಲ್ವೆ? ಈಗ ಇದೇನಿದೆ ಅಷ್ಟೇ ಸಾಕೇ? ಇದೇನು ಜೀವನವೇ ?

ಟ್ಯಾಬ್‌ಲೆಟ್ ತಿಂದು ನಿನ್ನ ಜೀವನ ಯಾವ ರೀತಿ ಬದಲಾಗಿದೆಯಪ್ಪಾ ?

ಒಂದು ವೇಳೆ ಅಲ್ಪ ಸಮಯಕ್ಕೆಂದರೂ, ಖಂಡಿತವಾಗಿಯೂ ಬದಲಾಗಿದ್ದೇನೆ. ತುಂಬಾ ಭಯವಾಗಿ ಬಿಟ್ಟಿತ್ತು. ದೂರ ನಿಂತು ನನ್ನನ್ನು ನಾನೇ ನೋಡ್ತಾ ಇದೇನೆ ಅಂತ ಅನ್ನಿಸಿತ್ತು. ಅಷ್ಟೇನೂ ನಿದ್ದೆ ಬರಲಿಲ್ಲ. ಪ್ರಜ್ಞೆ ಏನೂ ತಪ್ಪಲಿಲ್ಲ. ಕೈ ಕಾಲು ನಡುಗಲಿಲ್ಲ. ಆದರೆ ಮಲಗಿದರೆ ಕಣ್ಣು ಮುಂದೆ ಬರೀ ಚಿತ್ರಗಳು. ಅಸ್ಪಷ್ಟವಾದರೂ ಅವನ್ನು ಗುರುತಿಸಲು ಸಾಧ್ಯವಾಗ್ತಾ ಇತ್ತು. ನಾನು ಯಾವುದನ್ನು ಮರೆತಿದ್ದೆನೋ ಅವೆಲ್ಲ ಪುನಃ ಅದೆಲ್ಲಿಂದ ನೆನಪಿಗೆ ಬಂದವೋ ಏನೋ? ಮರೆತದ್ದನ್ನು ಪುನಃ ನೋಡುವಾಗ ಮೈ ಜುಂ ಎಂದು ಕೂದಲೆಲ್ಲಾ ನಿಮಿರಿ ನಿಂತಿವೆ. ಎಲ್ಲಕ್ಕಿಂತ ಅದ್ಭುತವಾದದ್ದು ಇದರಲ್ಲಿ ಏನಪ್ಪಾ ಎಂದರೆ, ತುಂಬಾ ಹೊತ್ತು ನಮ್ಮ ಎರಡು ಮೂರ್ತಿಗಳನ್ನು ನೋಡಬಹುದು.

ಒಂದೇ ತರಹದ ಎರಡು ಮುಖ ಅಕ್ಕಪಕ್ಕದಲ್ಲೇ ?

ಇಲ್ಲ, ಬೇರೆ ಬೇರೆ ವಯಸ್ಸಿನ ಮುಖ. ನಾನು ಒಂದು ಸಲ ಕಂಡೆ, ನಾಲ್ಕು ವರುಷದ ಹುಡುಗ – ಕಾಲಲ್ಲಿ ಗಾಜು ಚುಚ್ಚಿಬಿಟ್ಟಿದೆ. ನೆಲದ ಮೇಲೆ ಕುಳಿತುಕೊಂಡು, ಅಳುತ್ತಿದ್ದಾನೆ. ಹುಡುಗನ ಮುಖ ನೋಡುತ್ತಲೇ ಗುರುತಿಸಿದೆ, ಅವನು ನಾನೇ. ನನ್ನದೇ ನಾಲ್ಕುವರ್ಷದ ಹುಡುಗನಾಗಿದ್ದಾಗಿನ ಮುಖ. ಚೆನ್ನಾಗಿ ಗುರುತಿಸಬಹುದು. ಅವನ ಪಕ್ಕದಲ್ಲೇ ಒಬ್ಬ ನಿಂತಿದ್ದಾನೆ, ಅವನು ಯಾರು ಗೊತ್ತೆ ?

ನಾನೇ, ಮೂವತ್ತೆರಡು ವಯಸ್ಸಿನ ನಾನು. ಯೋಚಿಸಿ ನೋಡು, ನಾಲ್ಕು ವರ್ಷದ ನನ್ನ ಪಕ್ಕದಲ್ಲಿಯೇ,ಮೂವತ್ತೆರಡು ವರ್ಷದ ನಾನು -- ಇಬ್ಬರೂ ಬೇರೆ ಬೇರೆ ಶರೀರ. ನನ್ನದೇ ಸ್ವಪ್ನ ಅಥವಾ ಕಲ್ಪನೆಯಲ್ಲಿ, ಕಣ್ಣ ಮುಂದೆ ಸ್ಪಷ್ಟವಾದ ಅದೇ ಇಬ್ಬರ ಮುಖ. ವರ್ಷಗಳ ವ್ಯತ್ಯಾಸ. ಆದರೆ ನನ್ನ ಚಿಕ್ಕವನಿದ್ದಾಗಿನ ಮುಖ ನೋಡಿದರೆ, ನನಗನಿಸುತ್ತೆ ನಾನು ಮುನ್ನೂರು ವರ್ಷಗಳನ್ನು ದಾಟಿ ಬಂದಿದ್ದೆನೋ ಏನೋ ಅಂತ. ನಿನಗೂ ನಂಬೋದಿಕ್ಕಾಗೋದಿಲ್ಲ. ಈ ತರಹ ನೋಡಿದ್ರೆ ಎಂಥ ಅಸಂಭವ ಸುಖ ಹಾಗೂ ದುಃಖ ಉಂಟಾಗುತ್ತೆ. ಆ ವಸ್ತುವಿನ ಗುಣವೇ ಅಂಥದ್ದು. ಯಾರು ಒಟ್ಟಿಗೆ ನಾಲ್ಕು ಟ್ಯಾಬ್‌ಲೇಟ್ ತಿನ್ತಾರೋ ಅವರಿಗೆ ತಾವು ಅಮ್ಮನ ಹೊಟ್ಟೆಯಲ್ಲಿ ಆ ಕತ್ತಲಲ್ಲಿ ಮಲಗಿರೋದು ಕಾಣುತ್ತಂತೆ.

ನಾನೇನೂ ಆ ದೃಶ್ಯವನ್ನು ನೋಡಬಯಸುವುದಿಲ್ಲ.

ನಿನಗಿದೆಲ್ಲ ಏನೊಂದೂ ಅರ್ಥವಾಗೋದಿಲ್ಲ. ನಿನಗಾಗಿ ನಿನ್ನೆಯವರೆಗೂ ಇಟ್ಟಿದ್ದೆ. ಖಂಡಿತವಾಗಿಯೂ ನನಗೆ ನಿನ್ನೆ ಬೇರೇನೇ ತರಹ ಆಗಿಬಿಟ್ಟಿತ್ತು.

ವೀಣಾಳ ಅಕ್ಕ ಗಮನವಿಟ್ಟು ಶೇಖರನ ಮಾತುಗಳನ್ನು ಕೇಳಿಸಿಕೊಳ್ಳುತ್ತಲಿದ್ದಳು. ಮುಖ ಬಾಡಿಸಿಕೊಂಡು ಅವಳೆಂದಳು, ಸದ್ಯ ಇನ್ನೆಂದೂ ಅದನ್ನು ಮುಟ್ಟೋದಿಲ್ಲ. ನನಗೆ ಎಷ್ಟೊಂದು ಕಷ್ಟ ಆಯ್ತು ಗೊತ್ತಾ? ಮನಸ್ಸು ಕೆಟ್ಟು ಹೋಯ್ತು. ಗೊತ್ತಿಲ್ಲದೆ ತಿನ್ನೋದೆ ಒಳ್ಳೆಯದು. ಅವರಿಗಿನ್ನೂ ಚೆನ್ನಾಗಿ, ಅದರಿಂದ ಏನು ಲಾಭ ಅನ್ನೋದು ಗೊತ್ತಾಗುತ್ತೆ. ನಿನ್ನೆ ನೀವು ಎಷ್ಟೊಂದು ಒದ್ದಾಡ್ತಾ ಇದ್ರೀರಿ. ನನಗೆ ನಿಜವಾಗಿಯೂ ತುಂಬಾ ಹೆದರಿಕೆಯಾಗಿ ಬಿಟ್ಟಿತ್ತು.

ನಾನು ಶೇಖರನನ್ನ ಪ್ರಶ್ನಿಸಿದೆ, ನಿನಗೆ ಎಲ್.ಎಸ್.ಡಿ. ಸಿಕ್ಕಿದ್ದಾದರೂ ಎಲ್ಲಿಂದ? ಈ ದೇಶದಲ್ಲಿ ಅದು ಸಿಗೋದಿಲ್ಲವಲ್ಲ?

ಸ್ಯಾಂಡಿ ಎಂಬ ಒಬ್ಬ ಅಮೇರಿಕನ್ ಹುಡುಗನಿಂದ ಕೊಂಡುಕೊಂಡೆ. ಹೇಳಬೇಕೆಂದರೆ, ಅಮೇರಿಕನ್ ಅಲ್ಲ ಕೆನಡಿಯನ್. ಏನೇ ಇರಲಿ ಆ ಚಿಕ್ಕ ಟ್ಯಾಬ್‌ಲೆಟ್‌ಗಳಿಗೆ ಮುನ್ನೂರು ರೂಪಾಯಿಗಳು.

ಮುನ್ನೂರು ರೂಪಾಯಿ? ಬರೀ ಕನಸು ಕಾಣಲು. ನೀನು ನಿಜವಾಗಿಯೂ ಹುಚ್ಚನಾಗಿ ಬಿಟ್ಟಿದೀಯ. ಖಂಡಿತವಾಗಿಯೂ ಆ ಹುಚ್ಚರ ಗುಳಿಗೆ ನಿನಗೆ ಅತ್ಯಾವಶ್ಯಕ.

ಚಂದ್ರನ ಮೇಲೆ ಯಾತ್ರಿಗಳನ್ನು ಕರೆದುಕೊಂಡು ರಾಕೆಟ್‌ಗಳು ಹೋದಾಗ, ಒಂದೊಂದು ಟಿಕೆಟ್ಟಿನ ಬೆಲೆ ಎಷ್ಟಿರುತ್ತೆ ಗೊತ್ತಾ? ಐವತ್ತು ಲಕ್ಷ ರೂಪಾಯಿಗಳು ಅಂತ ಈಗಾಗಲೇ ಘೋಷಿಸಲ್ಪಟ್ಟಿದೆ. ಹಾಗಂತ ಯಾರೂ ಹೋಗೋದೇ ಇಲ್ಲ ಅಂತ ಹೇಳೋದಕ್ಕಾಗುತ್ತ?

ಇರಲಿ ಬಿಡೋ, ಆ ಹುಡುಗನನ್ನು ಎಲ್ಲಿಂದ ಹುಡ್ಕೊಂಡು ಬಂದೆ?

ಹೇಳ್ತೀನಿ ಕೂತ್ಕೊ. ಚಹ ಕುಡೀತೀಯಾ? ವೀಣಾ ಸ್ವಲ್ಪ ಚಹ ಮಾಡು. ಚಹ ಕುಡೀತೀಯೋ? ಅಥವಾ ಗುಂಡು ಹಾಕ್ತೀಯೋ?

ಚಹಾನೇ ಕುಡೀತೀನಿ.

ಅವಿನಾಶ ಅಲ್ಲಿಂದಲೇ ಹೇಳಿದ ರಾತ್ರಿ ಎಂಟೂವರೆಯಲ್ಲಿ ಚಹವೇ ? ಲಿವರ್‌ನ ಹಾಳುಮಾಡಿಕೊಳ್ಳಬೇಕು ಅಂತಲೇ ?

ನಾನೆಂದೆ, ನಿಯಂತ್ರಣದಲ್ಲಿಟ್ಟು ನಾನು ಚಹವನ್ನೇ ಕುಡೀತೀನಿ. ವೀಣಾಳ ಕೈಯಲ್ಲಿ ಚಹ ಕುಡಿದ್ರೇನೆ ನನಗೆ ಮತ್ತೇರಿ ಬಿಡುತ್ತೆ.

ವೀಣಾಳೆಂದಳು, ಮನೇನಲ್ಲಿ ಸಕ್ಕರೆ ಇಲ್ಲ. ನೋಡ್ತೀನಿ ರೇಣುಳ ಮನೇನಲ್ಲಿದ್ಯೋ ಏನೋ ಅಂತ.

ನಾನು ಚಕಿತನಾಗಿ ಕೇಳಿದೆ, ಇದೇನಿದು, ಸಕ್ಕರೆ ಕಾರ್ಖಾನೆಯ ಮಾಲೀಕರ ಮನೇನಲ್ಲೇ ಸಕ್ಕರೆಗೆ ಅಭಾವವೇ ?

ಕೋಣೆಯಲ್ಲಿ ಎಲ್ಲರೂ ಜೋರಾಗಿ ನಗಲು ಆರಂಭಿಸಿದರು. ಹುಬ್ಬನ್ನು ಕೊಂಕಿಸಿ, ವೀಣಾ ಕೋಣೆಯಿಂದ ಹೊರ ಹೊರಟು ಹೋದಳು.

ಚಿಂತಾಮಣಿ ಬಾಬುಗಳೇ ವೀಣಾಳ ನಿಜವಾದ ಧಣಿಗಳು. ಬಹಳ ರಂಗಿನ ಮನುಷ್ಯ. ಅವರೆಲ್ಲರ ನಡುವೆಯೂ ಒಂದು ರೀತಿಯ ರಸಿಕತೆ ಇದೆ. ರಾಕೆಟ್ ಎಂಡ್ ರಾಕೆಟ್ ಕಂಪೆನಿಯ ಐವತ್ತರಷ್ಟು ಭಾಗದ ಮಾಲೀಕರು ಅವರೇ. ಅವರದು ಮೂರು ಸಕ್ಕರೆ ಕಾರ್ಖಾನೆಗಳಿವೆ. ಅವರು ಈ ರೀತಿ ಹೇಳ್ತಾರೆ – ನಮ್ಮಪ್ಪ ಬರೀ ಸಕ್ಕರೆ ಕಾರ್ಖಾನೆ ಮಾಡಲಿಲ್ಲ. ಸಕ್ಕರೆ ಹೊಂದಿಸೋನು ಚಿಂತಾಮಣಿ – ಅದಕ್ಕಾಗಿ ಮಗನ ಹೆಸರನ್ನು ಚಿಂತಾಮಣಿ ಎಂದು ಇಟ್ಟುಬಿಟ್ಟಿದ್ದಾರೆ. ನಾನು ಕೂಡಾ ರಕ್ಷಿತ ವಂಶದಲ್ಲಿ ಹುಟ್ಟಿ, ವಂಶವನ್ನು ಉಳಿಸಲಿಕ್ಕಾಗಿ ನಾನೂ ಒಬ್ಬ ರಕ್ಷಿತನನ್ನು ಹುಟ್ಟಿಸಿಕೊಂಡಿದ್ದೇನೆ. ನನ್ನ ಅಪ್ಪನಿಗೂ ಒಬ್ಬ ರಕ್ಷಿತನಿದ್ದ. ನನ್ನ ಹೆಂಡತಿಯು ಸಮಯ–ಸಂದರ್ಭ ತಿಳಿದು ತೀರಿಕೊಂಡುಬಿಟ್ಟಳು.

ಚಿಂತಾಮಣಿ ಬಾಬುಗಳದ್ದು ದೊಡ್ಡ ವ್ಯವಹಾರ. ವೀಣಾಳ ಹತ್ತಿರ ಅವರು ಕೇವಲ ಶನಿವಾರ ಬಂದು, ಇಡೀ ರಾತ್ರಿ ಇರುತ್ತಿದ್ದರು. ಅದಕ್ಕಾಗಿ ಯಾವ ತಿಂಗಳಲ್ಲಿ, ಐದು ಶನಿವಾರಗಳಿರುತ್ತೋ ? ಬೇರೆ ದಿನಗಳಾದರೆ, ಇಚ್ಛೆ ಬಂದಂತೆ ಮಾಡಬಹುದು. ವಾರದ ಅನ್ಯ ದಿನಗಳಲ್ಲೂ ಅವರು ಒಮ್ಮೊಮ್ಮೆ ಬಂದು ಹಾಜರಾಗಿ ಬಿಡುತ್ತಿದ್ದರು, ಆಗ ವೀಣಾಳ ಮನೆಯಲ್ಲಿ ಇತರ ಇನ್ನ್ಯಾವ ಪುರುಷರಿದ್ದರೂ ಅವರಿಗೆ ಸಿಟ್ಟಿಲ್ಲ. ಬರೀ ಬ್ರ್ಯಾಂದಿಯನ್ನು ಹೀರುತ್ತ ಅವರು ಎಲ್ಲರೊಡನೆಯೂ, ಹಾಸ್ಯವಾಗಿ, ಮಾತನಾಡಿಕೊಂಡು ಸರಿಯಾಗಿ ಹತ್ತರ ವೇಳೆಗೆ ಮನೆಗೆ ಹಿಂತಿರುಗುತ್ತಿದ್ದರು. ಆ ದಿನಗಳಲ್ಲಿ ಅವರು ವೀಣಾಳನ್ನು ಮುಟ್ಟುತ್ತಲೂ ಇರಲಿಲ್ಲ.

ನನಗೆ ಚಿಂತಾಮಣಿ ಬಾಬುಗಳೆಂದರೆ ಇಷ್ಟ. ಕಾರಣ ಅವರಿಂದಾಗಿಯೇ ನಾನು, ಮೊದಲು ಹಳೆಯ ಕಲ್ಕತ್ತೆಯ ವಣಿಕ ಸಮಾಜದ ಒಬ್ಬ ಪ್ರತಿನಿಧಿಯನ್ನು ಕಾಣಲು ಸಾಧ್ಯವಾದದ್ದು. ಈಗ ವ್ಯಾಪಾರಿಗಳ ಬಗ್ಗೆ ಯೋಚಿಸುತ್ತಲೇ ನೀರಸವಾದ, ಕುಂಬಳಕಾಯಿ ಗಾತ್ರದ ಮುಖವು ನೆನಪಿಗೆ ಬರುತ್ತೆ. ಆದರೆ ರಕ್ಷಿತ ಬಾಬುಗಳು ಹಾಗಲ್ಲ. ಕಲಕತ್ತೆಯ ವ್ಯಾಪಾರಿಗಳು, ತುಂಬಾ ಶುದ್ಧವಾದ ವ್ಯಕ್ತಿ. ಅವರ ವ್ಯಕ್ತಿತ್ವದಲ್ಲಿ ಯಾವೊಂದು ತೊಡಕೂ, ಅಸಂಬದ್ಧವೂ ಇಲ್ಲ. ಬಹಳ ಶಾಂತರಾಗಿ ಅವರು ಈ ಪ್ರಪಂಚದ ಬಗ್ಗೆ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಅಂಥಾ ಅಶಿಕ್ಷಿತರೇನಲ್ಲ. ಒಮ್ಮೊಮ್ಮೆ

ವೈಷ್ಣವ ಕವಿತೆಯಿಂದ ಒಳ್ಳೊಳ್ಳೆ ದೃಷ್ಟಾಂತಗಳನ್ನು ತಿಳಿಸ್ತಾರೆ. ತಲೆಯ ಮುಂಭಾಗದಲ್ಲಿ ಕೂದಲೆಲ್ಲ ಉದುರಿ ಹೋಗಿದೆ, ಹಿಂದಿನ ಕಡೆಯ ಕೂದಲನ್ನು ಮುಂಭಾಗದವರೆಗೂ, ಬಾಚಿಕೊಂಡು ಬೈತಲೆ ತೆಗೆದು ಬಾಚಿಕೊಂಡಿರುತ್ತಾರೆ. ಮೀಸೆ ಗಡ್ಡಗಳಿಲ್ಲದ ನಗು ಮುಖ. ವಯಸ್ಸು ಐವತ್ತು ಐವತ್ತೆರಡಕ್ಕಿಂತ ಹೆಚ್ಚಿಲ್ಲ. ಆದರೆ ಮಾತನಾಡುವಾಗಲೆಲ್ಲಾ ಅವರು ಹೇಳುತ್ತಿದ್ದರು, 'ಅವೆಲ್ಲ ನಮ್ಮ ಕಾಲದಲ್ಲಿದ್ದವು'. ಏನೋ ಅವರು ಸಿರಾಜುದ್ದೌಲಾನ ಆಕ್ರಮಣ ಕಾಲದಿಂದಲೂ ಈ ಪಟ್ಟಣದಲ್ಲಿಯೇ ಇದ್ದಂತೆ.

ಬಹಳ ಶ್ರಮವಹಿಸಿ ಕೆಲಸ ಮಾಡಿದ ನಂತರ, ಒಂದು ಲೋಟ ನೀರು ಕುಡಿಯುವಂತೆ, ಸಹಜವಾಗಿಯೇ, ಒಂದು ವಾರ ನಿಪುಣ ರೀತಿಯಲ್ಲಿ ವ್ಯಾಪಾರದ ಕೆಲಸ ಕಾರ್ಯವನ್ನು ಗಮನಿಸಿ ಚಿಂತಾಮಣಿ ಬಾಬುಗಳು ಶನಿವಾರ ಬೆಳಿಗ್ಗೆ ವೀಣಾಳ ಮನೆಗೆ ಬರುತ್ತಿದ್ದರು. ಆ ದಿನ ಅವರು ಸಂಪೂರ್ಣ ವಿಶ್ರಾಂತಿ ಬಯಸುತ್ತಿದ್ದರು. ಬೇರಿನ್ಯಾವ ದಿನಗಳಲ್ಲೂ ಅವರು ಬಂದಾಗ, ಸುತ್ತಾಡಲು ಅಥವಾ ಹರಟೆ ಹೊಡೆಯಲು ಬಂದಂತೆ ಬರುತ್ತಿದ್ದರು. ಈ ತರಹದ ದಿನಗಳಲ್ಲೇ ನನಗೆ ಹಾಗೂ ಶೇಖರನಿಗೆ ಅವರ ಭೇಟಿಯಾಗುತ್ತಿತ್ತು. ಕಚ್ಚೆ ಪಂಚೆ, ಸಡಿಲವಾದ ಜುಬ್ಬ ತೊಟ್ಟು, ಅನುತ್ತೇಜಿತ ಭಾವದಿಂದ ಬರುವರು. ಬಂದು ಆರಾಮವಾಗಿ ತಮ್ಮ ಬೆಳ್ಳಿ ಎಲೆ ಅಡಿಕೆ ಡಬ್ಬಿ ಹೊರಗೆ ತೆಗೆದಿಟ್ಟುಕೊಂಡು ಕುಳಿತುಕೊಳ್ಳುವರು. ಆನಂತರ ಹೇಳುವರು, ವೀಣಾ ಸ್ವಲ್ಪ ಕೆಂಡ ಮಾಡಿಕೊಡು, ನನಗೆ ಚಿಕ್ಕವನಿಂದಲೂ, ಧೂಪದ ಗಂಧವನ್ನು ಮೂಸಿ ನೋಡುವ ಅಭ್ಯಾಸವಾಗಿ ಬಿಟ್ಟಿದೆ. ಆಫೀಸಿನಲ್ಲಿ, ಮನೇನಲ್ಲಿ, ಯಾವಾಗಲೂ ಕೆಂಡ ಇದ್ದೇ ಇರುತ್ತೆ. ಮನೇನಲ್ಲಿ ಸಂಜೆ, ಧೂಪದ ಗಂಧವಿಲ್ಲದಿದ್ದರೆ, ನನಗಾಗೋದೇ ಇಲ್ಲ. ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಿದೀನಿ ನೋಡಿದ್ಯಾ, ಅದಿಲ್ಲದೇ ಸಾಧ್ಯವೇ ಇಲ್ಲ. ಆ ಸಮಯದಲ್ಲೆಲ್ಲಾ ವೀಣಾಳ ಜೊತೆ ಅವರ ವ್ಯವಹಾರ ಒಬ್ಬ ತಂದೆಯಂತೆ ಸ್ನೇಹಮಯ.

ಚಿಂತಾಮಣಿ ಬಾಬುಗಳು ನನಗಿಷ್ಟವಾಗಿದ್ದರು. ಕಾರಣ ಅವರೇ ನನಗೆ ಕಲಕತ್ತೆಯ ನಾಗರೀಕ ಸಮಾಜದ ಒಂದು ದಿಕ್ಕನ್ನು ತೋರಿಸಿಕೊಟ್ಟವರು. ಸಮಾಜದಲ್ಲಿ ಅವರು ಒಳ್ಳೆ ದಕ್ಷ ವ್ಯಾಪಾರಿಗಳು, ಮನೆಯಲ್ಲಿ ಖಂಡಿತವಾಗಿಯೂ ಒಬ್ಬ ಜವಾಬ್ದಾರಿಯುತ ತಂದೆ. ಒಬ್ಬ ಮಗನನ್ನು ಟೆಕ್ನಾಲಜಿ ಓದಲು ವಿದೇಶಕ್ಕೆ ಕಳಿಸಿದ್ದರು, ಸ್ವಂತ ಮಗಳನ್ನು ಎಂದೂ ಯಾರೊಡನೆಯೂ ಸಿನೇಮಾಗೂ ಕಳಿಸಿದವರಲ್ಲ. ವಠಾರದ ದುರ್ಗಾಪೂಜೆಯ ಸಂದರ್ಭದಲ್ಲಿ ಅವರನ್ನು ಸಹ ಸಭಾಪತಿಗಳನ್ನಾಗಿ ಆಯ್ಕೆ ಮಾಡಲಾಗುತ್ತದೆ. ಸ್ಥಳೀಯ ವ್ಯಾಯಾಮ ಸಂಘದ ಬಹುಮಾನ ವಿತರಣೆಯ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಒಳ್ಳೆಯ ಭಾಷಣ ಮಾಡುತ್ತಿದ್ದರು. ನೇತಾಜಿ ಒಂದು ವೇಳೆ ಹಿಂತಿರುಗಿ ಬಂದರೆ ಖಂಡಿತವಾಗಿಯೂ ದೇಶದ ಪರಿಸ್ಥಿತಿ ಸುಧಾರಿಸುತ್ತೆ ಅನ್ನೋ ಅಚಲ ನಂಬಿಕೆಯನ್ನು ಅವರಿನ್ನೂ ಹೊಂದಿದ್ದರು. ಅಷ್ಟೇ ಅಲ್ಲ, ಪಕ್ಕದ ಮನೆಯ ಮದುವೆಯಲ್ಲಿ, ಮಂತ್ರ ಪಠಿಸುವಾಗ, ತಪ್ಪು ಮಾಡಿದಾಗ ಅವರೇ ಅದನ್ನು ಕಂಡುಹಿಡಿದಿದ್ದರು ಮತ್ತು ಅವರು ಪ್ರತಿ ಶನಿವಾರ ವೀಣಾಳ ಬಳಿ ಬಂದಿದ್ದು ಹೋಗುತ್ತಿದ್ದರು ಕೂಡಾ. ಇದರಲ್ಲಿ ಯಾವೊಂದು ವೈಪರೀತ್ಯ ಅಥವಾ

ಹುಚ್ಚುತನವೂ ಇರಲಿಲ್ಲ. ಅತ್ಯಂತ ಸ್ವಾಭಾವಿಕ. ಚಿಂತಾಮಣಿ ರಕ್ಷಿತರ ಆಶ್ರಯ ಪಡೆದು, ವೀಣಾ ಚೆನ್ನಾಗಿಯೇ ಇದ್ದಾಳೆ.

ವೀಣಾಳ ಅಕ್ಕ, ಸಾಧನಾ ಮಂಚದ ಮೇಲೆ ಒರಗಿ, ಅರ್ಧ ಮಲಗಿಕೊಂಡಿದ್ದಾಳೆ. ಅವಳ ಕಾಲು, ನನ್ನ ಮೈ ತಗಲುತ್ತಿದೆ. ಸ್ವಲ್ಪ ಹೊತ್ತಿನಿಂದಲೂ, ಇದಕ್ಕಾಗಿ ನನಗೆ ಮುಜುಗರವೆನಿಸತೊಡಗಿದೆ. ಸುಂದರ ಸ್ತ್ರೀಯೇ ಆಗಿರಲಿ, ಬೇರಿನ್ಯಾರೇ ಆಗಿರಲಿ, ಮೈಗೆ ಕಾಲು ತಗಲಿಸುವುದು ನನಗೊಂದಿಷ್ಟೂ ಇಷ್ಟವಾಗೋದಿಲ್ಲ. ನಾನು ಸ್ವಲ್ಪ ಸರಿದು ಕುಳಿತು, ವಾರೆಗಣ್ಣಿನಿಂದ ಅವಳನ್ನು ಒಮ್ಮೆ ನೋಡಿದೆ. ಅವಳನ್ನು ನೋಡಿದ್ರೆ ತಿಳಿಯುತ್ತೆ, ತುಂಬಾ ಗಂಡಸರಿಂದ, ಪಾದ ಸೇವೆ ಹೊಂದಿ ಈ ಹೆಂಗಸು ಅಸಭ್ಯಳಾಗಿ ಬಿಟ್ಟಿದಾಳೇಂತ. ವೀಣಾಳೇನೂ ಅಂಥಾ ಸುಂದರಿ ಏನಲ್ಲ. ಆದರೆ ವೀಣಾಳ ಅಕ್ಕಳನ್ನು ಸುಂದರಿ ಎಂದೇ ಹೇಳಬೇಕು. ತುಂಬಾ ಸುಂದರಿ ಎಂದೇನಲ್ಲ, ಸೌಂದರ್ಯ ಅವಳ ಶರೀರಕ್ಕೇರಿದೆ ಅಷ್ಟೆ, ಒಂದು ಒಳ್ಳೆ ಮಿಶ್ರಣವಿದ್ದಂತೆ. ಒಂದು ಗಾಢ ನೀಲಿ ಬಣ್ಣದ, ತೆಳು ಸಿಲ್ಕಿನ ಜರಿ ಸೀರೆ ಉಟ್ಟಿದ್ದಾಳೆ. ಆ ತರಹದ ಜರಿ ಸೀರೆಯನ್ನು ಈ ನಡುವೆ ಕಲ್ಕತ್ತೆಯಲ್ಲಿ ಬೇರಿನ್ಯಾವ ಹೆಂಗಸರೂ ಉಡುವುದಿಲ್ಲ. ತಲೆ ತುಂಬಾ ಕೂದಲು, ಮೃದುವಾದ ಮುಖ, ಬಿಳಿ ಮೈ ಬಣ್ಣ, ತುಟಿ, ಮೂಗು, ರೆಪ್ಪೆ, ಹುಬ್ಬು ಎಲ್ಲವೂ ಚಿತ್ರದಲ್ಲಿ ಬರೆದಂತೆ. ಯಾರಿಗೆ ಗೊತ್ತು ಇದರಲ್ಲಿ, ಒಂದೆರಡು, ದಿಟವಾಗಿ ಬರೆಯಲ್ಪಟ್ಟಿವೆಯೋ ಏನೋ ? ನಾನಂತೂ ಕೈ ಮುಟ್ಟಿ ನೋಡ ಹೋಗಲಿಲ್ಲ. [illegible] ವೇಷ ಭೂಷಣದಲ್ಲಿ ಬೇರಿನ್ಯಾವ ತರಹದ ನಾವೀನ್ಯತೆ ಇದೆ ಎನ್ನುವುದು [illegible]ವಾಗಲಿಲ್ಲ. ಆದರೆ ಮುಖದಲ್ಲಿ ಖಂಡಿತವಾಗಿಯೂ ಒಬ್ಬ ಮುಸಲ್ಮಾನ ಹುಡುಗಿಯ ಕಳೆ ಬಂದು ಬಿಟ್ಟಿದೆ. ಕಣ್ಣು ಕಣ್ಣು ಎದುರಾದಾಗ ನಾನು ಕೇಳಿದೆ, ನೀವು ಯಾವಾಗ ಬಂದಿರಿ ?

ಏಳೆಂಟು ದಿನವಾಯ್ತು, ಕಳೆದ ಸೋಮವಾರ ಬಂದೆ.

ಹೇಗೆ ಬಂದಿರೋದು ?

ಪ್ಲೇನಿನಲ್ಲಿ. ಕೊಲೊಂಬೊದಿಂದ.

ಸ್ವಲ್ಪ ದಿನ ಇಲ್ಲಿ ಇರ್ತೀರಾ ?

ನೋಡಬೇಕು, ತುಂಬಾ ಅಗತ್ಯವಾದ ಕೆಲಸದ ಮೇಲೆ ಬಂದಿದ್ದೀನಿ. ಬರದೇ ಉಪಾಯವಿರಲಿಲ್ಲ.

ನಿಮ್ಮ ಪಾಲಿಗೆ ಇಲ್ಲಿರೋದು ಬಹಳ ಆಪತ್ತು. ನಿಮ್ಮ ಗಂಡನಿಗೆ ಗೊತ್ತಾದ್ರೆ ಕಷ್ಟ.

ಇಲ್ಲ, ಇನ್ನೇನಾಗುತ್ತೆ ? ನನ್ನ ಮನಸ್ಸಿಗಿವತ್ತು ತುಂಬಾ ಬೇಜಾರಾಗಿದೆ. ಮಂಚದ ಕೆಳಗಿಂದ ಸ್ವಲ್ಪ ಬ್ರಾಂಡಿ ಬಾಟಲಿಯನ್ನು ಎತ್ತಿಕೊಡ್ತೀರಾ ?

ಅಪರಿಚಿತರಿಬ್ಬರಲ್ಲಿ ಒಬ್ಬಾತ, ಎದ್ದು ನಿಂತು ಹೇಳಿದ, ನಾನು ಕೊಡ್ತೀನಿ. ಸಾಧನಾ ಕೈ ಚಾಚಿ ಹೇಳಿದಳು, ಇವರೇ ಈಗ ನನ್ನ ಗಂಡ. ಇವರ ಹೆಸರು ಅಬ್ದುಲ್ ಹಲೀಮ್. ಇನ್ನೊಬ್ಬರು ನನ್ನ ಸ್ನೇಹಿತರು ಶಹೀದ್ ಚೌಧರಿ.

ಬೆಲೆ ಬಾಳುವ ಸೂಟ್ ಹಾಕಿಕೊಂಡ ಇಬ್ಬರ ಮುಖದಲ್ಲೂ ಹೆದರಿಕೆಯ ಭಾವ. ಆದರೂ ಜೋರಾಗಿ ನಗುವ ಪ್ರಯತ್ನವನ್ನು ಮಾಡಿದರು.

ನಾನು ನನ್ನ ಎರಡೂ ಕೈ ಎತ್ತಿ ನಮಸ್ಕಾರ ಮಾಡುವವನಿದ್ದೆ. ಅನಂತರ ಏನೋ ಯೋಚಿಸಿ, ಕೇವಲ ಒಂದೇ ಕೈ ಎತ್ತಿದೆ. ಅವರಿಬ್ಬರೂ, ತಮ್ಮ ಕೈಯನ್ನು ಹಣೆಯವರೆಗೂ ಎತ್ತಿದರು.

ನನಗೊಂದು ವಿಷಯ ಯೋಚಿಸಿ ತುಂಬಾ ಮಜಾ ಎನಿಸಿತು. ಸ್ವಲ್ಪ ಹೊತ್ತಿನ ಮೊದಲು ವೀಣಾ ಅಜಯ್ ಬಾಬುಗೆ ಭಾವನವರು ಎಂದಿದ್ದಾಳೆ,. ಪಾಪ ಆತ ಇದ್ದೂ ಇಲ್ಲದವನಾಗಿ ಬಿಟ್ಟಿದ್ದಾನೆ. ನನಗನ್ನಿಸುತ್ತೆ ಹಳೇ ಅಭ್ಯಾಸದಿಂದಲೇ ವೀಣಾ ಈಗಲೂ ಅವರನ್ನು ಭಾವನವರು ಎಂದೇ ಕರೆಯುತ್ತಾಳೆ.

ಶಹೀದ್ ಚೌಧರಿ ಎಂಬ ಹೆಸರಿನವನೆಂದ, ನಾವಿನ್ನು ಹೊರಡಬೇಕು. ಸಾಧನ ಸ್ವಲ್ಪ ಗದರುವಂತೆ ಅವನಿಗೆಂದಳು, ಕೂತ್ಕೊಬಾರ್ದೆ, ಯಾಕಿಷ್ಟು ಅವಸರ ? ಆತನೆಂದ, ಇಲ್ಲ ಅವಸರವೇನಿಲ್ಲ, ನಾವು ಕೋಣೆಯನ್ನು ಆಶ್ರಯಿಸಿಕೊಂಡು ಬಿಟ್ಟಿದ್ದೀವಿ. ಇದರಿಂದ ಅವರಿಗೇನಾದ್ರೂ ತೊಂದ್ರೆಯಾಗುತ್ತೋ ಏನೋ. ಅವರಿಗೆ ಅವರ ಸ್ವಂತ ವ್ಯವಹಾರ ಏನಾದ್ರೂ ಇರಬಹುದು. ಅವಿನಾಶ 'ಹೋ' ಎಂದು ನಗುತ್ತ ಉತ್ತರಿಸಿದ, ಇಲ್ಲಿ ನಮ್ಮಲ್ಲಿ ಯಾವುದೂ ಅಂಥಾ ರಹಸ್ಯವಿಲ್ಲ. ನಾವೆಲ್ಲರೂ ಒಂದೇ. ನೀವು ಕೂತ್ಕೊಳ್ಳಿ.

ವೀಣಾ ಚಹ ತೆಗೆದುಕೊಂಡು ಒಳ ಬಂದಳು. ಇದೇನಿದು ಎಲ್ಲರೂ ಗಂಟು ಹಾಕಲು ಪ್ರಾರಂಭಿಸಿಬಿಟ್ಟಿರಿ. ಹಾಗಾದ್ರೆ ನಾನು ಚಹವನ್ನು ಮಾಡಲೇಬಾರದಿತ್ತು. ನಾನೆಂದೆ, ನನಗೆ ಕೊಡು ಚಹ. ನಾನು ಚಹವನ್ನೇ ಕುಡೀತೀನಿ. ಶೇಖರ ಬಾತ್‌ರೂಮಿನಿಂದ ಹಿಂತಿರುಗಿ ಬಂದು ಹೇಳಿದ, ನನಗೂ ಚಹ ಕೊಡು. ನನ್ನ ತಲೆ ಇನ್ನೂ ಸುತ್ತುತ್ತಾ ಇದೆ.

ನಿಜ, ಹಳೇ ರೋಗಿಯ ತರಹ ಶೇಖರ ಗೋಡೆ ಹಿಡಿದುಕೊಂಡು ನಡೆಯುತ್ತಿದ್ದ. ಕಣ್ಣಿನಲ್ಲೂ ಏನೋ ಒಂದು ರೀತಿಯ ಮತ್ತು. ನಾನೆಂದೆ, ಇದೇನಾಗಿದೆಯೋ ನಿನಗೆ ? ಶೇಖರನೆಂದ, ನಿನ್ನೆ ತಲೇನಲ್ಲಿ ಒಂದು ತರಹ ಆಗಿಬಿಟ್ಟಿತ್ತು. ಆಗಿನಿಂದ ಆರೋಗ್ಯ ಕೆಟ್ಟಂತಾಗಿದೆ, ಆದರೆ ಈಗ ಸ್ವಲ್ಪ ಪರವಾಗಿಲ್ಲ.

ವೀಣಾ ಕಾತುರದಿಂದ ಹೇಳಿದಳು, ಎಷ್ಟೋ ವಿಧದಲ್ಲಿ ಹೇಳಿದೆ, ಹಾಳಾದ ಆ ಟ್ಯಾಬ್‌ಲೆಟ್ ತೊಗೋಬೇಡಿ ಅಂತ. ಆದರೆ ಕೇಳದೆ ತಿಂದಿದೀರ. ಮಂಚದ ಬಳಿ ಹೋಗಿ, ಮಂಚದ ಹಿಡಿಯನ್ನು ಹಿಡಿದು, ನೇರವಾಗಿ ನಿಂತುಕೊಂಡ ಶೇಖರ, ಒಂದು ಕೈಯಿಂದ ವೀಣಾಳನ್ನು ಹತ್ತಿರ ಎಳೆದುಕೊಂಡು ಹೇಳಿದ, ಅಯ್ಯೋ ಹುಚ್ಚಿ ಯಾಕಿಷ್ಟು ಭಯ ?

ವೀಣಾ ಸ್ವಲ್ಪ ಚಡಪಡಿಸಿ ಹೇಳಿದಳು, ಇದೇನಾಗಿದೆ ? ಇಷ್ಟು ಜನರ ಮುಂದೆ.....

ಶೇಖರ ಆವೇಗದಿಂದ ಹೇಳಿದ, ಯಾರೂ ಇಲ್ಲ. ಕಣ್ಣು ಮುಚ್ಚಿಕೋ ಆಗ ನಮ್ಮನ್ನು ಯಾರೂ ನೋಡೋಕಾಗೋದಿಲ್ಲ. ಬಾ ಹತ್ತಿರ ಒಂದು ಮುತ್ತು ಕೊಡು. ಇದೇನಿದು ಜೋರಾಗಿ ದಬ್ತಾ ಇದೀಯ. ಬಿದ್ದು ಹೋಗ್ತೀನಿ, ಮೊದಲೇ ನನ್ನಿಂದ ನಿಂತುಕೊಳ್ಳೋದಕ್ಕಾಗ್ತಾ ಇಲ್ಲ.

ವೀಣಾ ತನ್ನನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡಿ ಹೇಳಿದಳು, ಈಗ ಬೇಡ

ಆಮೇಲೆ, ಆಮೇಲೆ.

ಆಮೇಲೆ ಬೇಡ, ಈಗಲೇ ಈಗಲೇ. ನನಗೀಗಲೇ ಆಸೆ ಆಗ್ತಾ ಇದೆ. ಆಮೇಲೆ ಬೇಡ.

ಬೇಡ, ಬೇಡ.

ನಾನು ಆ ಕಡೆಯಿಂದ ಮುಖ ಹೊರಳಿಸಿಕೊಂಡು ಬಿಟ್ಟೆ. ಇವತ್ತು ಈ ಮನೆಯ ವಾತಾವರಣ ಒಂದು ರೀತಿಯದಾಗಿತ್ತು. ಏನೋ ಒಂದು ರೀತಿಯ ಮುಜುಗರ, ಮಾತುಕತೆ ಕಡಿದು ಹೋಗ್ತಾ ಇದೆ. ಶೇಖರನ ಜೊತೆ ಹಿಂದೆ ನಾನಿಲ್ಲಿಗೆ ಬಂದಿದ್ದಾಗ ಒಂದು ದೊಡ್ಡ ಹಗರಣವನ್ನೇ ಕಂಡಿದ್ದೆ. ಆಗ ವೀಣಾ ಕಂಠಪೂರ್ತಿ ಕುಡಿದು, ನರ್ತಿಸುವ ಭಂಗಿಯನ್ನು ಮಾಡುತ್ತ (ಅವಳಿಗೆ ನೃತ್ಯ ಬರುತ್ತಿರಲಿಲ್ಲ) ಜೋಲಾಡುತ್ತ ಬಂದು ಬೀರುವಿನ ಮೇಲೆ ಬಿದ್ದು, ಫಳಫಳನೆ ಗಾಜು ಒಡೆದಿತ್ತು ಮತ್ತು ಹೆಂಗಸರ ಹತ್ತಿರ ಗಾಜು ಒಡೆಯುವ ಸದ್ದು ಎಷ್ಟೊಂದು ಚೆಂದ! ನನಗನ್ನಿಸಿತ್ತು ಹೆಂಗಸರ ಅಕ್ಕ ಪಕ್ಕ ಸದಾ ಗಾಜು ಒಡೆಯುತ್ತಲೇ ಇರಲಿ. ಆ ಶಬ್ದದಿಂದ ನನಗೆ ಎಷ್ಟು ಮೋಜೆನಿಸಿತ್ತೆಂದರೆ, ಆ್ಯಷ್‌ಟ್ರೇಯನ್ನು ಉಳಿದ ಗಾಜನ್ನು ಒಡೆಯಲೆಂದು ಎತ್ತಿ ಒಗೆದಿದ್ದೆ. ಇಂದು ಇಲ್ಲಿ ನಾನಾ ರೀತಿಯ ಜನರ ಗುಂಪಿನಲ್ಲಿ ಏನೋ ಒಂದು ರೀತಿಯ ಮುಜುಗರದ ಭಾವನೆ. ಜಮುನಾಳ ಮನೆಗೆ ಹೋಗಿಯೂ, ಜಮುನಾಳನ್ನು ಕಾಣದೆ ನನ್ನ ಮನಸ್ಸಿಗೆ ಬಹಳ ಬೇಸರವಾಗಿತ್ತು. ಮನಸ್ಸು ಕೆಟ್ಟರೆ ಸಿಟ್ಟು, ಆಗ ವಿನಾಕಾರಣ ಸಿಟ್ಟು ಬರುತ್ತೆ. ಏನನ್ನಾದರೂ ಎತ್ತಿ ಬಿಸಾಡಿ ಬಿಡಬೇಕು ಅಂತ ಆಸೆಯಾಗುತ್ತೆ. ಮತ್ತು ಪ್ರಪಂಚದಲ್ಲಿ ಏನೆಲ್ಲ ಒಡೆದು ಹೋಗುವಂಥ ವಸ್ತುಗಳಿವೆಯೋ, ಅವುಗಳಲ್ಲಿ ಎಲ್ಲಕ್ಕಿಂತ ಆಕರ್ಷಣೀಯವಾದದ್ದು ಯಾವುದೆಂದರೆ ನಿಯಮವನ್ನು ಒಡೆಯುವುದು. ಜಮುನಾಳ ಮನೆಗೆ ಹೋಗಿ, ನನಗಿವತ್ತು ಅವಮಾನವಾಯಿತೆಂದೆನಿಸಿತು. ಅವಮಾನ ಮಾಡಿದವರ್‍ಯಾರು ಅನ್ನೋದನ್ನು ಖಚಿತವಾಗಿ ಹೇಳೋದಕ್ಕಾಗೋದಿಲ್ಲ. ಆದ್ರೂ ಎಲ್ಲ ಸೇರಿ ಒಂದು ರೀತಿಯಲ್ಲಿ ಏನೋ. ಜಮುನಾಳನ್ನು ಕಾಣದಿದ್ದುದೇ ಒಂದು ದೊಡ್ಡ ಅಪಮಾನ. ಜಮುನಾ ನೀನು ನನಗೆ ಬೇಕು. ನೀನು ನನ್ನನ್ನು ಬಿಟ್ಟು ಬಿಡಬೇಡ. ನಾನಿಲ್ಲಿ ಬಂದು ತಪ್ಪು ಮಾಡಿದೆ. ಇನ್ನೆಂದೂ ಬರುವುದಿಲ್ಲ. ಈಗ ನನಗನಿಸ್ತಾ ಇದೆ, ಇಲ್ಲಿ ಯಾವುದೋ ಬೇರೆ ತರಹದ ವ್ಯವಹಾರ ನಡೀತಾ ಇದೆ. ಆದರೆ ಅದರೊಂದಿಗೆ ನನಗಾವ ಸಂಪರ್ಕವೂ ಇಲ್ಲ.

ಶೇಖರ ವೀಣಾಳಿಗೆ, ಗಟ್ಟಿಯಾಗಿ ಮುತ್ತಿಟ್ಟ. ಶೇಖರನ ಎರಡೂ ಕೈಯ ಮುಷ್ಠಿಯಲ್ಲಿ ವೀಣಾಳ ಕೂದಲು ಹಿಡಿಯಲ್ಪಟ್ಟಿತ್ತು. ಸ್ವಲ್ಪ ಹೊತ್ತಿನ ಮೊದಲಷ್ಟೆ, ವೀಣಾ ಕನ್ನಡಿಯ ಮುಂದೆ, ಬಹಳ ಶ್ರಮವಹಿಸಿ, ತನ್ನ ಕೂದಲನ್ನು ಬಾಚಿ ಕಟ್ಟಿಕೊಂಡಿದ್ದಳು. ಈಗ ಅದೆಲ್ಲ ಅವ್ಯವಸ್ಥೆಯಾಗಿ ಬಿಟ್ಟಿತ್ತು. ತನ್ನನ್ನು ಬಿಡಿಸಿಕೊಂಡ ವೀಣಾ ಹೇಳಿದಳು, ಇವನೊಬ್ಬ ರಾಕ್ಷಸ.

ಅವಿನಾಶನೆಂದ, ಸ್ವಲ್ಪ ಈ ಕಡೆ ಬಾ ವೀಣಾ, ನಾನೂ ಒಂದು ಮುತ್ತು ಕೊಡುತ್ತೇನೆ.

ವೀಣಾ ಹೇಳಿದಳು, ಇನ್ನು ಸಂಶಯವೇ ಇಲ್ಲ. ಅವಿನಾಶ ಚಂಗನೆ ಹಾರಿ ಬಂದು ವೀಣಾಳನ್ನು ಅಪ್ಪಿಹಿಡಿದುಕೊಂಡ. ಸ್ವಲ್ಪ ಹಿಚುಕಾಟದ ನಂತರ, ಅವಿನಾಶ ನಿಶ್ಶಬ್ದವಾಗಿ, ಚುಂಬಿಸುವ ದೃಶ್ಯವನ್ನೇನೋ ನೋಡಲಾಯಿತು. ಸಿಟ್ಟು ಬಂದ ಬೆಕ್ಕಿನ ತರಹ ವೀಣಾ ನನ್ನ ಮುಂದೆ ಬಂದು ನಿಂತು ಹೇಳಿದಳು, ತೊಗೊಳ್ಳಿ, ನೀವೊಬ್ಬರೇ ಇನ್ನು ಬಾಕಿ ಇರೋದು.

ನಾನು ನಗುತ್ತ ಹೇಳಿದೆ, ಮೊದಲು ಮುಖ ತೊಳೆದುಕೊಂಡು ಬಾ.

ಯಾಕೆ ಮುಖ ತೊಳೆದುಕೊಂಡು ಬರಬೇಕು ?

ಅವಿನಾಶನ ಎಂಜಲನ್ನು ಯಾರು ತಿನ್ನಬೇಕು.

ಮಂಚದ ಮೇಲಿಂದ, ಸಾಧನ ಕಿಲಕಿಲನೆ, ಹುಚ್ಚರ ರೀತಿಯಲ್ಲಿ ನಕ್ಕು ಹೇಳಿದಳು, ನನಗೇನೂ ಎಂಜಲಿಲ್ಲ ಬನ್ನಿ. ನನ್ನ ಕಡೆ ಒಂದು ಕೈಚಾಚಿ ಹೇಳಿದಳು, ಬನ್ನಿ. ನಂತರ ಅಬ್ದುಲ್ ಹಲೀಮರ ಕಡೆ ವಕ್ರ ನೋಟ ಬೀರಿ ಹುಚ್ಚು ನಗು. ನಾನು ಮಂಚದಿಂದೆದ್ದು, ಥಟ್ಟನೆ ಕೆಳಗಿಳಿದು ಬಿಟ್ಟು ಹೇಳಿದೆ, ಅಯ್ಯೋ.....

ಸಾಧನಾ ಅಸ್ಪಷ್ಟವಾಗಿ ಹೇಳಿದಳು, ಏಯ್ ಅವರನ್ನು ಹಿಡ್ಕೊಳ್ಳಿ ಅಬ್ದುಲ್, ಅವರನ್ನು ನನ್ನ ಕಡೆ ಕರ್ಕೊಂಡು ಬನ್ನಿ. ಅವರು ನನ್ನನ್ನು ಒಮ್ಮೆ ಚುಂಬಿಸಲೇಬೇಕು.

ನಾನು ತಪ್ಪಿಸಿಕೊಳ್ಳುವ ಭಂಗಿ ಮಾಡಿ ಹೇಳಿದೆ, ಎಚ್ಚರಿಕೆ, ಇವತ್ತು ಯಾರೂ ನನ್ನನ್ನು ಮುಟ್ಟಲಾಗದು. ಮೊದಲೇ ಹೇಳಿ ಬಿಟ್ಟಿದೀನಿ. ಅಬ್ದುಲ್ ಹಲೀಮ್ ನನ್ನ ಬಳಿಯೇ ನಿಂತುಕೊಂಡು ಹೇಳಿದ, ನಿಮಗೆ ಭಯವಾಗ್ತಾ ಇದೆಯಾ ?

ನಾನು ಅವರ ಕಿವಿಯಲ್ಲಿ ಮುಖವಿಟ್ಟು ಉಸುರಿದೆ, ಭಯವಲ್ಲ, ಹೇಸಿಗೆ.

ಅಬ್ದುಲ್ ಹಲೀಮರ ಮುಖ ಕಪ್ಪಿಟ್ಟಿತು. ನಾನು ಹೇಳಿದ್ದು ಅವರಿಗೆ ಅರ್ಥವಾಗಲೇ ಇಲ್ಲವೆನ್ನುವಂತೆ ಮುಖ ಮಾಡಿದರು.

ಅವಿನಾಶನೆಂದ, ನೂರ್‌ಜಹಾನ್ ಬೇಗಂ, ನನಗೊಂದು ಛಾನ್ಸ್ ಕೊಡ್ತೀರಾ.

ಸಾಧನ ಆಗ ಗ್ಲಾಸನ್ನು ಮುಂದಿಟ್ಟುಕೊಂಡಿದ್ದಳು. ಪೂರ್ತಿ ಕುಡಿದು ಹೇಳಿದಳು, ಛೇ, ಮನಸ್ಸು ಕೆಟ್ಟುಹೋಯ್ತು. ಎದೆಯಲ್ಲಿ ನೋವಾಗ್ತಾ ಇದೆ.

ಅಬ್ದುಲ್ ಹಲೀಮನೆಂದ, ಈಗ ಹೋಟೇಲಿಗೆ ಹಿಂತಿರುಗೋದಿಲ್ಲವೇ ? ಸಾಧನಳೆಂದಳು, ಇಲ್ಲ ದೇಹಕ್ಕೆ ಆಲಸ್ಯವೆನಿಸ್ತಾ ಇದೆ. ಸ್ವಲ್ಪ ಹೊತ್ತು ಮಲಗಿಕೊಂಡಿರ್ತೀನಿ, ನೀವು ಕೂತಿರಿ.

ವೀಣಾಳೆಂದಳು, ಅಕ್ಕ ಇನ್ನು ಕುಡಿದದ್ದು ಸಾಕು. ಇದರಿಂದಲೇ ನಿನ್ನ ಆರೋಗ್ಯ ಕೆಟ್ಟಿರೋದು.....

ಸಾಧನಳ ದನಿ ಬದಲಾಯಿತು, ನನ್ನ ದೇಹಕ್ಕೇನೂ ಆಗಿಲ್ಲವೆ, ಚೆನ್ನಾಗೇ ಇದೀನಿ ಆದರೆ ನನ್ನ ಮನಸ್ಸಿಗೆ ಯಾವುದರಿಂದಲೂ ಹಿತವೆನಿಸ್ತಾ ಇಲ್ಲ.

ಶೇಖರ ನನ್ನ ಕೈಹಿಡಿದು ಹೇಳಿದ, ನಡಿ ಸುನೀಲ್, ಮೇಲ್ಬಾವಣಿಗೆ ಹೋಗೋಣ. ಇಲ್ಲಿ ತುಂಬಾ ಸೆಖೆ, ಅಲ್ಲಿ ಚೆನ್ನಾಗಿ ಗಾಳಿ ಬರುತ್ತೆ. ಮೇಲ್ಗಡೆ ಒಂದು ಚಿಕ್ಕ ಕೋಣೆ ಇದೆ. ಶನಿವಾರ ಚಿಂತಾಮಣಿ ಬಾಬುಗಳು ಬಂದಿದ್ದರು. ನಾನು ಅವತ್ತು ಅಲ್ಲೇ ಇದ್ದೆ, ತುಂಬಾ ಚೆನ್ನಾಗಿತ್ತು. ವಿದೇಶಕ್ಕೆ ತಿರುಗಾಡೋದಕ್ಕೆ ಬಂದಿದೀನೇನೋ ಅಂತ

ಅನ್ನಿಸಿತು.

ಅವಿನಾಶನೆಂದ, ನಡಿ ಬ್ರ್ಯಾಂಡಿ ಬಾಟಲನ್ನು ತೊಗೊಂಡು ಮೇಲೆ ಹೋಗಿ ಕುಳಿತು ಕೊಳ್ಳೋಣ. ವಿಲಾಯತೀದು ಕಣೋ, ಗಮನ ಇಟ್ಟು ನೋಡೋ ಸುನೀಲ್. ಮೇಲ್ಛಾವಣಿಯಲ್ಲಿ ಕುಳಿತು ನಾನು ಶೇಖರನಿಗೆ ಹೇಳಿದೆ, ಅವರೆಲ್ಲ ಎಲ್ಲಿಂದ ಬಂದು ಸೇರ್‍ಕೊಂಡ್ರಯ್ಯ ?

ಯಾಕೆ ನಿನಗಿಷ್ಟವಾಗಲಿಲ್ಲವೇ ?

ಇಲ್ಲ, ಸ್ವಲ್ಪಾನೂ ಇಲ್ಲ.

ಈಗ ತಾನೇ ಅಷ್ಟು ದೊಡ್ಡ ಫಿಲ್ಮ್‌ಸ್ಟಾರ್ ನಿನ್ನನ್ನು ಚುಂಬಿಸಬೇಕೆಂದಿದ್ದಳು. ನೀನೇ ನಿರಾಕರಿಸಿಬಿಟ್ಟೆ. ಬೇರಿನ್ಯಾರಿಗಾದ್ರೂ, ಈ ತರಹದ ಅವಕಾಶ ಸಿಕ್ಕಿದ್ದರೆ ಧನ್ಯರಾಗಿ ಬಿಡುತ್ತಿದ್ದರು.

ನಾನು ಸಿಟ್ಟಿನಿಂದ ಹೇಳಿದೆ, ಇದೇನು ಹುಡುಗಾಟ, ಚಿಕ್ಕ ಹುಡುಗನ ತರಹ ಮಾತನಾಡ್ತಾ ಇದೀಯಲ್ಲ. ಭಾರೀ ಫಿಲ್ಮ್‌ಸ್ಟಾರ್ ಅಂತೆ. ಇಲ್ಲಿ ಅವಳನ್ನು ಗುರುತಿಸೋರ್‍ಯಾರು ? ಅದಲ್ಲದೆ ಹಿಂದೂ ಹುಡುಗಿ. ಈ ತರಹ ಯಾವನೋ, ಮುಸಲ್ಮಾನನ್ನು ಮದುವೆಯಾಗಿರೋದು ನನಗೊಂದಿಷ್ಟೂ ಇಷ್ಟವಾಗಲಿಲ್ಲ.

ನೀನು ಈ ನಡುವೆ, ಬರ್ತಾ ಬರ್ತಾ, ತೀರಾ ಕಮ್ಯೂನಲ್ ಆಗ್ತಾ ಇದೀಯ.

ಕಮ್ಯೂನಲ್ಲೂ ಇಲ್ಲ, ಏನೂ ಇಲ್ಲ. ನನಗಿಷ್ಟವಾಗೋದಿಲ್ಲ ಅಷ್ಟೆ. ಜಾತಿ, ಪಾತಿ ಅಂತ ಅಲ್ಲ. ಹೆಂಗಸಿನ ಶರೀರದಲ್ಲಿ ಆಸೆ ಬಿಟ್ಟು ಬೇರಿನ್ನೇನು ಇಲ್ಲವೇ ? ಆ ತರಹದ ಹೆಂಗಸನ್ನು ಕಣ್ಣಿಂದಲೂ ನೋಡೋಕಾಗೋದಿಲ್ಲ. ಸಿನೇಮಾದಲ್ಲಿ ಪಾತ್ರ ಸಿಗಲಿ ಅಂತ, ಗಂಡನನ್ನು ಬಿಟ್ಟು ಮುಸಲ್ಮಾನನನ್ನು ಮದುವೆ ಮಾಡಿಕೊಳ್ಳೋದೇ ?

ಅವಿನಾಶನೆಂದ, ಒಂದಲ್ಲ, ಮೂರು. ಅಬ್ದುಲ್ ಹಲೀಮ್ ಅವಳ ಮೂರನೇ ನಿಖಾ ಮಾಡಿಕೊಂಡಿರುವ ಗಂಡ.

ಶೇಖರನೆಂದ, ಯಾರಿಗೆ ಏನು ಇಷ್ಟ ಬರುತ್ತೋ ಅವರು ಅದೇ ತರಹಾನೇ ಮಾಡೋದು. ಮನುಷ್ಯರ ಸ್ವಾಭಿಮಾನದ ಬಗ್ಗೆ ನಿನಗೆ ನಂಬಿಕೆ ಇಲ್ಲ.

ಯಾಕೆ ನಂಬಿಕೆ ಇಲ್ಲ ? ಯಾರಿಗೆ ಏನು ಇಷ್ಟವೋ ಅದನ್ನು ಮಾಡಲು ಸಾಧ್ಯ. ಆದರೆ ನಮಗಿಷ್ಟವಾದದ್ದು, ಅವಳಿಗೆ ಲಕ್ಷ್ಯವೇ ಇಲ್ಲ. ಕೇವಲ ಆಸೆಯಿಂದ ನಿರ್ಮಿಸಲ್ಪಟ್ಟ ದೇಹ. ನೋಡಿದ್ರೆ ಹೇಸಿಗೆಯಾಗುತ್ತೆ. ದಯೆ, ಮಾಯೆ, ಸ್ನೇಹ ಇವುಗಳಿಗ್ಯಾವ ಅಸ್ತಿತ್ವವೂ ಇಲ್ಲ.

ಶೇಖರ ಮೆಲ್ಲನೆ ಹೇಳಿದ, ಲೋಭಿ ಹೆಂಗಸರನ್ನು ಕಂಡರೆ, ನನಗೂ ಆಗೋದಿಲ್ಲ. ಆದರೆ ಈ ಹೆಂಗಸಿನ ಹತ್ತಿರ ಮತ್ತೊಂದು ದುರ್ಬಲತೆ ಇದೆ. ಅಂಥಾ ಹೆಂಗಸರಲ್ಲಿ ಅದು ತೀರಾ ಅಪರೂಪ.....

ಇರಲಿ ಬಿಡೋ, ಹಾಳಾಗಿ ಹೋಗಲಿ. ಅವಳ ವಿಷಯ ಹಾಗಿರಲಿ ನೀನು ಇಲ್ಲಿಗೆ ಬರುವ ವಿಚಾರವನ್ನು ಯಾಕೆ ಮಾಡಿದಿ ? ಎಲ್.ಎಸ್.ಡಿ. ತಿನ್ನೋಕೆ ಅಂತ ಬಂದೋನು, ದಿನ ಕಳೆದರೂ ಇಲ್ಲೇ ಇದ್ದು ಬಿಟ್ಟಿದೀಯ ಯಾಕೆ ?

ಅವಿನಾಶ್ ಗ್ಲಾಸ್ ತುಂಬಾ ಬ್ರಾಂಡಿ ತುಂಬಿಸಿ ತಂದಿದ್ದ. ನೂರ್‌ಜಹಾನ್ ಬೇಗಂ,

ತಂದಿದ್ದ ಬೆಲೆ ಬಾಳುವ ಪ್ಯಾರೀಸ್ ಬ್ರ್ಯಾಂಡ್. ಅವಿನಾಶ ಒಮ್ಮೆ ಹೀರಿ ಹೇಳಿದ, ಸ್ವಲ್ಪ ರುಚಿ ನೋಡೋದಿಲ್ವೆ? ನಾನು ಅವನಿಂದ ಗ್ಲಾಸ್ ಇಸಿದುಕೊಂಡು, ಉಸಿರುಕಟ್ಟಿ ಎಲ್ಲವನ್ನು ಗಂಟಲಿಗೆ ಒಮ್ಮೆಗೇ ಸುರಿದುಕೊಂಡೆ. ನಾಲಿಗೆ ಮುಟ್ಟಿ, ಅದು ಗಂಟಲನ್ನು ಸುಡುತ್ತ ಕೆಳಗಿಳಿಯತೊಡಗಿತು. ಮೊದಲೇ ಗಂಟಲು ಒಣಗಿತ್ತು. ಉರಿ ತಾಗಿ ಇನ್ನೂ ಉರಿಯತೊಡಗಿತು. ಹ್ಞಾ! ಇನ್ನೂ ಉರಿ. ಈಗ ಎದೆಯಲ್ಲಿ ಉರಿ ಕಾಣಿಸಿಕೊಂಡಿತು. ಹಾವಿನ ತರಹ, ಇನ್ನು ಅಡ್ಡಾದಿಡ್ಡಿಯಾಗಿ, ಕೆಳಗಿಳಿಯುತ್ತ ಹೊಟ್ಟೆಯವರೆಗೆ. ಹೊಟ್ಟೆಯ ಹತ್ತಿರ ಉರಿಯುತ್ತಿದೆ. ಗಂಟಲು, ಎದೆ, ಹೊಟ್ಟೆ, ಇವುಗಳ ಬಗ್ಗೆ ಗಮನವೇ ಇರೋದಿಲ್ಲ. ಈ ರೀತಿ ಉರಿದಾಗಲೇ ಇವೆಲ್ಲಾ ಇದೆ ಅಂತ ಗೊತ್ತಾಗೋದು. ಇನ್ನೂ ಸ್ವಲ್ಪ ಉರಿಯಲಿ. ನಾನು ಅವಿನಾಶನಿಗೆಂದೆ, ಕೊಡು, ಇನ್ನು ಸ್ವಲ್ಪ ಇದ್ರೆ ಕೊಡು. ಶೇಖರನೆಂದ, ನಾನು ಕುಡಿಯೋದಿಲ್ಲಪ್ಪಾ, ನನ್ನ ತಲೆ ಇನ್ನು ಸುತ್ತುತ್ತಾನೇ ಇದೆ. ಅವಿನಾಶ ಬಲವಂತ ಮಾಡಿ ಹೇಳಿದ, ನೀನೂ ಸ್ವಲ್ಪ ತೊಗೊ. ಅಸೌಖ್ಯವಾದಾಗಲೂ ಜನ ಬ್ರ್ಯಾಂಡಿ ಕುಡೀತಾರೆ. ನಿನ್ನೆ ದಿನ ನೀನು ಎರಡೂ ಟ್ಯಾಬ್‌ಲೆಟ್ ಒಟ್ಟಾಗಿ ಯಾಕೆ ತೆಗೆದುಕೊಳ್ಳೋದಕ್ಕೆ ಹೋದೆ.

ತುಂಬಾ ಪ್ರಬಲವಾದ ಇಚ್ಛೆ ಆಯ್ತು, ನೋಡೋಣ ಏನಾಗುತ್ತೆ ಅಂತ. ನಾನು ಅಲೌಕಿಕವಾದದ್ದೇನಾದ್ರೂ ಕಾಣಬಹುದೆಂದುಕೊಂಡಿದ್ದೆ. ಓ, ನಿನ್ನೆ ರಾತ್ರಿ ಹಾರಿಬಲ್ ಆಗಿತ್ತು.

ಶೇಖರನೆಂದ, ವಿಷಯ ಬಹಳ ಅದ್ಭುತ. ನಾನು ಮೊದಲು ಅದನ್ನು ಕೊಂಡುಕೊಳ್ಳಲು ಸಿದ್ಧನಾಗಿರಲಿಲ್ಲ. ಮೊದಲು ನಿರಾಕರಿಸಿಬಿಟ್ಟಿದ್ದೆ. ಅನಂತರ ಥಟ್ಟನೆ, ಮನಸ್ಸು ಬದಲಾಯಿಸಿಬಿಟ್ಟೆ. ವಿಷಯ ಏನು ಗೊತ್ತಾ? ಕಳೆದ ವಾರ, ಅಂದು ಸೋಮವಾರ. ಮನೆಯಿಂದ ತಯಾರಾಗಿ ಆಫೀಸಿಗೆ ಹೊರಟಿದ್ದೆ. ಪಾಲೀಷ್ ಮಾಡಿದ ಬೂಟ್ಸ್, ಟೈ ಎಲ್ಲ ಸರಿಯಾಗಿ ಹಾಕಿಕೊಂಡು. ಎಲ್ಲ ಸರಿಯಾಗೇ ಇತ್ತು. ಮನಸ್ಸು ಸರಿಯಾಗಿಯೇ ಇತ್ತು. ಬಾಗಿಲಿನಿಂದ ಹೊರ ಹೊರಡಬೇಕು ಅನ್ನೋವಾಗ, ಮನೆಯ ಮುಂದಿನ ಜಗುಲಿಯ ಹತ್ತಿರ ಸ್ವಲ್ಪ ಎಡವಿದೆ, ಕಾಲು ಉಳುಕಿ ಬಿದ್ದುಬಿಟ್ಟೆ ಅಂತ ಕಾಣುತ್ತೆ. ಅಮ್ಮ ಎಂದಳು, ಅಶುಭ, ಈಗಲೇ ಹೊರಡಬೇಡ. ಪುನಃ ಮನೆ ಒಳಗೆ ಬಂದು ಕುಳಿತಿದ್ದು ಹೋಗು. ನಿನಗೆ ಗೊತ್ತೇ ಇದೆ ಅಮ್ಮನ ವಿಷಯ. ನಾನು ಅದನ್ನೆಲ್ಲ ಎದುರಾಡಿ, ಅಮ್ಮನ ಮನಸ್ಸಿಗೆ ನೋವುಂಟು ಮಾಡಲಾಗಲಿಲ್ಲ. ಮನೆಯೊಳಗೆ ತಿರುಗಿ ಬಂದು ಪುನಃ ಕುರ್ಚಿಯ ಮೇಲೆ ಕುಳಿತುಕೊಂಡೆ. ಮನಸ್ಸಿನಲ್ಲೇ ನಿಶ್ಚಯಿಸಿಕೊಂಡೆ, ಒಂದು ನೂರು ಎಣಿಸಿದ ಮೇಲೆ ಹೊರಡ್ತೀನಿ ಅಂತ. ಒಂದು ನೂರು ಎಣಿಸೋದ್ರಲ್ಲಿ ಮನಸ್ಸಿಗೆ ಅದೇನೋ ಒಂಥರಾ ಅಸಹ್ಯವಾಯ್ತು. ನಿನಗೆ ಹೇಗೆ ಹೇಳಲಿ. ಬಹಳ ಬೇಸರಗೊಂಡು ಒಂದೊಂದೇ ಸಂಖ್ಯೆಯನ್ನು ಎಣಿಸ್ತಾ ಇದ್ದೆ. ಆಗ ಯಾರೋ ಸುತ್ತಿಗೆ ತೊಗೊಂಡು ತಲೇನ ಕುಟ್ಟುತ್ತ ಇದ್ದಂತೆ ಭಾಸವಾಯಿತು. ಏನೇ ಆದರೂ, ಎಣಿಕೆ ಮುಗಿದ ಮೇಲೆಯೇ ಹೊರಟೆ. ಆಗಿನಿಂದ ಮನಸ್ಸು ಒಂದು ರೀತಿಯಾಗಿ ಬಿಟ್ಟಿದೆ. ಹೊರಟು ಒಂದು ಬಸ್ಸು, ಟ್ರಾಮ್ ನನ್ನಿಂದ ಹತ್ತಲಾಗಲಿಲ್ಲ. ಅಷ್ಟೊಂದು ಜನರ ಗುಂಪು ಗದ್ದಲ,

ಇತರ ದಿನಗಳಲ್ಲೂ ಇದೇ ರೀತಿಯಾಗುತ್ತದೆ. ಆದರೆ ಆ ದಿನ ಯಾಕೋ ಸಿಟ್ಟಿನಿಂದ ಮೈ ಎಲ್ಲ ಉರಿಯಹತ್ತಿತ್ತು. ನನಗನ್ನಿಸಿತು, ಟೈಯ ಗಂಟನ್ನು ಎರಡೂ ಕೈಯಿಂದ ಎಳೆದು ಉಸಿರು ಕಟ್ಟಿ ನನ್ನನ್ನೇ ಸಾಯಿಸಿಕೊಂಡು ಬಿಡಬೇಕು ಅಂತ. ನಿನಗರ್ಥವಾಗ್ತಾ ಇದೆಯೆ ? ನನಗೆ ಯಾವ ರೀತಿಯಾಗಿತ್ತು ಅಂತ ?

ಅವಿನಾಶನೆಂದ, ತೀರಾ ಸ್ವಾಭಾವಿಕ. ನಿನಗೆ ಬಿಡಪ್ಪ ಒಳಒಳಗೆ ಯಾವಾಗಲೂ ಸಿಟ್ಟು ಇದ್ದೇ ಇರುತ್ತೆ. ಯಾವಾಗ ಅದು ಹೊರಹೊಮ್ಮುತ್ತೇಂತ ಹೇಳಲಿಕ್ಕಾಗೋದಿಲ್ಲ. ಕೆಲವೊಮ್ಮೆ ಅನೇಕರಿಗೆ ತಮಗೆ ಯಾವುದರ ಮೇಲೆ ಸಿಟ್ಟು ಅನ್ನೋದನ್ನೇ ತಿಳಿದುಕೊಳ್ಳಲು ಸಾಧ್ಯವಾಗೋದಿಲ್ಲ.

ನಾನೆಂದೆ, ಅದೇನೋ ಸರಿ. ಒಮ್ಮೊಮ್ಮೆ ಗಾಜಿನ ಲೋಟದಲ್ಲಿ ನೀರು ಕುಡಿದಾದ ಮೇಲೆ ಅದನ್ನು ಚೂರು ಚೂರಾಗಿ ಒಡೆದು ಹಾಕಿಬಿಡಬೇಕು ಅಂತ ಅನ್ನಿಸುತ್ತೆ. ಅದರ ಕಾರಣ, ಇಲ್ಲವೇ ವಿಯಟ್ನಾಮಿನ ಯುದ್ಧದ ಬಗ್ಗೆ ವೃತ್ತ ಪತ್ರಿಕೆಯಲ್ಲಿ ಬೆಳಗಾಗೆದ್ದು ಸುದ್ದಿ ಓದಿದ್ದರೆ ಅಥವಾ ಒರಿಸ್ಸಾದಲ್ಲಿ ದುರ್ಭಿಕ್ಷೆಯಿಂದಾಗಿ ನಾಲ್ಕು ಜನ ತಿನ್ನಲಿಕ್ಕಿಲ್ಲದೆ ಸತ್ತು ಹೋದರೆಂಬ ಸುದ್ದಿ ಕೇಳಿದ್ದರೆ ಅಥವಾ ಸಂಜೆ ಏನಾದರೂ ಒಬ್ಬ ಹುಡುಗಿಯೊಡನೆ ಜಗಳವೇನಾದರೂ ಆಡಿದ್ದರೆ. ನೀನು ಬಾರೀನ್‌ದಾನನ್ನು ಹೊಡೆಯಲು ಹೋಗಿದ್ದೆಯಲ್ಲಾ, ಅದಕ್ಕೆ ಮೂಲ ಕಾರಣ ಕೋಪವಿದ್ದುದು ಬಾರೀನ್‌ದಾನ ಮೇಲಲ್ಲ. ನಿನ್ನ ಕೋಪವಿದ್ದುದು ಕಲಕತ್ತೆಯ ಕಾರ್ಪೊರೇಷನ್ ಮೇಲೆ.

ಅವಿನಾಶ್ ಕೊಕ್ ಎಂದು ನಕ್ಕು ಹೇಳಿದ, ವ್ಯವಹಾರ ಅಷ್ಟೊಂದು ಸರಳ ಅಂತ ಕಾಣಲಿಲ್ಲ. ಬೇರೆಯುವರ ಕಷ್ಟ ಸುಖ ಕೇಳಿ ನಾನು ನನ್ನ ತಲೆ ಕೆಡಿಸಿಕೊಳ್ಳೋದಿಲ್ಲ. ಯೋಚ್ನೆ ಮಾಡಿ ನೋಡು. ಬೇರೆಯುವರೊಂದಿಗೆ ಹೋಲಿಕೆ ಮಾಡಿಕೊಂಡರೆ, ನಾವು ಎಷ್ಟೋ ಮೇಲು. ನಮಗೆಲ್ಲರಿಗೂ ಕೆಲಸವಿದೆ, ಆರೋಗ್ಯವಿದೆ, ನಕ್ಕು ನಲಿದು ಜೀವನವನ್ನು ಕಳೀತಾ ಇದೀವಿ. ಆದರೂ ಒಳಒಳಗೇ ಯಾವುದೋ ಕಸಿವಿಸಿ ಅನ್ನೋದು ಅರ್ಥವಾಗ್ತಾ ಇಲ್ಲ.

ಶೇಖರನೆಂದ, ಆಮೇಲೇನಾಯ್ತು ಅನ್ನೋದನ್ನು ಕೇಳಿ. ಅಂತೂ ಇಂತೂ ಆಫೀಸಿಗೆ ಬಂದು ಮುಟ್ಟಿದೆ. ನಮ್ಮಲ್ಲಿಯ ಆಂಗ್ಲೋ ಇಂಡಿಯನ್, ಗೋಡೌನ್ ಇನ್ಸ್‌ಪೆಕ್ಟರ್ ಲ್ಯಾರಿಯ ಜೊತೆ ಒಬ್ಬ ವಿದೇಶಿ ಹುಡುಗ ಕುಳಿತಿರುವುದನ್ನು ಕಂಡೆ. ಲ್ಯಾರೀನ ನೋಡಿದ್ದು ಜ್ಞಾಪಕ ಇದೇ ತಾನೇ ? ಅವನೇ ನಮ್ಮನ್ನು ಹೌರಾದ ಒಂದು ಹೌಸೀ ಆಟದ ಅಖಾಡಕ್ಕೆ ಕರೆದುಕೊಂಡು ಹೋಗಿದ್ದವನು.

ಅವಿನಾಶನೆಂದ, ಅಲ್ಲಂತೂ ಬರೀ ಮೋಸ. ನಮ್ಮಲ್ಲಿ ಅನೇಕರ ಹಣವನ್ನು ದೋಚುವ ಪ್ರಯತ್ನ ಮಾಡಿದ್ದ. ಅವನು ನಿಮ್ಮ ಆಫೀಸಿನವನು ಅಂತಲೇ ಅವನ ಹಲ್ಲುಗಳು ಉಳಿದಿರೋದು.

ಲ್ಯಾರಿ ನನ್ನನ್ನು ವಿದೇಶೀ ಹುಡುಗನೊಬ್ಬನಿಗೆ ಪರಿಚಯ ಮಾಡಿಕೊಟ್ಟ. ಆ ಹುಡುಗನೇ ಸ್ಯಾಂಡಿ ಗ್ರೋವರ್. ಮೂಲತಃ ಕೆನೆಡಿಯನ್, ಇರೋದು ಅಮೇರಿಕೆಯಲ್ಲಿ. ಜೊತೆಗೆ ಆರ್ಟಿಸ್ಟ್ ಬೇರೆ. ಇಡೀ ಪ್ರಪಂಚವನ್ನು ಸುತ್ತಿ ಬರಲೆಂದು

ಹೊರಟಿದ್ದಾನೆ. ಈ ಬೀಟಲ್ ಗುಂಪಿನವರು, ದುಂಬಿಯಂತೆ ಸುತ್ತಾಡುತ್ತಲೇ ಇರುತ್ತಾರೆ. ಅವರಿಗಿನ್ನೇನು ಬೇರೆ ಕೆಲಸ? ಲ್ಯಾರಿ ನನಗೆ ಪಿಸುಗುಟ್ಟಿದ, ಆರ್ ಯೂ, ಇನ್‌ಟ್ರೆಸ್ಟೆಡ್ ಇನ್ ಎಲ್.ಎಸ್.ಡಿ? ಯೂ ಕ್ಯಾನ್ ಹ್ಯಾವ್ ಇಟ್ ಫ್ರಂವ್ ಹಿವ್. ಸ್ಯಾಂಡಿ ಎಂಬ ಹೆಸರಿನ ಆ ಯುವಕನೆಂದ, ತಾನು ಹೇಗೆ ಎಲ್.ಎಸ್.ಡಿ.ಯನ್ನು ಸ್ಮಗಲ್ ಮಾಡಿ ತಂದಿದೀನಿ ಅಂತ. ಅವನು ತನಗಾಗಿಯೇ ತಂದದ್ದೋ ಅಡಿಕ್ಟ್ ಆಗಿದ್ದನೋ ಏನೋ. ಏನೇ ಇರಲಿ ಅವನ ಬಳಿ ಹಾಂಕಾಂಗ್‌ಗೆ ಹೋಗಲು ಪ್ಲೇನಿಗೆ ದುಡ್ಡು ಇರಲಿಲ್ಲ. ಅವನು ಆರು ಟ್ಯಾಬ್‌ಲೆಟ್‌ಗಳನ್ನು ಮುನ್ನೂರು ರೂಪಾಯಿಗೆ ನನಗೆ ಮಾರ್ತೀನಿ ಅಂತ ಹೇಳಿದ. ನಾನೆಂದೆ, ಸಾರಿ, ನನಗೆ ಅದರ ಅವಶ್ಯಕತೆ ಇಲ್ಲ. ಇಷ್ಟು ಹೇಳಿ ಅವನಿಂದ ತಪ್ಪಿಸಿಕೊಂಡೆ. ಆಗ ನನಗನ್ನಿಸಿದ್ದು, ಅವನು ನನಗೆ ಕಳ್ಳ ಮಾಲನ್ನು ಮಾರಲು ಪ್ರಯತ್ನಿಸ್ತಾ ಇದಾನೆ ಅಂತ. ವಸ್ತು ಏನೇ ಆಗಿರಲಿ, ನಾನಾಗ ಸಂಪೂರ್ಣವಾಗಿ, ಅದನ್ನು ಪಡೆಯಬೇಕೆಂದು ಅಂದುಕೊಂಡಿರಲಿಲ್ಲ.

ಶೇಖರ ನನ್ನ ಕಡೆ ಕಣ್ಣೆತ್ತಿ ನೋಡಿ ಹೇಳಿದ, ಅದನ್ನು ತೆಗೆದುಕೊಳ್ಳದೆ ಬೇರೆ ದಾರೀನೇ ಇರಲಿಲ್ಲ. ಯಾರು ನನಗದನ್ನು ತೆಗೆದುಕೊಳ್ಳಲು ಬಲವಂತ ಮಾಡಿದರೋ ಗೊತ್ತಿಲ್ಲ. ಒಂದು ವಿಷಯ ನಾನು ಚೆನ್ನಾಗಿ ಗಮನಿಸಿದ್ದೇನೆ. ಈ ನಡುವೆ ನನ್ನ ಇಚ್ಛಾಶಕ್ತಿ ಪೂರ್ಣವಾಗಿ ಕ್ಷೀಣಿಸಿದೆ. ಕ್ಷಣ ಕ್ಷಣಕ್ಕೂ ನನ್ನ ಇಚ್ಛೆಗಳು ಬದಲಾಗಿ ಬಿಡುತ್ತವೆ.

ಅವಿನಾಶನೆಂದ, ಅದಲ್ಲ ಒಳಒಳಗೇ, ಯಾವಾಗಲೂ, ಎಲ್ಲರಲ್ಲೂ ತೀವ್ರವಾಗಿ, ಯಾವುದಾದರೊಂದು ಆಸೆ ಇದ್ದೇ ಇರುತ್ತೆ. ಹೊರಗಿನ ಯಾವುದಾದರೊಂದು ಉಪಾಯದಿಂದ ತಪ್ಪಿಸಿಕೊಳ್ಳೊ ಪ್ರಯತ್ನ ಮಾಡ್ತೀವಿ. ಆದರೆ ಅದೆಲ್ಲ ಥಟ್ಟನೆ ಭಂಗವಾಗಿ ಬಿಡುತ್ತೆ.

ಲಂಚ್‌ವರೆಗೂ ನಾನು ಸರಿಯಾಗಿಯೇ ಇದ್ದೆ. ಬೆಳಗ್ಗೆ ಹತ್ತರ ವೇಳೆಗೆ ಕೋಪ ಇಳಿದಿತ್ತು. ಮನಸ್ಸಿಟ್ಟು ಕೆಲಸ ಮಾಡಿ, ಎಲ್ಲವನ್ನೂ ಮರೆಯೋಣವೆಂದುಕೊಂಡಿದ್ದೆ. ಅಷ್ಟರಲ್ಲೇ ಎರಡು ಘಟನೆ ಘಟಿಸಿದವು. ನಮ್ಮ ಆಫೀಸಿನಲ್ಲಿ ಒಬ್ಬ ರೆಕಾರ್ಡ್ ಸಪ್ಲೈಯರ್ ಇದ್ದಾನೆ, ವಿಷ್ಣುಪಾದ. ಸಣಕಲು, ಒಣಗಿದ ಮುಖದವನು. ನಾನು ಲಂಚ್‌ಗೆಂದು ಹೊರಟಿದ್ದೆ, ಅಷ್ಟರಲ್ಲೀ ವಿಷ್ಣುಪಾದ ಬಂದು ನನ್ನ ಮುಂದೆ ಕೈ ಹೊಸೆಯತೊಡಗಿದ – ಸಾರ್ ನಿಮ್ಮ ಹತ್ರ ಒಂದು ವಿಷಯ. ನಾನೆಂದೆ, ಏನು ವಿಷಯ ಬೇಗ ಹೇಳಿ, ನಾನು ಹೊರಡಬೇಕು. ಅವನೆಂದ, ಸಾರ್ ನನಗೆ ಇಪ್ಪತ್ತು ರೂಪಾಯಿ ಕೊಡಿ. ನಿಮ್ಮನ್ನು ಕೇಳದೆ ಬೇರೆ ಉಪಾಯವೇ ಇಲ್ಲ, ಅದಕ್ಕೇ ಬಂದೆ. ಮೂರು ದಿನದಿಂದ ಮನೇನಲ್ಲಿ ಅಡಿಗೆ ಇಲ್ಲ, ಐದು ಜನ ಮಕ್ಕಳು, ನಿನ್ನೆಯಿಂದ ಏನನ್ನೂ ಹೊಂದಿಸಲಾಗಿಲ್ಲ. ನಾನು ಸಿಟ್ಟಾಗಿ ಹೇಳಿದೆ, ಈ ತರಹ ಸಾಲ ಕೊಡೋದನ್ನು, ನಾನು ಇಷ್ಟಪಡೋದಿಲ್ಲ. ವಿಷ್ಣುಪಾದನೆಂದ, ಸಾಲ ಅಲ್ಲಾ ಸಾರ್, ನೀವು ನನಗೆ ದಾನ ಅಂತ ಕೊಡಿ. ಆಫೀಸಿನಲ್ಲಿ, ನನಗೆ ಎಲ್ಲೂ ಒಂದಿಷ್ಟೂ ಸಿಗಲಿಲ್ಲ. ಮನೇನಲ್ಲಿ ಮಾರೋಣ ಅಂದ್ರೂ ಒಂದು ಸಾಮಾನೂ ಇಲ್ಲ. ತುಂಬಾ ಜನರ

ಹತ್ತಿರ ಸಾಲ ಮಾಡಿಬಿಟ್ಟಿದ್ದೀನಿ. ಬಡ್ಡಿ ಕಟ್ಟಿಲ್ಲ. ಸಾಲ ಬೇಕೂಂದ್ರೂ ಯಾರೂ ನನಗೆ ಕೊಡೋದಿಲ್ಲ. ಇಡೀ ಆಫೀಸಿನಲ್ಲಿ ನೀವೊಬ್ಬರೇ ಒಳ್ಳೆಯವರು. ನಿಮ್ಮ ಹತ್ತಿರವೇ ಮೊದಲು, ದಾನ ಕೇಳಲೆಂದು ಬಂದೆ. ಈಗ ಇಪ್ಪತ್ತು ರೂಪಾಯಿ ಇಲ್ಲದಿದ್ದರೆ, ಈ ತಿಂಗಳು ಯಾವುದರಿಂದಲೂ ನಡೆಸೋದಕ್ಕಾಗೋದಿಲ್ಲ.... ಯೋಚಿಸಿ ನೋಡು, ಇಡೀ ಆಫೀಸಿನಲ್ಲಿ ನನ್ನೊಬ್ಬನನ್ನೇ ದಾತಾ ಅನ್ನೋ ದೃಷ್ಟಿಯಲ್ಲಿ ನೋಡಿದ್ದಾನೆ. ಕೇಳಿದ್ರೆ ಸಿಟ್ಟು ಬರುತ್ತೋ ಇಲ್ವೋ ಹೇಳು. ಅವನ ಯೋಚನೆಯಲ್ಲಿ ಒಂದು ರೀತಿಯ ನಿರ್ಲಜ್ಜ ಭಾವನೆ ಇತ್ತು. ಅದನ್ನು ಕೇಳಿ ಮೈ ಜುಂ ಎಂದಿತ್ತು. ಮೂರು ದಿನದಿಂದ ತಿಂದೇ ಇಲ್ಲ, ಮೂರ್ನಾಲ್ಕು ದಿನದಿಂದ, ಗಡ್ಡ ಬೋಳಿಸಿಕೊಂಡಿಲ್ಲ. ಮುಖ ತೀರಾ ಒಣಗಿ ಹೋಗಿದೆ ಹಾಗೂ ಅಸಹ್ಯವಾಗಿದೆ. ಈ ತರಹದ ಜನರೇ ಆತ್ಮಹತ್ಯೆ ಮಾಡಿಕೊಳ್ಳೋದು. ಅದಲ್ಲದೆ ನಾನು ಲಂಚ್‌ಗೆಂದು ಬೇರೆ ಹೊರಟಿದ್ದೆ. ಆ ಸಮಯದಲ್ಲಿ ಒಬ್ಬ ಹಸಿದ ಮನುಷ್ಯ ಬಂದು ನನ್ನ ಹತ್ತಿರ ಹಣ ಕೇಳ್ತಾ ಇದಾನೆ. ಎಷ್ಟೊಂದು ಅಸಹ್ಯ ಪರಿಸ್ಥಿತಿ. ನನ್ನ ಬ್ಯಾಗ್‌ನಲ್ಲಿ ಒಟ್ಟು ಇಪ್ಪತ್ತು ರೂಪಾಯಿ ಇದ್ದದ್ದು. ನಾನು ಅವನಿಗೆ ಎಲ್ಲ ಹಣ ಕೊಟ್ಟುಬಿಟ್ಟರೆ, ನನಗೆ ತಿನ್ನೋದಕ್ಕೆ ಏನೂ ಹಣವಿರೋದಿಲ್ಲ. ಅದನ್ನು ಅವನಿಗೆ ಹೇಗೆ ಹೇಳೋದು. ಅವನಂತೂ ಬಡ್ಕೋತಾ ಇದಾನೆ. ಅವನಿಂದ ನನ್ನ ಪ್ರಶಂಸೆಯನ್ನು, ತುಂಬಾ ಹೊತ್ತು ಕೇಳಲಾಗದೆ, ಬೇಗ ಅವನನ್ನು ಕಳಿಸಿ ಬಿಡಬೇಕೆಂದುಕೊಂಡೆ. ತುಂಬಾ ಅಸಹ್ಯವಾದ ವಸ್ತುವನ್ನು ಮುಟ್ಟಿದಾಗ ಯಾವ ರೀತಿ ಎನಿಸುತ್ತೋ ಅದೇ ತರಹ, ನಾನು ಎರಡು ಬೆರಳುಗಳಿಂದ ನೋಟನ್ನು ಹೊರತೆಗೆದು, ಅವನಿಗೆ ಕೊಟ್ಟು, ಖಡಾಖಂಡಿತವಾಗಿ ಹೇಳಿಬಿಟ್ಟೆ, ಕೆಂಪು ಫ್ಲ್ಯಾಗ್ ಹಚ್ಚಿರೋ ಫೈಲ್‌ಗಳನ್ನೆಲ್ಲ ದೊಡ್ಡ ಸಾಹೇಬರ ಕೋಣೆಗೆ ಕೊಟ್ಟು ಬನ್ನಿ. ಯಾರಿಗಾದರೂ, ಸ್ವಲ್ಪ ಏನನ್ನಾದರೂ ದಾನ ಮಾಡಿದರೆ, ಮನಸ್ಸಿನಲ್ಲಿ ಒಂದು ರೀತಿಯ ಅಹಂಕಾರದ ಭಾವನೆ ಇರುತ್ತೆ. ಆದರೆ ನನಗೆ ಸಿಟ್ಟು ಬರಹತ್ತಿತು.

ಮತ್ತೆ ಅದಕ್ಕಾಗಿಯೇ ನೀನು ಮುನ್ನೂರು ರೂಪಾಯಿ ಖರ್ಚು ಮಾಡಿ ಬಿಟ್ಟೆಯಾ ? ಅವಿನಾಶನೆಂದ.

ನಾನೆಂದೆ, ಶೇಖರ, ನೀನು ಅಂದಿದ್ದೆ, ಇನ್ನೊಂದು ಘಟನೆ ಇದೆ ಅಂತ. ಅದೇನದು ?

ಅದನ್ನು ಪೂರ್ತಿ ಘಟನೆ ಅಂತ ಹೇಳೋದಿಕ್ಕಾಗೋದಿಲ್ಲ. ವಿಷ್ಣುಪಾದನಿಗೆ ಹಣ ಕೊಟ್ಟು ಮುಟ್ಟಬಾರದ್ದನ್ನು ಮುಟ್ಟಿದಂತೆ ಕೈ ಜುಂ ಎನ್ನುತ್ತಿತ್ತು ಅಂತ ಕೈ ತೊಳೆಯಹೋದೆ. ಆಗ ನಿಜವಾಗಿಯೂ ನಾನು ಒಂದು ವಸ್ತುವನ್ನು ಮುಟ್ಟಿಬಿಟ್ಟೆ. ಬಾತ್‌ರೂಮಿನಲ್ಲಿ ಬಾಗಿಲ ಚಿಲಕದ ಹತ್ತಿರ, ಒಂದು ಹಲ್ಲಿ ಇತ್ತು ಅಂತ ಕಾಣುತ್ತೆ. ನಾನದನ್ನು ಗಮನಿಸಿರಲಿಲ್ಲ. ಹಲ್ಲಿಯ ಮೈಗೆ ಕೈ ತಗಲುತ್ತಲೇ ಅಸಹ್ಯವೆನಿಸತೊಡಗಿತು. ಅದರ ತಣ್ಣನೆಯ ಮೈ ತಾಗಿ ನನ್ನ ಮೈ ನಡುಗಿತು. ಹಲ್ಲಿ ಒದ್ದಾಡುತ್ತ ಕೆಳಗೆ ಬಿದ್ದಿತು. ನಾನು ಸಿಟ್ಟಿನಿಂದ, ಹಲ್ಲು ಕಡಿಯುತ್ತ, ಡ್ಯಾಮ್ ಇಟ್ ಎಂದೆನ್ನುತ್ತ ಅದನ್ನು ಬೂಟುಗಾಲಿನಿಂದ ಸಾಯಿಸಲು ಪ್ರಯತ್ನಿಸಿದೆ. ಸಾಯಿಸೋದು ಸುಲಭವಲ್ಲ. ಅದು ಥಟ್ಟನೆ, ಗೋಡೆ ಹತ್ತಿ, ಸ್ವಲ್ಪ ಮೇಲೆ ಏರಿ, ಒಮ್ಮೆಗೇ

ತಪ್ಪಿಸಿಕೊಂಡು ಹೋಗಲಿಲ್ಲ. ಆ ಹಾಳಾದ ಹಲ್ಲಿ, ನನ್ನನ್ನೇ ಮಿಕ ಮಿಕ ನೋಡುತ್ತಲಿತ್ತು.ಬಾತ್‌ರೂಮಿನಲ್ಲಿ ಏನೊಂದು ವಸ್ತುವೂ ಇರಲಿಲ್ಲ, ಅದನ್ನೆತ್ತಿ ಬಿಸಾಡಿ ಅದನ್ನು ಸಾಯಿಸೋಣವೆಂದರೆ. ತೀವ್ರವಾದ ಸಿಟ್ಟು, ಅಸಹಾಯಕ ಭಾವ ಹಾಗೂ ಅಸಹ್ಯ ನನ್ನಲ್ಲಿ ಜಾಗೃತವಾಗಿತ್ತು. ಆಗ ಏನೂಂತ ಹೇಳಲಿ, ನಾನು ಬೇಸನ್‌ನಿಂದ ನೀರು ತೆಗೆದುಕೊಂಡು ಅದರ ಮೇಲೆ ಎರಚತೊಡಗಿದೆ. ಅದು ಒಂದಿಷ್ಟೂ ಅಲ್ಲಾಡಲಿಲ್ಲ. ಹಾಳಾದ್ದು ಅದನ್ನು ಸಾಯಿಸಿದ್ದರೆ ನನಗೆ ಸ್ವಲ್ಪ ಸಿಟ್ಟು ಕಡಿಮೆಯಾಗೋದು. ಆದರೆ ಅದನ್ನು ಸಾಯಿಸಲು ಯಾವ ದಾರಿಯೂ ಇರಲಿಲ್ಲ. ನನಗಿನ್ನೇನು ಅಳು ಬರೋದೊಂದೇ ಬಾಕಿ. ಬಾತ್‌ರೂಮ್‌ನಿಂದ ಹೊರಟು ಬಂದೊಡನೆ ಪುನಃ ವಿಷ್ಣುಪಾದ ನಿಂತಿದ್ದ. ನಾನು ಅವನ ಕಡೆ ಕೆಂಗಣ್ಣು ಮಾಡಿಕೊಂಡು ಹೇಳಿದೆ, ಡ್ಯಾಮ್ ಇಟ್. ಅನಂತರ ನೇರವಾಗಿ ಕ್ಯಾಷ್‌ಗೆ ಬಂದು ಕೋ ಆಪರೇಟಿವ್‌ನಿಂದ ಐನೂರು ರೂಪಾಯಿ ತೆಗೆದು, ಲ್ಯಾರಿಗೆ ಕೊಟ್ಟು ಹೇಳಿದೆ, ನಿನ್ನ ಸ್ನೇಹಿತನೆಲ್ಲಿ? ನಾನದನ್ನು ಕೊಂಡುಕೊಳ್ಳುತ್ತೇನೆ. ನೀವುಗಳಾಗಿದ್ರೆ ಹೇಳ್ತಿದ್ರಿ, ನನ್ನ ಆ ವ್ಯವಹಾರದಲ್ಲಿ ಏನೊಂದು ಉಪಾಯವೂ ಇರಲಿಲ್ಲ ಅಂತ. ನಿಜವಾಗಿಯೂ ಇಲ್ಲದಿದ್ದರೂ, ನಾನು ಅದನ್ನು ತೋರಿಸಲಾಗೋದಿಲ್ಲ. ಆದರೆ ಆಗ ಕೇವಲ ನನ್ನ ಮನಸ್ಸಿನಲ್ಲಿದ್ದದ್ದು – ನನಗೆ ರಜೆ ಬೇಕು, ನನಗೆ ರಜೆ ಬೇಕು. ನಿಮಗೆ ನನ್ನ ಆಗಿನ ಪರಿಸ್ಥಿತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾಗಲ್ಲ......

ಅವಿನಾಶನೆಂದ, ಸರಿಯಾಗಿ ಅರ್ಥವಾಗ್ತಾ ಇದೆ, ಆಮೇಲೇನಾಯ್ತು ಹೇಳು.

ಲ್ಯಾರಿಯ ವಠಾರದಲ್ಲಿನ ಇಲಿಯಟ್ ರೋಡಿನಲ್ಲಿ, ಒಂದು ಹೋಟೇಲಿನಲ್ಲಿ ಸ್ಯಾಂಡಿ ಗ್ರೋವರ್ ಇಳಿದುಕೊಂಡಿದ್ದ. ನಾನವನ ವಿಳಾಸ ತೆಗೆದುಕೊಂಡು, ಅವನನ್ನು ಹುಡುಕಿದೆ. ನನಗದನ್ನು ಕೊಡುವಾಗ ಅವನು ಎಚ್ಚರಿಕೆಯ ಮಾತುಗಳನ್ನು ಹೇಳಿದ್ದ, ಎಲ್ಲೀಂದ್ರೆ ಅಲ್ಲಿ ಕುಳಿತು ಇದನ್ನು ಸೇವಿಸಬಾರದು. ಒಂದು ಶಾಂತವಾದ ಸ್ಥಳದಲ್ಲಿ, ಎಲ್ಲಿ ಹಾಸಿಗೆಯ ಮೇಲೆ ಮಲಗಿಕೊಳ್ಳಲು ಸಾಧ್ಯವೋ ಹಾಗೂ ಯಾರಾದರೊಬ್ಬರು ನೋಡಿಕೊಳ್ಳಲು ಇರುವರೋ ಅಲ್ಲಿ ತೆಗೆದುಕೊಳ್ಳುವುದು ಉತ್ತಮ. ಯಾಕೆಂದ್ರೆ ಬಾಯಾರಿಕೆಯಾದಾಗ ನೀರು ಕುಡಿಸಿ, ನಿದ್ದೆ ಹೋಗದಂತೆ ಮಾತನಾಡಿಸಲು ಒಬ್ಬರು ಕಾವಲಿರಬೇಕು. ಈ ಗುಳಿಗೆ ನುಂಗಿದ್ರೆ ಪ್ರಜ್ಞೆ ಏನೂ ತಪ್ಪೋದಿಲ್ಲ. ಬಹುಪಾಲು ಪೈಥಿಡ್ರಿನ್ ತೊಗೊಂಡಂತಿರುತ್ತೆ. ಒಂಟಿಯಾಗಿ, ಒಬ್ಬರೇ ಇದ್ದಾಗ ತೊಗೊಂಡ್ರೆ ಮೃತ್ಯುವಿನ ಭಯವೂ ಇರುತ್ತೆ. ಇದನ್ನೆಲ್ಲ ಕೇಳಿ ನಾನು ಯೋಚಿಸಿದೆ. ವೀಣಾಳ ಮನೆಗೆ ಬಂದಿರುವುದೇ ಕ್ಷೇಮ ಅಂತ. ಅಲ್ಲಿ ಯಾರಿಗೂ ವಿಷಯ ಗೊತ್ತಾಗೋದಿಲ್ಲ. ಇಂಥ ಬೆಲೆ ಬಾಳುವ ವಸ್ತುವನ್ನು ಮೊದಲು ನಾನೊಬ್ಬನೇ ಸೇವಿಸಬೇಕೆಂದುಕೊಂಡಿದ್ದೆ. ಆದರೆ ಅದನ್ನು ತೆಗೆದುಕೊಂಡಾದ ಮೇಲೆಯೇ ಗೊತ್ತಾದದ್ದು, ಇದು ಕೇವಲ ಸುಖವೊಂದೇ ನೀಡೋದಿಲ್ಲ ಜೊತೆಗೆ ತುಂಬಾ ದುಃಖವೂ ಆಗುತ್ತೇಂತ. ಮರೆತು ಹೋದದ್ದನ್ನು ಪುನಃ ಜ್ಞಾಪಿಸಿಕೊಳ್ಳುವುದರಲ್ಲೂ ಒಂದು ರೀತಿಯ ಯಾತನೆ ಇದೆ. ಅದನ್ನು ಅನುಭವಿಸಿದ ಮೇಲೆಯೇ ನನಗದು ಅರ್ಥವಾದದ್ದು. ಅದಕ್ಕೆ ಅದನ್ನು ನಿನ್ನೊಡನೆ

ಹಂಚಿಕೊಳ್ಳಬಯಸಿ ನಿನ್ನೆಯವರೆಗೂ ನಿನಗಾಗಿ ಕಾದಿದ್ದೆ.

ನಿನ್ನೆ ರಾತ್ರಿ ನಿನಗೇನಾಯ್ತು ಹೇಳು ?

ಮೊದಲ ದಿನ ಸಂಜೆ ಇಲ್ಲಿಗೆ ಬಂದಾಗ, ವೀಣಾಳ ಮನೆ ತುಂಬಾ ಜನರಿದ್ದರು. ಅವರೆಲ್ಲರಿಂದ ತಪ್ಪಿಸಿಕೊಳ್ಳೋದ್ರಲ್ಲಿ ಒಂಬತ್ತು ಹೊಡೆದುಹೋಯ್ತು. ಒಂದು ಟ್ಯಾಬ್‌ಲೆಟ್ ತೆಗೆದುಕೊಂಡು ಹಾಗೇ ಮಲಗಿದೆ. ವೀಣಾಳ ದಯೆಯಿಂದ ನಶೆ ಏರಲಿಲ್ಲ. ಬಹುಶಃ ರಾತ್ರಿ ಒಂದೂವರೆಯ ಸಮಯ, ದೇಹದಲ್ಲಿ ವಿಪರೀತ ಆಲಸಿಕೆ, ಮನೆಗೆ ಹಿಂತಿರುಗಲು ಸಾಧ್ಯವೇ ಇರಲಿಲ್ಲ. ಮಾರನೆಯ ದಿನವೇ ನೂರ್‌ಜಹಾನ್ ಅವರೆಲ್ಲ ಬಂದಿಳಿದರು. ಆಗ ಪುನಃ ಒಂದು ಹೊಸ ರೀತಿಯ ಸ್ಫೂರ್ತಿ ಬಂದಂತಾಗಿ, ನನ್ನ ವ್ಯವಹಾರ ಪ್ರಾರಂಭವಾಯಿತು. ಇನ್ನು ಮನೆಗೆ ಹೋಗಿ ಏನು ಮಾಡೋದು, ಇಲ್ಲೇ ಚೆನ್ನಾಗಿದೆ ಅಂತ ಮನಸ್ಸಿಗನ್ನಿಸಿತು. ಆಫೀಸು ಹಾಗೂ ಮನೆಯಿಂದ ಬಿಡುವು ಮಾಡಿಕೊಂಡು ಎಲ್ಲೋ ಒಂದು ಛೇಂಜ್‌ಗಾಗಿ ಬಂದಂತೆನಿಸಿತು. ಹುಡುಗಿಯರ ಮನೆಗಳಿಗೆ ರಾತ್ರಿಯ ಹೊತ್ತು ಹೋಗೋದು ಒಂದು ವಿಷಯ. ಮತ್ತು ಬೆಳಗ್ಗಿನಿಂದ ಸಂಜೆವರೆಗೂ ಅಲ್ಲೇ ಇರೋದು ಇನ್ನೊಂದು ರೀತಿ. ಎಲ್ಲವೂ ಸ್ವಾಭಾವಿಕ. ದಯೆ, ಮಾಯೆ, ಮಾನ ಅಭಿಮಾನ ಎಲ್ಲೆಲ್ಲೂ ಇದೆ. ಯಾವೊಂದು ಬಂಧನವೂ ಇಲ್ಲ. ತುಂಬಾ ಅದ್ಭುತ ಅಲ್ವಾ ? ಈ ಮೊದಲು ನಾನು ಈ ತರದ ರುಚಿ ಕಂಡಿರಲಿಲ್ಲ. ಏನೇ ಆಗಲಿ ಮಾರನೆಯ ದಿನ ರಾತ್ರಿ ನಾನು ನೂರ್‌ಜಹಾನ್ ಇಬ್ಬರೂ, ಎರಡು ಟ್ಯಾಬ್‌ಲೆಟ್ ತೆಗೆದುಕೊಂಡೆವು. ವೀಣಾ ಬೇಡ ಅಂದುಬಿಟ್ಟಳು. ಎಲ್.ಎಸ್.ಡಿ. ತೊಗೊಂಡು ನೂರ್‌ಜಹಾನ್ ಎಷ್ಟೊಂದು ಅತ್ತಳು ಗೊತ್ತಾ. ನೀನಂದೆ, ಅವಳ ದೇಹದ ತುಂಬಾ ಬರೀ ಆಸೆ ಅಂತ. ಒಂದು ವೇಳೆ ನೀನೇನಾದರೂ ಅವಳು ಅಳೋದನ್ನು ಕಂಡಿದ್ದರೆ ? ಯಾರಿಗ್ಗೊತ್ತು ಅವಳು ಹಿಂದಿನದನ್ನು ಏನೇನು ಜ್ಞಾಪಿಸಿಕೊಂಡಳೋ ಏನೋ ? ಅವಳು ಒಂದೂ ಮಾತನಾಡಲಿಲ್ಲ. ಆದರೆ ಮಾರನೆಯ ದಿನ, ಇಡೀ ದಿನ ಅಳ್ತಾ ಇದ್ದಳು. ಇದಾದ ಮೇಲೆಯೇ ನಾನು ನಿನ್ನನ್ನು ಹುಡುಕಲಾರಂಭಿಸಿದ್ದು. ನೀನು ಸಿಗಲಿಲ್ಲ. ನಿಮ್ಮನೇಲಿ ಯಾರೋ ಸತ್ತರು ಅಂತ ಕೇಳಿದೆ, ಯಾರು ಸತ್ತರು ?

ದಾದಾಮೊಶಾಯ್

ನಿನ್ನ ಅದೇ ಬಹರಾಂಪುರದ ದಾದಾಮೊಶಾಯ್ ? ಪಾಪ ತುಂಬಾ ಒಳ್ಳೆಯವರಾಗಿದ್ದರು.

ಕೆಳಗಿನಿಂದ ಒಂದು ರೀತಿಯ ಅಸ್ಪಷ್ಟ ಸದ್ದು ಕೇಳಿಬಂತು. ಯಾರೋ ಏನೋ ಶೇಖರನ ಹೆಸರು ಹಿಡಿದು ಕರೆದಂತೆ. ಶೇಖರನೆಂದ, ಸ್ವಲ್ಪ ಇರು ನೋಡ್ಕೊಂಡು ಬಂದುಬಿಡ್ತೀನಿ.

ಒಳ್ಳೆ ತಣ್ಣಗಿನ ಗಾಳಿ ಬೀಸ್ತಾ ಇದೆ. ದೂರದಲ್ಲಿನ ಹೌರಾ ಬ್ರಿಡ್ಜ್ ಮೇಲಿನ ಕೆಂಪು ದೀಪ ಇಲ್ಲಿಯವರೆಗೂ ಕಾಣಿಸುತ್ತಿದೆ. ಅವಿನಾಶ ಬಹುಶಃ ಬ್ರ್ಯಾಂಡಿ ಬಾಟಲಿಯನ್ನು ಪೂರ್ತಿ ಮುಗಿಸಿದ್ದ ಅಂತ ಕಾಣುತ್ತೆ. ಅವನೆಂದ, ಸ್ವಲ್ಪಾನೇ ಉಳಿದಿರೋದು. ನೀನು ಕುಡೀತೀಯ ? ನಾನು ಉಳಿದದ್ದನ್ನು ಹೀರುವ ಮೊದಲು, ಅವಿನಾಶನೆಂದ, ನೀನು

ಆ ಪುಟ್ಟ ಹುಡುಗಿಯನ್ನು ಕಟ್ಟಿಕೊಂಡು ಏನು ಮಾಡ್ತೀಯೋ ?

ನಾನು ಆಶ್ಚರ್ಯಗೊಂಡು ಕೇಳಿದೆ, ಯಾವ ಪುಟ್ಟ ಹುಡುಗಿ ?

ನಮಗೇನು ಸುಳಿವು ಸಿಕ್ಕಿಲ್ಲ ಅಂತ ಅಂದುಕೊಳ್ಳಬೇಡಯ್ಯ. ನಿನಗೆ ಎಚ್ಚರಿಕೆ ಕೊಡ್ತಾ ಇದೀನಿ. ಪುಟ್ಟ ಹುಡುಗಿಯರು ಬಹಳ ಅಪಾಯಕಾರಿ. ನಾನು ಶಾಂತಳನ್ನು ಮುಟ್ಟಲು ಹೋಗಿದ್ದೆ. ನೋಡು ಇನ್ನೂ ನನ್ನ ಕೈ ಉರೀತಿದೆ.

ನೀನು ಯಾರ ಸುದ್ದಿ ಹೇಳ್ತಾ ಇದೀಯ ?

ಮುಗ್ಧತೆ ತೋರಿಸಬೇಡ. ನಿನ್ನನ್ನು ನಿನ್ನೆ ನಾನು ನೋಡಿದೆ. ಪುಟ್ಟ ಹುಡುಗಿ ಜೊತೆ ಬಸ್ ಹತ್ತುತ್ತಾ ಇದ್ದೆ. ಭವಾನೀಪುರದಲ್ಲಿ ನಿನ್ನ ಮುಖಾ ಕಣ್ಣುಗಳನ್ನು ನೋಡಿಯೇ ತಿಳಿದುಕೊಂಡೆ, ನೀನು ಅವಳೊಡನೆ ಏನೋ ಸಂಬಂಧವಿಟ್ಟುಕೂಂಡಿದೀಯ ಅಂತ. ಖಂಡಿತವಾಗಿಯೂ ನಾನು ನಿನಗೆ ಎಚ್ಚರಿಕೆ ಕೂಡ್ತಾ ಇದೀನಿ. ಅದು ಡೇಂಜರಸ್, ಅವರು ಪ್ರತಿಯೊಂದು ಮಾತನ್ನು ನಂಬ್ತಾರೆ. ನಿನ್ನ ಎಲ್ಲ ವಿಷಯವನ್ನು ಅವರು ನಂಬ್ತಾರೆ. ಅವಳ ಹತ್ತಿರ ನೀನು ಒಂದು ಸುಳ್ಳು ಹೇಳೋದಕ್ಕೂ ಸಾಧ್ಯವಿಲ್ಲ.

ಅವಿನಾಶ ಪ್ಲೀಸ್ ನೀನು ಈ ಹುಡುಗಿ ಬಗ್ಗೆ ಏನೂ ಹೇಳಬೇಡ.

ಅವಿನಾಶ ಚಕಿತನಾಗಿ ಕೇಳಿದ, ಯಾಕೆ ? ಏನು ವಿಷಯ ?

ನಾನೆಂದೆ, ನನ್ನ ಏನೂ ಕೇಳಬೇಡ. ನಾನು ಈ ಒಂದು ವಿಷಯವನ್ನು ಎಲ್ಲರಿಂದಲೂ ಮುಚ್ಚಿಡಬೇಕು ಅಂತ ಇದೀನಿ.

ಮುಚ್ಚಿಡೋದೆ ? ಅವಿನಾಶ ನಶೆ ತುಂಬಿದ ದನಿಯಲ್ಲಿ ಜೋರಾಗಿ ನಗತೊಡಗಿದ. ನಿನ್ನಿಂದ ಮುಚ್ಚಿಡೋಕೆ ಸಾಧ್ಯವೇನೋ ?

ನೀನೇನೂ ನನ್ನ ಹಿಂದೆ ಗೂಢಚಾರಿಕೆ ಮಾಡೋದು ಬೇಕಿಲ್ಲ. ನನಗೊಂದಿಷ್ಟು ಏಟು ಕೊಟ್ಟು ಬಿಡು, ನಾನು ಈಗಿಂದೀಗಲೇ ಹೊರಟು ಹೋಗ್ತೀನಿ. ನನಗಿಲ್ಲಿ ಇಷ್ಟವಾಗ್ತಾ ಇಲ್ಲ.

ಶೇಖರ್ ಹಿಂತಿರುಗಿ ಬಂದು ಹೇಳಿದ, ನೂರ್‌ಜಹಾನ್ ಬೇಗಂ ಪ್ರಜ್ಞೆ ತಪ್ಪಿ ಬಿದ್ದು ಬಿಟ್ಟಿದ್ದಾಳೆ. ಅವನು ಹೇಳಿದ ರೀತಿ ಹೇಗಿತ್ತು ಎಂದರೆ, ನಾಟಕದಲ್ಲಿನ ಸೂತ್ರಧಾರನ ಘೋಷಣೆಯಂತೆ. ಅವಿನಾಶ ಚಿಂತಿತನಾಗಿ ಎದ್ದು ನಿಂತು ಕೇಳಿದ, ಏನು ವಿಷಯ ?

ಶೇಖರ ಅವನ ಕೈಹಿಡಿದುಕೊಂಡು ಹೇಳಿದ, ವಿಶೇಷವೇನಿಲ್ಲ ನೀನು ಕೂತ್ಕೊ. ಎದೆ ನೋವಂತೆ, ಮೈ ಚೆನ್ನಾಗಿಲ್ಲ ಅಂತ ಹೇಳ್ತಾ ಇದ್ದಳು. ಒಮ್ಮೆಗೇ ಚಡಪಡಿಸಿ, ಹುಚ್ಚರಂತೆ ಹೊರಳಿ, ಬಟ್ಟೆ ಬರೆ ಬಿಚ್ಚೋ ಪ್ರಯತ್ನ ಮಾಡಿದಳಂತೆ. ಆಮೇಲೆ ಎಚ್ಚರ ತಪ್ಪಿ ಬಿದ್ದುಬಿಟ್ಟಳಂತೆ. ವೀಣಾ ತುಂಬಾ ಹೆದರಿಬಿಟ್ಟಿದ್ದಳು. ಅವಳ ಜೊತೆ ಇದ್ದ ಅವರಿಬ್ಬರೂ ಹೇಳಿದರಂತೆ, ಒಂದೆರಡು ವರ್ಷದಿಂದ, ಒಮ್ಮೊಮ್ಮೆ ಅವಳಿಗೆ ಈ ರೀತಿ ಆಗ್ತಾನೇ ಇರುತ್ತಂತೆ. ಸ್ವಲ್ಪ ಮಲಗಿದರೆ ಸರಿ ಹೋಗುತ್ತೆ. ಅದಕ್ಕಾಗಿಯೇ ಅವಳನ್ನು ಬಲವಂತ ಮಾಡಿ ಕಲಕತ್ತೆಗೆ ಕರೆದುಕೊಂಡು ಬಂದಿದೀವಿ ಅಂತಲೂ ಹೇಳಿದರಂತೆ.

ನಾನೆಂದೆ, ಯಾಕೆ ಢಾಕಾದಲ್ಲಿ ಇದರ ಚಿಕಿತ್ಸೆ ಮಾಡೋದಕ್ಕಾಗೋದಿಲ್ಲವೇ ?

ನಿಜವಾದ ರೋಗವಿರಲಿಕ್ಕಿಲ್ಲ. ಬರೀ ನಾಟಕ.

ಶೇಖರನೆಂದ, ಸುನೀಲ್ ನೀನು ಪೂರ್ತಿ ವಿಷಯ ತಿಳಿಯೋ ಮೊದಲೇ ಒಂದು ರೀತಿ ತಪ್ಪು ಕಲ್ಪನೆ ರೂಢಿಸಿಕೊಂಡು ಬಿಡ್ತೀಯ. ಸಾಧನ ಕಲಕತ್ತೆಗೆ ತನ್ನ ಮಗನನ್ನು ಹಿಂತಿರುಗಿ ಕರೆದುಕೊಂಡು ಹೋಗಲೆಂದು ಬಂದಿದ್ದಾಳೆ.

ಅವಳಿಗೆ ಇಲ್ಲೊಂದು ಮಗು ಬೇರೆ ಇದೆಯೋ ?

ನೀನು ಗೊತ್ತಿಲ್ಲದೆ ಯಾಕೆ ಅವಳನ್ನು ತಪ್ಪಾಗಿ ತಿಳಿದುಕೊಳ್ತೀಯ ?

ಅಜಯ ಬಾಬುಗಳ ಹತ್ತಿರ ಅವಳ ಮಗು ಉಳಿದುಬಿಟ್ಟಿದೆ. ಅವಳಿಗೆ ಈ ರೋಗ ಬಂದಿರೋದು ಮಗುವಿನಿಂದಾಗಿಯೇ. ಮಗುವನ್ನು ಹಿಂತಿರುಗಿ ಪಡೆಯೋತನಕ ಅವಳಿನ್ನು ಕಲಕತ್ತೆ ಬಿಟ್ಟು ಅಲುಗಾಡೋದಿಲ್ಲ.

ಅಜಯ ಬಾಬುಗಳು ಮಗುವನ್ನು ಕೊಡಲು ಒಪ್ಪುತ್ತಿಲ್ಲವೇ ?

ಇಲ್ಲ. ಅದೇ ಕಷ್ಟವಾಗಿರೋದು.

ವೀಣಾ ಹಾಗೂ ಸಾಧನಾರ ಪೂರ್ವ ಇತಿಹಾಸವನ್ನು ನಾನು ಅಸ್ಪಷ್ಟವಾಗಿ ತಿಳಿದುಕೊಂಡಿದ್ದೆ. ಶೇಖರನ ಹತ್ತಿರ ವಿಚಾರಿಸಿ ಈಗ ಸಂಪೂರ್ಣವಾಗಿ ತಿಳಿದುಕೊಂಡೆ. ವೀಣಾಳ ಪರಿವಾರದೊಂದಿಗೆ, ನಮ್ಮ ಪರಿವಾರಕ್ಕೂ ಬಹಳ ಹೋಲಿಕೆ ಇದೆ. ಅವರೂ ಮೂರು ಜನ ಅಕ್ಕ-ತಂಗಿಯರು, ಒಬ್ಬ ತಮ್ಮ ವಯಸ್ಸಾದ ಅಪ್ಪ-ಅಮ್ಮಂದಿರೊಂದಿಗೆ, ಪಾಕಿಸ್ತಾನದಿಂದ ಹೊರಟುಬಂದಿದ್ದರು. ಇಲ್ಲಿ ಅವರಿಗ್ಯಾರೂ ಬಳಗದವರಿರಲಿಲ್ಲ. ವೀಣಾಳ ತಂದೆಗೆ ಓದು-ಬರಹ ಕೂಡಾ ಬರುತ್ತಿರಲಿಲ್ಲ. ವೀಣಾಳ ಅಪ್ಪ ಒಂದೆರಡು ದಿನಸಿ ಅಂಗಡಿಗಳಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದರು. ವೀಣಾಳ ಚಿಕ್ಕ ತಮ್ಮ ಟ್ರೈನ್‌ನಲ್ಲಿ ಕಡ್ಲೆಪುರಿ ಮಾರಲು ಹೋಗಿ, ಟ್ರೈನಿನಡಿಗೆ ಬಿದ್ದು ತೀರಿಕೊಂಡು ಬಿಟ್ಟ. ಅನಂತರ, ಉಳಿದವರು, ಮೂರು ಜನ ಪ್ರಾಯದ ಹುಡುಗಿಯರು ಮಾತ್ರ. ಅವರೊಡನೆ ಚೆಲ್ಲಾಟವಾಡಲು ಜನ ಸೇರುತ್ತಿದ್ದರು. ಅವರೂ ಕೂಡಾ ಚೆಲ್ಲಾಟದ ವಸ್ತುವಾಗಲು ಒಪ್ಪಲು ಹೆಚ್ಚು ಹೊತ್ತೇನೂ ಬೇಕಾಗಲಿಲ್ಲ. ಅವರದಾದ್ರೂ ಏನು ತಪ್ಪು ? ಬಂಗಾಲದ ಹುಡುಗಿಯರು, ಕಲಕತ್ತೆ ಪಟ್ಟಣವನ್ನು ನೋಡಿ ತಬ್ಬಿಬ್ಬಾಗಿ ಬಿಟ್ಟಿರಬೇಕು. ನಾನೇ ತಬ್ಬಿಬ್ಬಾಗಿದ್ದೆ ಅಂದ ಮೇಲೆ ಆ ಹುಡುಗಿಯರನ್ನು ಇನ್ನು ಕೇಳಬೇಕೆ ? ಬಡತನದ ಸಂಸಾರದಲ್ಲಿ ದಿನ ಬೆಳಗಾದರೆ ಬೈಗಳು ಹಾಗೂ ಮೂದಲಿಕೆ. ಆದ್ದರಿಂದ ರಸ್ತೆಯಲ್ಲಿ ಹೊರ ಹೊರಟೊಡನೆ, ಒಳ್ಳೊಳ್ಳೆ ಬಟ್ಟೆ-ಬರೆ ತೊಟ್ಟ ಜನರು ಆಸೆಯ ಕಣ್ಣುಗಳಿಂದ ದಿಟ್ಟಿಸುತ್ತಿದ್ದರು. ಕಿವಿಯವರೆಗೂ ತುಟಿ ಅಗಲಿಸಿ ಅವರೊಡನೆ ಮಾತನಾಡಲು ಓಡಿ ಬರುತ್ತಿದ್ದರು. ಅಂದ ಮೇಲೆ ತಲೆ ಕೆಡಲು ಹೆಚ್ಚು ಸಮಯವೇನೂ ಬೇಕಾಗಲಿಲ್ಲ. ದೊಡ್ಡಕ್ಕ ಜ್ಯೋತ್ಸ್ನ ಮೊದಲು ಎಡವಿದಳು. ಒಂದು ರಾತ್ರಿ ಅವಳು ಮನೆಗೇ ಹಿಂತಿರುಗಲಿಲ್ಲ. ಅನಂತರವೂ ಹಿಂತಿರುಗಲಿಲ್ಲ. ಜ್ಯೋತ್ಸ್ನಳ ಬಗ್ಗೆ ಅವರಿಗೆ ಯಾವೊಂದು ಸುದ್ದಿಯೂ ತಿಳಿಯಲಿಲ್ಲ. ಸಾಧನಳೇ ಬಹುಶಃ ಸೌಭಾಗ್ಯದ ಮುಖ ಕಂಡವಳು. ಕೆಲವು ದಿನ ಒಂದು ಸಾಬೂನಿನ ಕಂಪೆನಿಯಲ್ಲಿ, ಸೇಲ್ಸ್‌ಗರ್ಲ್ ನೌಕರಿಯನ್ನು ಸಂಪಾದಿಸಿಕೊಂಡಿದ್ದಳು. ಅಲ್ಲೇ ಅವಳಿಗೆ ಅಜಯ ಸೆನ್‌ಗುಪ್ತರ

ಪರಿಚಯುವಾದದ್ದು. ಆತ ಸಾಧನಳನ್ನು ಧಾರ್ಮಿಕ ರೀತಿಯಲ್ಲಿ ಮದುವೆಯನ್ನು ಮಾಡಿಕೊಂಡಿದ್ದ. ಸ್ವಲ್ಪ ದಿನ ತುಂಬಾ ಸುಖವಾಗಿಯೇ ಇದ್ದಳು. ಅಮ್ಮ-ಅಪ್ಪನಿಗೂ ಸ್ವಲ್ಪ ಸಹಾಯ ಮಾಡುತ್ತಿದ್ದಳು. ವೀಣಾಳನ್ನು ತನ್ನ ಬಳಿಯೇ ಇಟ್ಟುಕೊಂಡು, ಓದು-ಬರಹದ ವ್ಯವಸ್ಥೆಯನ್ನು ಮಾಡಿದ್ದಳು. ಆದರೆ ಸಾಧನಳಿಗೆ ತನ್ನ ರೂಪದ ಬಗ್ಗೆ ಬಹಳ ಅಭಿಮಾನವಿತ್ತು ಅವಳದು ಸ್ವಲ್ಪ ಮತ್ತೇರಿಸುವ ರೂಪವೇ. ಬ್ರೇಸಿಯರ್, ಬ್ಲೌಸ್, ತೊಟ್ಟೊಡನೆ ಅದೇ ರೂಪವನ್ನು – ಅನೇಕರು ದುರ್ಲಭ ಎಂದುಕೊಂಡಿದ್ದರು. ಈ ತರಹದ ರೂಪ ತಿಲ್‌ಜಲಾದ, ಒಂದು ಅಂತಸ್ತಿನ ಮನೆಯಲ್ಲಿಯೇ ಮುಚ್ಚಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ರೂಪವಿರುವುದು ಸಕಲರ ಭೋಗಕ್ಕಾಗಿ, ಅದಕ್ಕೆಂದೇ ಅಜಯ ತನ್ನ ರೂಪವತಿ ಹೆಂಡತಿಯನ್ನು ಸಿನೇಮಾಗೆ ಸೇರಿಸುವ ಪ್ರಯತ್ನ ಮಾಡಿದ. ಅಜಯನಿಗೊಬ್ಬ ಫೋಟೋಗ್ರಾಫರ್ ಸ್ನೇಹಿತನಿದ್ದ ಅವನು ಆಸೆ ತೋರಿಸಿ, ಒಂದೆರಡು ದಿನ ಆಹ್ವಾನಿಸಿದ. ಕೆಲವು ದಿನ ಅಮೆಚೂರ್ ನಾಟಕಗಳಲ್ಲಿ ಪಾರ್ಟು, ಒಂದೆರಡು ಸಿನೇಮಾಗಳಲ್ಲಿ ಸಖೀ ಅಥವಾ ಕೆಲಸದಾಕೆಯ ಪಾತ್ರಗಳಲ್ಲಿ ಒಂದೆರಡು ಸೀನ್ ಕೊಡಿಸಿದ. ಅಜಯನಿಗೆ ಹಣದ ರುಚಿ ಹತ್ತಿತು. ಸಾಧನಗಳಿಗೆ ನಶೆ ಏರಿತ್ತು. ಇವೆಲ್ಲ ಒಂದೇ ಸಲ ಒಟ್ಟು ಸೇರಿ, ಕೇಳ್ತಾ ಕೇಳ್ತಾ ನಿಮಗೆಲ್ಲ ಕಂಠಸ್ತವಾಗಿ ಬಿಟ್ಟಿದೆ. ಕಲಕತ್ತೆಯಲ್ಲಿ ಈಗಲೇ, ಈ ಮುಹೂರ್ತದಲ್ಲಿಯೇ ಬಹುಶಃ ಮೂವತ್ತು ಮನೆಗಳಲ್ಲಿ ಫೋಟೋಗ್ರಾಫರ್ ಅಥವಾ ಸಿನೇಮಾ ದಲ್ಲಾಳಿಗಳು, ಚಹ ಕುಡಿಯುತ್ತ ಮೂವತ್ತು ಜನ, ವಿನೀತರಾಗಿ ತಲೆತಗ್ಗಿಸಿ ಕುಳಿತ ರೂಪಸಿಯರಿಗೆ ಆಶ್ವಾಸನೆ ನೀಡ್ತಿರ್ತಾರೆ. ಆದರೆ ಆ ಮೂವತ್ತು ಜನರೂ, ಕೊನೇವರೆಗೂ ಸಿನೇಮಾ ಸೇರಲು ಏನೇನು ತಯಾರಿ ಬೇಕೋ ಅದನ್ನು ಮಾಡಿದಾಗ್ಯೂ, ಕೊನೆಯುವರೆಗೂ, ಗೋಡೆಗಳ ಮೇಲಿನ ಪೋಸ್ಟರಲ್ಲಿ ಎಂದೂ ಅವರು ತಮ್ಮ ಹೆಸರನ್ನು ಹುಡುಕಿ ನೋಡಲು ಸಾಧ್ಯವಾಗೋದೇ ಇಲ್ಲ. ಸಾಧನಳೂ ಕೂಡಾ ಅದೇ ರೀತಿಯಾಗಿ ಬಿಡುತ್ತಿದ್ದಳು. ಆದರೆ ಹಠಾತ್ ಒಂದು ನಾಟಕೀಯ ಘಟನೆ ಅವಳ ಭಾಗ್ಯದ ರೇಖೆಯನ್ನೇ ಬದಲಾಯಿಸಿ ಬಿಟ್ಟಿತು.

ಪಾಕಿಸ್ತಾನದಲ್ಲಿ ಬಾಂಗ್ಲಾ ಫಿಲ್ಮ್ ತೆಗೆಯಲು ಅಭಾವವಿದ್ದುದರಿಂದ ಇಲ್ಲಿ ಫಿಲ್ಮ್ ತೆಗೆಯಲೆಂದು, ಢಾಕಾದಿಂದ ಕೆಲವು ಸಿನೇಮಾದವರು ಕಲಕತ್ತೆಗೆ ಬಂದಿದ್ದರು. ಅದೇ ಫೋಟೋಗ್ರಾಫರ್ ಸ್ನೇಹಿತ, ಸಾಧನಳನ್ನು ಅವರಿಗೆ ಪರಿಚಯಿಸಿದ. ಕೆಲವು ಹೋಟೆಲಿನಿಂದ ಹೋಟೆಲಿಗೆ ತಿರುಗಾಟ, ಅಜಯು ದಿನಾ ಪಾಕೆಟ್ ತುಂಬಾ ದುಡ್ಡು ಹಾಗೂ ಕಂಠಪೂರ್ತಿ ಹೆಂಡ ಕುಡಿದು, ಹಿಂತಿರುಗುತ್ತಿದ್ದ. ಆಗಿನ್ನು ನೆಹರೂ, ಲಿಯಾಕತ್ ಸಂಧಾನವಾಗಿರಲಿಲ್ಲ. ಎರಡೂ ದೇಶಗಳಲ್ಲೂ ತಡೆಯಿಲ್ಲದ ವ್ಯಾಪಾರ ನಡೆದಿತ್ತು. ಪಾಕಿಸ್ತಾನದ ಸಿನೇಮಾ ಕಲಕತ್ತದಲ್ಲೇ ಮಾಡಲ್ಪಡಬೇಕೆಂದು ನಿಶ್ಚಿತವಾಗಿತ್ತು. ಆದರೆ ಒಂದು ದಿನ ಹಕ್ಕಿ ಹಾರಿಯೇ ಹೋಯಿತು. ಸಾಧನಳನ್ನು ಕರೆದುಕೊಂಡು ಆ ವ್ಯಕ್ತಿ ಢಾಕಾಗೆ ಓಡಿಹೋಗಿದ್ದ.

ಇಷ್ಟರಲ್ಲೇ ವೀಣಾಳ ಭಾಗ್ಯದ ಬಾಗಿಲೂ ತೆರೆದಿತ್ತು. ಫಿಲ್ಮ್ ಸಂಬಂಧದಿಂದಾಗಿ, ಮನೆಗೆ ತುಂಬಾ ಜನ ಬಂದು ಹೋಗಿ ಮಾಡುತ್ತಿದ್ದರು. ಅಲ್ಲಿ ಒಬ್ಬ ಆರೋಗ್ಯವಂತ,

ಯೌವನದ ಹೆಣ್ಣು ಎಷ್ಟು ದಿನ ಅಂತ ಅನಾದರದಿಂದ ಇರಲು ಸಾಧ್ಯ? ಇನ್ನೊಬ್ಬ ಫೋಟೋಗ್ರಾಫರ್, ಮದುವೆ ಮಾಡಿಕೊಳ್ಳುವ ಆಸೆ ತೋರಿಸಿ ವೀಣಾಳನ್ನು ಮನೆಯಿಂದ ಹೊರ ಕರೆತಂದ. ಕಾಲೀಘಾಟಿನಲ್ಲಿ ಅವರು ಹಾರ ಬದಲಾಯಿಸಿಕೊಂಡರು. ಅವನು ವೀಣಾಳನ್ನು ಡೆಲ್ಲಿಗೆ ಕರೆದುಕೊಂಡು ಹೋದ. ಸ್ವಲ್ಪ ದಿನದಲ್ಲೇ ಸತ್ಯ ಹೊರ ಬಿತ್ತು. ಆತನಿಗೆ ಈಗಾಗಲೇ ಮದುವೆಯಾಗಿ ಮೂರು ಮಕ್ಕಳಿದ್ದರು. ಹೆಂಡತಿ ಜಬರದಸ್ತಳಾಗಿದ್ದಳು. ಅದೇ ವ್ಯಕ್ತಿ ವೀಣಾಳನ್ನು ಹಲವಾರು ಪಾರ್ಟಿಗಳಿಗೆ ಕರೆದುಕೊಂಡು ಹೋಗಿ ಹಲ್ಲಿಲ್ಲದ ಮುದುಕರ ಕೈಗೊಪ್ಪಿಸಿ ಬರುತ್ತಿದ್ದ. ಅಲ್ಲಿ ನಾನಾ ರೀತಿಯ ಕೈಗಳಿಂದ ಹಾದು ಬಂದು, ಸದ್ಯಕ್ಕೀಗ ಚಿಂತಾಮಣಿ ರಕ್ಷಿತರ ಕೈಗೆ ಬಂದು ಸೇರಿದ್ದಾಳೆ. ಈಗ ಚಿಂತಾಮಣಿ ರಕ್ಷಿತರನ್ನು ಇಟ್ಟುಕೊಂಡವಳಾದರೂ, ಬಹಳ ಚೆನ್ನಾಗಿಯೇ ಇದ್ದಾಳೆಂದೇ ಹೇಳಬಹುದು. ಅವರ ವಯಸ್ಸ ಅಪ್ಪ, ಅಮ್ಮ ವೀಣಾಳ ಸಂಪಾದನೆಯ ಅನ್ನ ತಿಂದೇ ಇನ್ನೂ ಬದುಕುಳಿದಿದ್ದಾರೆ.

ಆ ಕಡೆ ಢಾಕಾಗೆ ಹೋಗಿ, ಸಾಧನ ಹೆಸರು ಬದಲಾಯಿಸಿಕೊಂಡು ನೂರ್‌ಜಹಾನ್ ಬೇಗಂ ಆದಳು. 'ಚಿಂದಿ ಆರಿಸುವ ಹುಡುಗಿ' ಚಿತ್ರದಲ್ಲಿ ನಾಯಕಿಯ ಪಾತ್ರ ಪಡೆದು, ಜನರಾಭಿಮಾನಕ್ಕೆ ಪಾತ್ರಳಾದಳು. ಮುಂದೆ ಒಂದೆರಡು ವರ್ಷಗಳಲ್ಲಿಯೇ ಢಾಕಾದ ಚಿಕ್ಕ ಆಕಾಶದಲ್ಲಿ, ಎಲ್ಲರಿಗಿಂತ ಪ್ರಜ್ವಲಿಸುವ ತಾರೆ ಎಂದು ಸಾಬೀತು ಪಡಿಸಿಬಿಟ್ಟಳು. ಹಳೆಯ ಎಕ್ಸ್‌ಟೆನ್‌ಷನ್ನಿನಲ್ಲಿ ಎಲ್ಲಿ ವಿಶಾಲವಾದ ಆಸ್ಪತ್ರೆ ಕಟ್ಟುತ್ತಿದ್ದಾರೋ ಅದರ ಹತ್ತಿರವೇ ಸಾಧನಳ ಕಣ್ಸೆಳೆಯುವ ಸುಂದರವಾದ ಮನೆ. ಮನೆಯ ಹೆಸರು ನೂರ್ ಮಹಲ್ ಎಂದಿಟ್ಟಿದ್ದಾಳೆ. ನಾರಾಯಣ ಗಂಜ್‌ನಲ್ಲಿ ಜನಿಸಿ, ಚಿಕ್ಕವಳಿದ್ದಾಗಲೇ ಢಾಕಾಗೆ ಬಂದು, ಒಂದು ದಿನವೂ ಕುದುರೆ ಬಂಡಿಯನ್ನು ಹತ್ತಲು ಯಾರಿಂದ ಸಾಧ್ಯವಾಗುತ್ತಿರಲಿಲ್ಲವೋ ಅಂತಹಾ ಸಾಧನ ಈಗ ಅದೇ ರಸ್ತೆಯಲ್ಲಿ ತನ್ನ ಹಳದಿ ಬಣ್ಣದ ಮೋಟಾರ್ ಗಾಡಿಯಲ್ಲಿ ದೂಳೆಬ್ಬಿಸಿ ಹೋಗುತ್ತಾಳೆ. ಸಾಧನಳಿಗೆ ಸಂಪತ್ತು ಸಿಕ್ಕಿದೆ. ಗಂಡ ಅಂತ ಹೇಳಿಕೊಳ್ಳಲು ಹುಲಿಯಂತ ಮನುಷ್ಯ ಸಿಕ್ಕಿದ್ದಾನೆ. ಆದರೆ ಇನ್ನೂ ಮಕ್ಕಳಾಗಿಲ್ಲ. ಆ ತರದ ಜೀವನದಲ್ಲಿ ಮಕ್ಕಳು ಮರಿಯಾದರೆ ಕಷ್ಟವೇ, ಆಗದಿದ್ದರೇನೇ ಒಳ್ಳೆಯದು. ಆದರವಳಿಗೆ ಮಗು ಬೇಕು. ಮಗುವಿಗಾಗಿ ಹುಚ್ಚು ಹಿಡಿದುಬಿಟ್ಟಿದೆ. ಎಂಟು ವರ್ಷಗಳ ನಂತರ ಕಲಕತ್ತೆಗೆ ಹಿಂತಿರುಗಿ ಬಂದಿದ್ದಾಳೆ. ಅವಳ ಜೀವನದ ಏಕ ಮಾತ್ರ ಸಂತಾನವನ್ನು ಕರೆದುಕೊಂಡು ಹೋಗಲೆಂದು.

ಎಲ್ಲ ವಿಷಯ ಕೇಳಿ ನನ್ನ ಮನ ಮಿಡಿಯಿತು. ನನ್ನ ಮೂವರೂ ಅಕ್ಕಂದಿರಿಗೂ ಒಳ್ಳೇ ಕಡೆಯೇ ಮದುವೆಯಾಗಿದೆ. ನನಗೆ ಟ್ರೈನ್‌ನಿಂದ ಟ್ರೈನ್‌ಗೆ ಅಡ್ಡಾಡಿ, ಕಡ್ಲೆಪುರಿ ಮಾರಿ ಸಾಯುವ ಪರಿಸ್ಥಿತಿ ಎಂದೂ ಒದಗಿಲ್ಲ. ನಾನು ಕಲಕತ್ತೆಯ ಗುಂಪಿನಲ್ಲಿ ಒಬ್ಬನಾಗಿ ಬೆರೆತು ಹೋಗಿದ್ದೇನೆ. ನನ್ನನ್ನು ಬೇರೆ ಯಾರಿಂದಲೂ ಗುರುತಿಸಲು ಸಾಧ್ಯವಿಲ್ಲ.

ಶೇಖರನೆಂದ, ವೀಣಾ ನನಗೆ ಎಷ್ಟೋ ಉಪಕಾರ ಮಾಡಿದ್ದಾಳೆ. ಈಗ ಅವಳ ಅಕ್ಕನಿಗೆ ಸಹಾಯ ಮಾಡೋದು ನಮ್ಮ ಧರ್ಮ.

ನಾನೆಂದೆ, ಇದರಲ್ಲಿ ನಾವೇನು ಮಾಡೋದಕ್ಕಾಗುತ್ತೆ?

ಸಾಧನಳಿಗೇನೂ, ಹಣದ ಕೊರತೆಯಿಲ್ಲ. ಬೇಕಾದಷ್ಟು ಡಾಲರ್ ಕದ್ದು ಮುಚ್ಚಿ ತಂದಿದ್ದಾಳೆ. ಅಜಯನಿಗೆ ದುಡ್ಡು ಕೊಟ್ಟು ಒಲಿಸಿ, ಮಗುವನ್ನು ಕರೆದುಕೊಂಡು ಬರೋ ಪ್ರಯತ್ನ ಮಾಡಬಹುದು. ಮತ್ತು ಅದಕ್ಕೂ ಒಪ್ಪದಿದ್ದರೆ ಬೇರೆ ವ್ಯವಸ್ಥೆ ಮಾಡಬೇಕಾಗುತ್ತೆ.

ನಾನು ನೀರಸ ದನಿಯಲ್ಲಿ ಹೇಳಿದೆ, ನೀನು ಹುಚ್ಚಾಪಟ್ಟೆ ಇದರಲ್ಲಿ ಸಿಕ್ಕಿ ಹಾಕಿಕೊಳ್ಳಬೇಡ. ವಿಷಯ ಬಹಳ ಅಪಾಯಕಾರಿ ಅಂತ ನನಗನ್ನಿಸುತ್ತೆ.

ಶೇಖರ ಚಕಿತನಾಗಿ ಕೇಳಿದ, ಇದರಲ್ಲಿ ಯಾರಿಗೆ ಕಷ್ಟ? ಒಬ್ಬ ತಾಯಿ ತನ್ನ ಮಗುವನ್ನು ಹಿಂತಿರುಗಿ ಪಡೆಯಲಿಚ್ಛಿಸುತ್ತಿದ್ದಾಳೆ. ಇದರಲ್ಲಿ ಏನು ಅನ್ಯಾಯ?

ಅವಿನಾಶ ಎಲ್ಲ ವಿಷಯ ಕೇಳಿಸಿಕೊಂಡನೋ ಇಲ್ಲವೋ, ಆದರೂ ಆ ಸಮಯದಲ್ಲಿ ಥಟ್ಟನೆ ಮುಖ ಎತ್ತಿ ಹೇಳಿದ, ಸುನೀಲ ನಮ್ಮಲ್ಲಿ ಕವರ್ಡ್, ಹೇಡಿ. ಬಹುಬೇಗ ಷಂಡನಾಗಿ ಬಿಡ್ತಾನೆ. ನಿನಗೆ ಭಯವಾದ್ರೆ ಇಲ್ಲಿಂದ ಎದ್ಹೋಗಯ್ಯ.

ನಾನು ಥಟ್ಟನೆ ಹೇಳಿದೆ, ಹೋಗೇ ಹೋಗ್ತೀನಿ, ನನಗೆ ಇಲ್ಲಿ ಇರೋಕೆ ಸ್ವಲ್ಪವೂ ಇಷ್ಟವಿಲ್ಲ. ಒಬ್ಬ ಮಗ ತನ್ನ ಸ್ವಂತ ತಾಯಿಯಿಂದ ಓಡಿ ಬಂದು, ಈಗ ಬೇರೆ ಒಬ್ಬ ತಾಯಿಗೆ ಅವಳ ಮಗನನ್ನು ಹುಡುಕಿಕೊಡಲು ಒದ್ದಾಡ್ತಾ ಇದಾನೆ. ನನಗೆ ಇದರ ತಲೆಬುಡ ಅರ್ಥವಾಗ್ತಾ ಇಲ್ಲ.

ಶೇಖರನಿಗೆ ಮೊದಲು ನನ್ನ ಮಾತು ಅರ್ಥವಾಗಲೇ ಇಲ್ಲ. ಸ್ವಲ್ಪ ಹೊತ್ತು ಪೆಚ್ಚಾಗಿ ನೋಡಿ, ನಂತರ ಹೇಳಿದ, ಓ ನೀನು ನನ್ನ ಬಗ್ಗೆ ಹೇಳ್ತಾ ಇದೀಯ, ನಾನು ಅಮ್ಮನಿಂದ ಓಡಿ ಬಂದಿಲ್ಲ. ನಾನು ಮೊನ್ನೆ ಹೋಗಿ ಅಮ್ಮನಿಗೆ ಹೇಳಿ ಬಂದಿದ್ದೀನಿ, ಸ್ವಲ್ಪ ದಿನ ಕಲಕತ್ತೆಯಿಂದ ಹೊರಗೆ ಹೋಗಿ ಬರ್ತೀನಿ ಅಂತ.

ನೀನು ಸುಳ್ಳು ಹೇಳಿ ಬಂದಿದ್ದೀಯ.

ಇದು ಖಂಡಿತವಾಗಿಯೂ ಸುಳ್ಳಲ್ಲ. ನಾನು ಸ್ವಲ್ಪ ದಿನ ರಜೆ ಹಾಕಿದೀನಿ. ಕೆಲವು ದಿನ ನಾನು ಅಮ್ಮನ ಮಗ, ತಂಗಿಯ ಹಾಗೂ ತಮ್ಮನ ಅಣ್ಣ, ಆಫೀಸಿನ ಸಾಹೇಬ ಈ ಎಲ್ಲ ಪದಗಳಿಂದ ರಜೆ ಪಡೆದುಕೊಂಡಿದ್ದೇನೆ. ಅನೇಕ ಮಿಲಿಟರಿ ಆಫೀಸರುಗಳು ರಜೆ ಪಡೆದು ಮೀನು ಹಿಡಿಯೋದಕ್ಕೆ ಹೋಗ್ತಾರೆ. ಅವರು ಮನಸ್ಸು ಮಾಡಿದರೆ ನಿಮಿಷದಲ್ಲಿ ಜನರನ್ನು ಸಾಯಿಸಿ ಬಿಡಬಹುದು. ಆದರೆ ಅವರು ಒಂದು ಸಾಮಾನ್ಯ ಮೀನನ್ನು ಸಾಯಿಸೋದಕ್ಕೆ ಗಂಟೆಗಟ್ಟಲೆ ಕೂತೇ ಇರಬೇಕು. ಅಕಸ್ಮಾತ್ ಅವರ ಗಾಳಕ್ಕೆ ಮೀನು ಸಿಕ್ಕಿಕೊಂಡರೆ, ಅದನ್ನು ನೀರಿಗೆ ಬಿಟ್ಟು ಬಿಡ್ತಾರೆ, ಅಷ್ಟೊಂದು ಕರುಣೆ. ಅದೇ ತರಹಾನೇ ಮತ್ತಿನ್ನೇನು ಇಂಪರ್ಸೋನೇಷನ್ ಅರ್ಥಾತ್ ಒಮ್ಮೊಮ್ಮೆ ಛದ್ಮವೇಷ ಧರಿಸಿ ಬೇರೆ ವ್ಯಕ್ತಿಯಾಗೋದು. ಇದಲ್ಲದೆ ಜೀವನದಲ್ಲಿ ರುಚಿ ಪಡೆಯಲು ಬೇರಿನ್ಯಾವ ದಾರಿಯೂ ಇಲ್ಲ. ನನಗಿದೆಲ್ಲ ತುಂಬಾ ಇಷ್ಟವಾಗ್ತಾ ಇದೆ.

ಏನೇ ಹೇಳು, ಸಾಧನ ನನಗೆ ಇಷ್ಟವಾಗೋದಿಲ್ಲ. ಅವಳು ತನ್ನ ಮಗನನ್ನು ಹಿಂತಿರುಗಿ ಪಡೆಯೋದರಲ್ಲಿ ನನಗೇನು ಅಂಥ ವಿಶೇಷತೆ ಕಾಣ್ತಾ ಇಲ್ಲ. ಅದಲ್ಲದೆ ಅವಳ ಮಗನ ವಯಸ್ಸೀಗ ಹನ್ನೊಂದು. ಅವನಿಗೂ ತನ್ನದೇ ಆದ ಅಭಿಪ್ರಾಯವಿರುತ್ತೆ. ಅವನೂ ಕೂಡಾ ತನ್ನ ಅಪ್ಪನ್ನ ಬಿಟ್ಟು ಈ ರೀತಿಯ

ಸ್ವಭಾವವಿರುವ ಹೆಂಗಸಿನ ಜೊತೆ ಬರಲು ಇಷ್ಟಪಡದೆಯೂ ಇರಬಹುದು.

ಅದೇನೋ ಸರಿ. ಅದನ್ನು ನೋಡೋದಕ್ಕೇ ನಾವು ಇಷ್ಟೊಂದು ಉತ್ಸುಕರಾಗಿರೋದು. ಹನ್ನೊಂದು ವರ್ಷದ ಮಗು ಎಂಟು ವರ್ಷಗಳ ನಂತರ ಅಮ್ಮನನ್ನು ನೋಡಿ ಏನು ಮಾಡುತ್ತೆ ಅನ್ನೋದನ್ನು ನೋಡಲೆಂದೇ ನಾನು ಚಡಪಡಿಸುತ್ತಿರುವುದು. ಮಗುವೇನೋ ಅಂಥಾ ಮುದ್ದು ಬರುವಂತೇನಿಲ್ಲ. ಕೊಳಕಾದ ಚಡ್ಡಿ ಹಾಗೂ ಹರಿದ ಬನಿಯನ್ ತೊಟ್ಟು ಅಡ್ಡಾಡುತ್ತಾ ಇರುತ್ತೆ. ಅದೇ ಮಗುವನ್ನು ಎಂಟು ವರ್ಷಗಳ ನಂತರ, ನೋಡಿದಾಗ, ಬೆಳ್ಳಿ ಪರದೆಯಿಂದ ಹೊರ ಬಂದ, ಜರೀ ಸೀರೆ ಉಟ್ಟ ಅಮ್ಮನ ಮುಖ ಯಾವ ರೀತಿಯಾಗಬಹುದು, ಅದನ್ನು ನೋಡಲು ಕೂಡ ನಿನಗೆ ಕುತೂಹಲವಾಗೋದಿಲ್ವೆ ?

ಇಲ್ಲ, ನನಗೆ ಇದರ ಬಗ್ಗೆ ಮನಸ್ಸು ಹರಿಯೋದಿಲ್ಲ. ನೀನೇನೋ ಇದರ ನಡುವೆ ಬದುಕಬಲ್ಲೆ. ನಾನು ವಿರುದ್ಧ ದಿಕ್ಕಿನ ಕಡೆ ಮುಖ ಹೊರಳಿಸಿಕೊಂಡು, ಇಲ್ಲಿ ಬದುಕಲಿಚ್ಛಿಸುತ್ತೇನೆ.

ಬದುಕುಳಿಯಲು ಸಾಧ್ಯವೇ ?

ನೋಡ್ಬೇಕು. ನಾನಿನ್ನು ಬರ್ತೀನಿ. ಅವಿನಾಶ ನನಗೆ ಎರಡು ರೂಪಾಯಿ ಕೊಡು.

ಇವತ್ತು ರಾತ್ರಿ ಇಲ್ಲೇ ಇದ್ದು ಹೋಗು.

ಸಾಧ್ಯವೇ ಇಲ್ಲ.

ಮೆಟ್ಟಿಲಿಳಿದು ಬಂದು, ವೀಣಾಳ ಕೋಣೆಯಲ್ಲಿ ಬಗ್ಗಿ ನೋಡಿದೆ. ಗಂಡಸರಿಬ್ಬರೂ, ನಿಶ್ಶಬ್ದವಾಗಿ ಮಾಂಸ, ರೊಟ್ಟಿ ತಿನ್ನುತ್ತಿದ್ದರು. ಕೋಣೆಯಲ್ಲಿ ವೀಣಾಳಿರಲಿಲ್ಲ. ಸಾಧನ ಕೈ ಕಾಲು ಮುದುಡಿಕೊಂಡು ಮಂಚದ ಮೇಲೆ ಮಲಗಿಕೊಂಡಿದ್ದಾಳೆ. ಗಾಢವಾದ ನಿದ್ದೆ ಬಂದಿದೆಯೋ ಅಥವಾ ಪ್ರಜ್ಞೆ ತಪ್ಪಿದೆಯೋ ಎನ್ನುವುದು ತಿಳಿಯಲಿಲ್ಲ. ಬ್ಲೌಸಿನ ಗುಂಡಿಗಳೆಲ್ಲ ಬಿಚ್ಚಿವೆ. ಕರಿಯ ಬ್ರೇಸಿಯರ್ ಕಾಣುತ್ತಿದೆ. ಒಂದು ಕೈ ಕೆಳಗೆ, ಮತ್ತೊಂದು ಎಡ ವಕ್ಷಸ್ಥಲದ ಮೇಲೆ. ಮಲಗಿರುವ ಭಂಗಿ ನೋಡಿದ್ರೆ, ಏನೋ ಒಂದು ರೀತಿಯ ಅಸಹಾಯಕತೆ ಎನ್ನಿಸುತ್ತಿತ್ತು. ಯಾರಾದರೂ ಅವಳನ್ನು ನೆಟ್ಟಗೆ ಮಾಡಿ ಮಲಗಿಸಿದ್ದರೆ, ಉಚಿತವಾಗಿರುತ್ತಿತ್ತು. ಒಂದು ಕಣ್ಣಿನಿಂದ ಹರಿದು ಬಂದಿದ್ದ, ಕಣ್ಣೀರ ಹನಿ, ಇನ್ನೂ ಒಣಗಿರಲಿಲ್ಲ. ಶರೀರದ ಯಾತನೆಯೋ ಅಥವಾ ಇನ್ಯಾವುದೋ ಯಾತನೆಯಿಂದಲೋ ಏನೋ ಆಕೆ ಪ್ರಜ್ಞೆ ತಪ್ಪುವ ಮೊದಲು ಖಂಡಿತವಾಗಿಯೂ ಅತ್ತಿರಬೇಕು. ಅಳಲಿ, ಅಳೋದೇನೂ ತಪ್ಪಲ್ಲ. ಅತ್ತರೆ ಹೆಂಗಸರ ಆರೋಗ್ಯ ಚೆನ್ನಾಗಿರುತ್ತೆ. ಯಾವಾಕೆ ತನ್ನ ಮಗುವನ್ನು ತ್ಯಜಿಸಿಬಿಟ್ಟಿದ್ದಳೋ ಅದನ್ನು ಹಿಂತಿರುಗಿ ಪಡೆಯಲು ಅಳಲೇಬೇಕು.

ಜಮುನಾ ಇವತ್ತು ನೀನು ಸಂಗೀತದ ಶಾಲೆಗೆ ಹೋಗೋದು ಬೇಡ.

ಅದ್ಯಾಕೆ ? ಇವತ್ತು ನನಗೆ ಹೊಸ ಹಾಡು ಹೇಳಿಕೊಡುವವರಿದ್ದಾರೆ.

ಹೇಳಿಕೊಡಲಿ ಬಿಡು. ನಾನು ನಿನಗೆ ಹಾಡಿನ ರೆಕಾರ್ಡ್ ಕೊಂಡು ಕೊಡ್ತೇನೆ.

ಇಂದು ವಸಂತದ ಗಾಳಿ ಬೀಸಿದೆ - ಪಾಠ. ಈ ಹಾಡಿನ ರೆಕಾರ್ಡ್ ಇದ್ಯೋ

ಇಲ್ಲವೋ ಗೊತ್ತಿಲ್ಲ.

ಇಲ್ಲದಿದ್ದರಿಲ್ಲ. ಅದೇನೂ ಅಂಥ ಮುಖ್ಯವಾದ್ದೇನಲ್ಲ. ಈ ಹಾಡನ್ನು ಇನ್ನೊಮ್ಮೆ ಕಲಿತುಕೊಳ್ಳುವೆಯಂತೆ.

ನಿಮಗೆ ಆ ಹಾಡು ಗೊತ್ತಿದೆಯೇ?

ಇಲ್ಲ, ನನಗೆ ಗೊತ್ತಿಲ್ಲ. ಆದರೆ ನಿನ್ನೊಡನೆ ಮಾತನಾಡಬೇಕೆಂದು ಬಹಳ ಇಚ್ಛೆಯಾಗ್ತಾ ಇದೆ. ನೀನು ಇನ್ನೂ ಕ್ಲಾಸ್ ತಪ್ಪಿಸೋದನ್ನು ಕಲಿತಿಲ್ಲ ಅಂತ ಕಾಣುತ್ತೆ?

ಯಾಕೆ ಕಲಿತಿಲ್ಲ? ಕೆಲವು ದಿನಗಳ ಹಿಂದೆ ಕಾಲೇಜಿನಲ್ಲಿ ನಾನು ಮೂರು-ನಾಲ್ಕು ಕ್ಲಾಸ್ ತಪ್ಪಿಸಿ ಸಿನೇಮಾ ನೋಡಲು ಹೋಗಿದ್ದೆ.

ಒಬ್ಬಳೇ ಸಿನೇಮಾ ನೋಡಲು ಹೋಗಿದ್ದೆಯಾ? ಪರವಾಗಿಲ್ವೇ?

ಆಹಾ, ಸಿನೇಮಾ ನೋಡೋಕೆ ಧೈರ್ಯ ಬೇರೆ. ಅದಲ್ಲದೆ ನನ್ನ ಜೊತೆ ನಾಲ್ಕು ಜನರಿದ್ದರು.

ಸರಿ ನಡಿ, ಮೆಲ್ಲನೆ ಈ ಬಸ್ ಹತ್ತಿ ಹೊರಟು ಬಿಡೋಣ. ಇಲ್ಲಿ ನಿಂತರೆ, ನಿನ್ನ ಸಂಗೀತದ ಶಾಲೆಯ ಸ್ನೇಹಿತರು ನೋಡಿ ಬಿಡುತ್ತಾರೆ. ಆದರಿಂದ ನನಗೆ ನಾಚಿಕೆಯಾಗುತ್ತೆ.

ನೀವು ಯಾಕೆ ನಾಚಿಕೊಳ್ಳಬೇಕು?

ಅವರೆಲ್ಲಾ ಅಂದುಕೊಳ್ಳಬಹುದು, ಈ ಮುದುಕ ನಿನ್ನನ್ನು ಸಂಗೀತದ ಶಾಲೆಗೆ ಹೋಗಲು ಬಿಡ್ತಾ ಇಲ್ಲ ಅಂತ.

ಛೇ ನೀವು, ಮುದುಕರೇ?

ನಿನ್ನ ಜೊತೆ ಹೋಲಿಸಿ ನೋಡಿದರೆ, ಮುದುಕನೇ. ನಡಿ, ನಡಿ ಬಸ್ ಬಂದೇ ಬಿಟ್ಟಿತು.

ಎಲ್ಲಿಗೆ ಹೋಗೋದು?

ನಡಿ, ನಡಿ.

ಜಮುನಾಳಿಗೆ ಗೊತ್ತಾಗದಾಯಿತು ಯಾಕೆ ಅಷ್ಟೊಂದು ಒದ್ದಾಡ್ತಾ ಇದ್ದೇನೆ ಅಂತ. ಸಂಗೀತದ ಆ ಶಾಲೆ ಇನ್ನೇನು ಬಿಟ್ಟೇ ಬಿಡ್ತಿತ್ತು. ಆ ಸಮಯದಲ್ಲೇ ನಾನವಳನ್ನು ತಡೆದಿದ್ದೆ. ರಾತ್ರಿ ಎಂಟರವರೆಗೆ, ಅವಳಿಗಾಗಿ ಕಾಯಲು ನನಗೆ ಧೈರ್ಯವಿರಲಿಲ್ಲ. ನನ್ನ ಮಾತಿನಿಂದ ಅವಳಿಗೆ ಸಂತೋಷವಾಗಿತ್ತೋ ಇಲ್ಲವೋ ತಿಳಿಯಲಿಲ್ಲ. ಬಸ್ಸಿನ ಗುಂಪಿನ ನಡುವೆ ನಾನು ಅವಳ ಹಿಂದೆ ನಿಂತು, ಬಹಳ ಗಮನವಿಟ್ಟು ಅವಳ ಕುತ್ತಿಗೆಯನ್ನು ದಿಟ್ಟಿಸಿದೆ. ಒಂದಿಷ್ಟೂ ಕೊಳೆಯಿಲ್ಲ, ಹೆಂಗಸರಿಗೆ ವಯಸ್ಸು ಹೆಚ್ಚಾದಂತೆಲ್ಲ ಕುತ್ತಿಗೆಯ ಹತ್ತಿರ, ಕೊಳೆ ಸೇರುತ್ತೆ. ಆದರೆ ಅವಳ ಕಿವಿಯ ಸಂದಿನಲ್ಲೂ ಒಂದಿನಿತೂ ಕೊಳೆ ಇಲ್ಲ. ಏನಾಶ್ಚರ್ಯ! ಎಳೆ ಮೊಲದ ತರಹ ಸ್ವಚ್ಛ. ಸ್ವಲ್ಪ ದೂರ ಪ್ರಯಾಣಿಸಿದ್ದೆವೋ ಇಲ್ಲವೋ, ನಾನು ಬೇಸರದಿಂದ, ಅವಳ ಮೈ ಮುಟ್ಟಿ ಹೇಳಿದೆ, ನಡಿ ಇಳಿದು ಬಿಡೋಣ ನೀರ ಮೇಲಿನ ಕೊಳೆಯನ್ನು ಸರಿಸುವಂತೆ, ಎರಡು ಕೈಗಳಿಂದ, ಅವಳಿಗಾಗಿ ಗುಂಪನ್ನು ಸರಿಸಿ ದಾರಿ ಮಾಡಿಕೊಟ್ಟೆ.

ಬಸ್ಸಿನಿಂದಿಳಿದೊಡನೆ ಜಮುನಾ ಪ್ರಶ್ನಿಸಿದಳು, ಟಿಕೆಟ್ ತೆಗೆದುಕೊಳ್ಳಲಿಲ್ಲವೇ ? ನಾನೆಂದೆ, ಇಲ್ಲ. ಒಂದು ದಿನ ಬಸ್ಸಿನಲ್ಲಿ ನಾನು ಐದರ ನೋಟೊಂದನ್ನು ಕೊಟ್ಟಿದ್ದೆ. ಕಂಡಕ್ಟರನೆಂದ. ಚಿಲ್ಲರೆ ಇಲ್ಲ, ಆಮೇಲೆ ಕೊಡ್ತೇನೆ ಅಂತ. ಆನಂತರ ನಾನು ಕೇಳೋದಕ್ಕೆ ಮರೆತುಬಿಟ್ಟೆ. ಅವನೂ ಕೊಡಲೇ ಇಲ್ಲ. ಎಂಥಾ ಮೋಸ. ಅದಕ್ಕಾಗಿಯೇ ನಾನು ತೀರ್ಮಾನಿಸಿ ಬಿಟ್ಟಿದೀನಿ, ಇನ್ನೆಂದಿಗೂ ನಾನು ಬಸ್ಸಿನಲ್ಲಿ ಟಿಕೆಟ್ ತೆಗೆದುಕೊಳ್ಳೋದಿಲ್ಲ ಅಂತ.

ನನ್ನ ಮಾತು ಕೇಳಿ ಜಮುನಾ ಕಿಲ ಕಿಲ ನಗತೊಡಗಿದಳು. ಹಗುರವಾದ ಶರೀರದಲ್ಲೇ ನಗು ಶೋಭಿಸೋದು. ಯಾರಿಗೆ ಭಾರೀ ಶರೀರವಿರುತ್ತೋ ಅವರ ನಗುವಿನಲ್ಲಿ ಸುತ್ತಿಗೆ ಬಡಿದಂತೆ ಶಬ್ದವಿರುತ್ತೆ. ನಾನು ಪ್ರಶ್ನಿಸಿದೆ, ಶಾಲೆ ತಪ್ಪಿಸಿ ಬಂದದ್ದಕ್ಕಾಗಿ ಮನಸ್ಸಿಗೇನಾದರೂ ಬೇಸರವೇ ? ಇಲ್ಲ ತಾನೆ ? ನನ್ನ ಜೊತೆ ಬರೋದಕ್ಕೆ ನಿನಗಿಷ್ಟಾನಾ ? ಹುಬ್ಬು ಕೊಂಕಿಸಿ, ಸ್ವಲ್ಪ ಯೋಚಿಸುವ ಭಂಗಿಯಲ್ಲಿ ನಿಂತು, ಫಳಕ್ಕನೆ ದೀಪ ಹಚ್ಚಿದಂತೆ ಹೊಳೆವ ಮುಖದಿಂದ ಹೇಳಿದಳು, ತುಂಬಾ ಇಷ್ಟವಾಗ್ತಾ ಇದೆ. ಒಂದು ಕ್ಲಾಸ್ ತಪ್ಪಿಸಿದ್ರೆ ಇನ್ನೇನಾಗಿ ಬಿಡುತ್ತೆ ಬಿಡಿ.

ಇಂದು ಜಮುನಾ ಸೂರ್ಯಕಾಂತಿ ಬಣ್ಣದ ಸೀರೆ ಉಟ್ಟಿದ್ದಳು. ಹೊಸದಾಗಿ ಸೀರೆ ಉಟ್ಟುಕೊಳ್ಳುವುದನ್ನು ಕಲಿತಿದ್ದರೂ, ನವೀನ ಶೈಲಿಯಲ್ಲಿ ಸೀರೆಯನ್ನುಡುವ ಶೈಲಿಯನ್ನು ಅವಳು ಕಲಿತು ಬಿಟ್ಟಿದ್ದಳು. ಬ್ಲೌಸ್ ಹಾಗೂ ಚಪ್ಪಲಿ ಕೂಡಾ ಹಳದಿಯ ಬಣ್ಣದ್ದೇ. ಏನೇ ಹೇಳು ನಿನಗೆ ಹಳದಿ ಬಣ್ಣ ಚೆನ್ನಾಗಿ ಒಪ್ಪುತ್ತೆ ಅಂತ ಹೇಳಬೇಕೆಂದುಕೊಂಡೆ. ಆದರೆ ತಕ್ಷಣ ನೆನಪಾಯಿತು, ಹಿಂದಿನ ದಿನ ಕೆಂಪು ಸೀರೆಯಲ್ಲೂ, ಅವಳಿಗದು ಚೆನ್ನಾಗಿ ಒಪ್ಪುತ್ತೆ ಅಂತ ಅಂದುಕೊಂಡಿದ್ದೆ. ಎಲ್ಲ ಬೀಗಗಳನ್ನು, ಒಂದೇ ಒಂದು ಬೀಗದ ಕೈಯಿಂದ ತೆಗೆಯಬಲ್ಲ ಬೀಗದಕೈ ಈ ಪ್ರಪಂಚದಲ್ಲಿ ಇದೆಯೋ ಇಲ್ವೋ ನನಗದು ತಿಳಿದಿಲ್ಲ. ಅದೇ ರೀತಿ ಕೆಲವರ ದೇಹಕ್ಕೆ ಯಾವ ಬಣ್ಣದ ಬಟ್ಟೆಯಾದ್ರೂ ಒಪ್ಪುತ್ತೆ. ಜಮುನಾಳ ದೇಹವೂ ಕೂಡಾ ಅದೇ ರೀತಿಯದು. ಕೇವಲ ದೇಹದಲ್ಲೊಂದೆ ಅಲ್ಲ, ಮನಸ್ಸಿನಲ್ಲಿಯೂ ಕೂಡಾ. ಎಲ್ಲ ಬೀಗಗಳನ್ನು ತೆರೆಯುವಂತೆ ಬೀಗ ಇರುವುದು ಅವಶ್ಯಕ. ಮನಸ್ಸಿನಲ್ಲಿ ವ್ಯಥೆ ಇದ್ದರೆ, ಎಲ್ಲ ಬಣ್ಣವೂ ಒಪ್ಪೋದಿಲ್ಲ. ನಾನು ಸುಮ್ಮನೆ ಕೇಳಿದೆ, ದಿನಾ ಒಂದೊಂದು ಹೊಸ ಸೀರೆ ಉಟ್ಟುಕೊಳ್ತೀಯಲ್ಲ ನಿನಗೆ ಬಟ್ಟೆ ಬರೆಯಲ್ಲಿ ಅಷ್ಟೊಂದು ಆಸಕ್ತಿಯೇ ?

ಜಮುನಾಳೆಂದಳು, ನೋಡಿದ್ರಾ, ಇದು ಅಕ್ಕನ ಸೀರೆ. ನಾನು ಅಕ್ಕನ ಎಲ್ಲ ಸೀರೆಗಳನ್ನೂ ಉಟ್ಟುಕೊಳ್ತೇನೆ. ಹೆಂಗಸರಿಗಂತೂ ತುಂಬಾ ಮಜಾ ಅಲ್ವಾ, ಸೀರೆಯಂತೂ ಚಿಕ್ಕದು ದೊಡ್ಡದು ಆಗೋಕೆ ಸಾಧ್ಯವೇ ಇಲ್ಲ. ಒಬ್ಬರದನ್ನು ಇನ್ನೊಬ್ಬರು ಉಟ್ಟುಕೊಳ್ಳಬಹುದು. ಗಂಡಸರ ಪ್ಯಾಂಟು ಶರ್ಟು ಆ ರೀತಿ ಆಗೋದಿಲ್ಲ.

ಅಕ್ಕ ನಿನಗೆ ಎಲ್ಲ ಸೀರೆ ಉಟ್ಟುಕೊಳ್ಳೋದಕ್ಕೆ ಕೊಡ್ತಾಳೆಯೇ ? ಅಕ್ಕ ನಿನ್ನನ್ನು ತುಂಬಾ ಪ್ರೀತಿಸ್ತಾಳೆ ಅಂತ ಕಾಣುತ್ತೆ.

ಯಾಕೆ ಕೊಡೋದಿಲ್ಲ. ಅಕ್ಕನಿಗೇನೂ ಅಷ್ಟೊಂದು ಅಗತ್ಯವಿಲ್ಲ. ಅಮ್ಮ ಈ

ನಡುವೆ ಅಕ್ಕನ್ನ ಮನೆ ಬಿಟ್ಟು ಹೋಗೋಕೆ ಬಿಡೋದಿಲ್ಲ.

ಹೊರಗೆ ಹೋಗೋದಕ್ಕೆ ಬಿಡೋದಿಲ್ಲವೇ ? ಏಕೆ ?

ಜಮುನಾ ಸ್ವಲ್ಪ ಗಂಭೀರಳಾಗಿ ಹೇಳಿದಳು, ಯಾರಿಗೆ ಗೊತ್ತು? ಅಪ್ಪ ಸಿಟ್ಟು ಮಾಡ್ತಾ ಇರ್ತಾರೆ ?

ಇನ್ನೂ ನಿಮ್ಮಕ್ಕನ ಮದುವೆ ಯಾಕೆ ಆಗಿಲ್ಲ ?

ಅಕ್ಕ ಯಾರನ್ನೂ ಒಪ್ಪೋದೇ ಇಲ್ಲ. ಎಷ್ಟು ಸಲ ನಿಶ್ಚಯ ಮಾಡಿದ್ರೂ ಅಕ್ಕ ತಾನೇ ನಿಶ್ಚಯವನ್ನು ಮುರಿದುಬಿಡ್ತಾಳೆ.

ನಿನ್ನನ್ನು ಒಬ್ಬಳೇ ಹೊರ ಹೋಗೋಕೆ ಬಿಡ್ತಾರಾ ?

ಹುಂ, ಅಮ್ಮ ನನಗೇನೂ ಹೇಳೋದಿಲ್ಲ. ಆದರೆ ನನ್ನನ್ನು ಯಾರೂ ಹೊರಗೆ ಕರೆದುಕೊಂಡು ಹೋಗೋದಿಲ್ಲ. ನನ್ನ ಕ್ಲಾಸಿನ ಶೊಪಾಲಿ ತನ್ನ ಬಾಯ್‌ಫ್ರೆಂಡ್ ಜೊತೆ ತುಂಬಾ ಅಡ್ಡಾಡ್ತಾಳೆ. ಈ ಸಲ ನಾನು ಅವಳಿಗೆ ಹೋಗಿ ಹೇಳ್ತೀನಿ.....

ನಾನು ಆವೇಗದಿಂದ ಹೇಳಿದೆ, ಏನು, ನಾನು ನಿನ್ನ ಬಾಯ್‌ಫ್ರೆಂಡ್ ಅಂತಾನಾ ? ತುಂಬಾ ಕೆಟ್ಟದ್ದನ್ನೆಲ್ಲ ಕಲ್ತಿದೀಯ.....

ಜಮುನಾ ನಕ್ಕು ಹೇಳಿದಳು, ಬಾಯ್‌ಫ್ರೆಂಡ್ ಇದ್ದರೆ ತಪ್ಪೆ? ನಿಮಗೇನೂ ಗೊತ್ತಿಲ್ಲ. ನನಗೂ ಒಬ್ಬ ಬಾಯ್‌ಫ್ರೆಂಡ್ ಇದ್ದಾನೆ ತಪನ್‌ದಾ....

ತಪನ್‌ದಾ ಯಾರು ?

ಡಿವಿಷನಲ್ ಕಮಿಷನರ್ ಸೆನ್‌ಗುಪ್ತರ ಮಗ, ತುಂಬಾ ಒಳ್ಳೆಯ ಹುಡುಗ. ಅವನಿಗೆ ಆಟಪಾಠಗಳಲ್ಲಿ ಮಾತ್ರ ಆಸಕ್ತಿ.

ಸುಮ್ಮನಿರು. ಇನ್ನು ನೀನು, ನನ್ನ ಮುಂದೆ ತಪನ್‌ದಾನ ಹೆಸರನ್ನು ಎತ್ತಬೇಡ.

ಏಕೆ ಹೆಸರೆತ್ತಬಾರದು ?

ಯಾಕೆ ಬೇಕು ? ತಪನ್‌ದಾನ ಜೊತೆ ಇದ್ದಾಗ ತಪನನ ವಿಷಯ. ಈಗ ನೀನು ನನ್ನ ಜೊತೆ ಇದ್ದೀಯ.

ಯಾಕೆ ಹೆಸರೆತ್ತಬಾರದು ಹೇಳಿ, ಪ್ಲೀಸ್.

ನಿನ್ನ ಬಾಯಲ್ಲಿ ಬೇರಿನ್ನ್ಯಾವ ಹುಡುಗನ ಹೆಸರು ಕೇಳಲು ನನಗೆ ಇಷ್ಟವಾಗೋದಿಲ್ಲ. ಕಾರಣ ನಾನು ನಿನ್ನನ್ನು ಪ್ರೀತಿಸ್ತಾ ಇದೀನೊ ಇಲ್ವೋ ?

ಕ್ಯಾಥೆಡ್ರೆಲ್‌ನ ಬಳಿ, ನಿರ್ಜನ ರಸ್ತೆಯಲ್ಲಿ ನಿಂತು, ಜಮುನಾ ನನ್ನ ಮುಖವನ್ನೇ ದಿಟ್ಟಿಸಿ ನೋಡಿದಳು. ಕಣ್ಣಿನಲ್ಲಿ ಒಂದು ರೀತಿಯ ಅಸಹಾಯಕತೆ ಎದ್ದು ಕಾಣುತ್ತಿತ್ತು. ಹೆಣ್ಣಲ್ಲವೇ. ಪ್ರೀತಿಯ ವಿಷಯ ಅರ್ಥವಾಗುತ್ತೋ ಬಿಡುತ್ತೋ. ಚಿಕ್ಕಂದಿನಲ್ಲಿಯೇ, ಪ್ರೀತಿಯ ಬಗ್ಗೆ ಕೇಳಲು ಸಿದ್ಧರಾಗಿಯೇ ಇರುತ್ತಾರೆ. ಕೇಳಿ ಮುಂದೆ ಗುರುತಿಸುತ್ತಾರೆ. ಒಮ್ಮೆ ಅವಳ ದೇಹ ಕಂಪಿಸಿತು. ಕಣ್ಣಿನ ರೆಪ್ಪೆಗಳು ಭಾರವಾದಂತಾಗಿ, ಕಣ್ಣು ಮಿಟುಕಿಸಿದಳು. ಸ್ವಾಭಾವಿಕವಾಗಿ ರೆಪ್ಪೆ ಬಡಿಯಲು ಎಷ್ಟು ಸಮಯ ಬೇಕೋ ಅದಕ್ಕಿಂತ ಹೆಚ್ಚಿನ ಸಮಯದ ನಂತರವೇ ಕಣ್ಣು ತೆರೆದು ಬಾಡಿದ ಸ್ವರದಲ್ಲಿ ಜಮುನಾಳೆಂದಳು, ನೀವು ನನ್ನನ್ನು ಪ್ರೀತಿಸ್ತಿದೀರಾ ? ಖಂಡಿತವಾಗಿಯೂ ? ಯಾಕೇಂತ ಪ್ರೀತಿಸ್ತಿದೀರ ?

ನಾನು ಒಂದೇ ಸಮನೆ ಜಮುನಾಳ ಕಣ್ಣನ್ನೇ ದಿಟ್ಟಿಸುತ್ತಲಿದ್ದೆ. ನಾನೆಂದೆ, ಮದುವೆ ಮನೆಯ ಮೆಟ್ಟಿಲ ಮೇಲೆ ನೀನು ನಿಂತದ್ದನ್ನು ಕಂಡಾಗಿನಿಂದ ನಿನ್ನನ್ನು ಪ್ರೀತಿಸ್ತಾ ಇದೀನಿ. ಇಷ್ಟು ದಿನ ಈ ವಿಷಯ ನನ್ನ ಮನಸ್ಸಿನಲ್ಲಿರಲಿಲ್ಲ. ಅದಕ್ಕೆ ಜೀವನದಲ್ಲಿ ಎಷ್ಟೊಂದು ಕಳೆದುಕೊಂಡಿದ್ದೇನೆ ಅಂತ ಮನಸ್ಸಿಗನಿಸುತ್ತೆ.

ನೀವು ನನ್ನೊಡನೆ ಮಾತೇ ಆಡುತ್ತಿರಲಿಲ್ಲ. ಸುಮ್ಮ ಸುಮ್ಮನೆ ಪ್ರೀತಿಸೋದಕ್ಕಾಗುತ್ತಾ ?

ತುಂಬಾ ಮಾತುಕತೆಯಾಡಿಬಿಟ್ಟು, ನಂತರ ಪ್ರೀತಿಯ ವಿಷಯ ಹೇಳೋದಿಕ್ಕಾಗೋದಿಲ್ಲ ಅನ್ನೋದು ನನಗೆ ಗೊತ್ತು. ಅದಕ್ಕೆ ಮೊದಲೇ ಹೇಳಿ ಬಿಟ್ಟು, ಆಮೇಲೆ ತುಂಬಾ ಮಾತನಾಡ್ತೀನಿ.

ಸುನೀಲ್‌ದಾ, ನೀವು ನನ್ನನ್ನು ತೀರಾ ಚಿಕ್ಕ ಹುಡುಗಿ ಅಂತ ಅಂದುಕೊಂಡಿದ್ದೀರ. ನಾನು ಖಂಡಿತವಾಗಿಯೂ ಚಿಕ್ಕ ಹುಡುಗಿಯಲ್ಲ. ನನಗೂ ಎಲ್ಲಾ ಅರ್ಥವಾಗುವಷ್ಟು ವಯಸ್ಸಾಗಿದೆ. ನನ್ನ ವಯಸ್ಸು –

ನಿನ್ನ ವಯಸ್ಸು ಹದಿನೈದೂವರೆ.

ಛೇ, ನನ್ನ ವಯಸ್ಸು ಹದಿನೇಳು, ಈಗ ಹದಿನೇಳಾಗಿ ಮೂರು ತಿಂಗಳಾಗಿದೆ.

ಅದು ಸಾಧ್ಯವೇ ಇಲ್ಲ. ನಿನಗೆ ಹದಿನೇಳಾದ್ರೆ ನನಗೆ ಮೂವತ್ನಾಲ್ಕು ವರ್ಷವಾಗಬೇಕು. ಆದರೆ ನನಗಿನ್ನು ಮೂವತ್ತೊಂದು ವರ್ಷ.

ಈಗ ಪುನಃ ಅದಲ್ಲ ಯಾಕೆ ? ಇದರಿಂದ ಏನೂ ವ್ಯತ್ಯಾಸವಾಗೋದಿಲ್ಲ, ನೀವು ನನ್ನ ಜೊತೆ ಹಾಸ್ಯ ಮಾಡ್ತಾ ಇದೀರ.

ಖಂಡಿತವಾಗಿಯೂ, ಹಾಸ್ಯವಲ್ಲ. ನಿನ್ನ ಕೈಕೊಡು ನೋಡೋಣ. ನಿನ್ನ ಕೈ ತುಂಬಾ ಬಿಸಿ, ಹಕ್ಕಿಯ ಗೂಡಿನ ತರಹ. ನನಗೆ ಗೊತ್ತಿತ್ತು.

ಏನು ಗೊತ್ತಿತ್ತು ?

ಗೊತ್ತಿತ್ತು, ನಿನ್ನ ಕೈ ಬೆವರಿನಿಂದ, ಒದ್ದೆಯಾಗೋದಿಲ್ಲ ಅಂತ. ಇದೇ ತರಹ ಇರುತ್ತೆ ಮತ್ತು ಕಂಪಿಸುತ್ತಿರುತ್ತೆ ಅಂತ.

ಜಮುನಾಳ ಮುಖ ಗೊಂದಲಗೊಂಡಿತು. ಮುಖದಲ್ಲಿ ಅಸಂಖ್ಯ ಅಸ್ಪಷ್ಟತೆಯ ಚಿತ್ರ. ಕೆಂಪು ಬಣ್ಣದ ಸಂಗೀತದ ಪುಸ್ತಕವನ್ನು ಇನ್ನೇನು ಬಿದ್ದೇ ಹೋಗುತ್ತೇನೋ ಎನ್ನುವ ರೀತಿಯಲ್ಲಿ ಉದಾಸೀನವಾಗಿ ಹಿಡಿದುಕೊಂಡಿದ್ದಳು. ನಾನು ಅವಳನ್ನು ವಿಕ್ಟೋರಿಯಾ ಮೆಮೋರಿಯಲ್ ಬೆಂಚಿನ ಮೇಲೆ ಕೂಡಿಸಿದೆ. ಅವಳನ್ನು ಮೇಲೆ ಕೂಡಿಸಿ, ನಾನು ಕೆಳಗೆ ಕುಳಿತುಕೊಳ್ಳುವ ಮನಸ್ಸಾಯಿತು. ಇವೆಲ್ಲ ಬರೀ ಸಡಗರ. ಅದೂ, ಚಿಕ್ಕ ಹುಡುಗಿಯೊಂದಿಗೆ, ತೀರಾ ಅನ್ಯಾಯ. ಆದರೆ ಜಮುನಾಳೊಂದಿಗೆ ಮಾತ್ರ ನಾನು ಶಕ್ತಿ ಮೀರಿ ಪ್ರಯತ್ನಿಸಲಿಚ್ಛಿಸುತ್ತೇನೆ. ಎಂದು ಜಮುನಾಳನ್ನು ನಾನು ಪ್ರಥಮ ಬಾರಿಗೆ ಚುಂಬಿಸುತ್ತೇನೋ, ಆ ದಿನ ಬೆಳಿಗ್ಗೆ ಚೌರಂಗಿಯ ರಸ್ತೆಯ ಮಧ್ಯದಲ್ಲಿ ಎಲ್ಲ ವಾಹನಗಳನ್ನು ನಿಲ್ಲಿಸಿ, ಆಕಾಶದ ಕೆಳಗೆ ಜಮುನಾಳನ್ನು ಚುಂಬಿಸುತ್ತೇನೆ ! ಆದರೆ ಅದಕ್ಕಾಗಿ ನನಗೇನೂ ಅವಸರವಿಲ್ಲ. ಅಕ್ಕಪಕ್ಕ ಅಡ್ಡಾಡುತ್ತಿರುವ ಜನರು ಆಶ್ಚರ್ಯದಿಂದ ಒಂದು ಸಲ ನೋಡೇ ನೋಡುತ್ತಾರೆ.

ನಾನು ಅವಳಿಂದ ದೂರ ಸರಿದು ಕುಳಿತೆ. ನನ್ನ ದೇಹ ಅವಳನ್ನು ತಾಗದಂತೆ ಈ ಹುಡುಗಿ ಈಗ ಸುಮ್ಮನಿದ್ದಾಳೆ. ಬಹುಶಃ ಅವಳ ಹೃದಯದ ಬಡಿತ ವೇಗವಾಗಿರಬೇಕು. ನಾನು ನನ್ನ ಮಡಿಚಿದ ತೋಳನ್ನು ಬಿಚ್ಚಿ ಗುಂಡಿ ಹಾಕಿಕೊಂಡೆ ಕುತ್ತಿಗೆಯ ಹತ್ತಿರದ ಗುಂಡಿಯನ್ನು ಹಾಕಿಕೊಂಡೆ. ಇದೇ ತರಹ ತಾನೇ ವೀಕ್ಷಕರ ಮುಂದೆ ಕುಳಿತುಕೊಳ್ಳುವುದು. ಇನ್ನು ಮುಂದೆ ಯಾವ ದೇವಸ್ಥಾನಕ್ಕೆ ಹೋದರೂ, ನಾನು ಈ ರೀತಿಯೇ ಹೋಗೋದು. ನಾನೆಂದೆ, ಜಮುನಾ ನಿನಗೆ ಆಶ್ಚರ್ಯವಾಗ್ತಾ ಇದೆಯಾ ? ಜಮುನಾ ನನ್ನನ್ನು ಎರಡೂ ಕಣ್ಣುಗಳಿಂದ, ನೇರವಾಗಿ ದಿಟ್ಟಿಸಿ ಹೇಳಿದಳು, ದಿಟವಾಗಿ, ನೀವು ನನ್ನನ್ನು ಪ್ರೀತಿಸ್ತೀರಾ ? ನೀವು ನಿಜ ಹೇಳ್ತಾ ಇದೀರಾ ತಾನೇ ?

ಇನ್ನು ಮೇಲಿಂದ ನಾನು ನಿಜವನ್ನೇ ಹೇಳೋದು. ಅವತ್ತು ನಿನ್ನನ್ನು ನೋಡಿ ನಾನು ಬಸ್ಸಿನಿಂದಿಳಿದು ಬಂದೆ ಅಂತ ನಿನ್ನ ಹತ್ತಿರ ಸುಳ್ಳು ಹೇಳಿದ್ದೆ. ನಿಜವಾಗಿ ನಾನು ಅಂದು ನಿನ್ನನ್ನು ಕಾಣಲೆಂದೇ ನಿಂತಿದ್ದೆ.

ನಿಜವೇ ? ಆ ದಿನವೇ ನೀವು ನನಗೆ ಯಾಕೆ ಹೇಳಲಿಲ್ಲ ? ಒಮ್ಮೊಮ್ಮೆ ತಪ್ಪಾಗಿ ಬಿಡುತ್ತೆ. ಎಲ್ಲರೂ ನನಗೆ ಸುಳ್ಳು ಹೇಳೋದನ್ನು ಕಲಿಸಿದ್ದಾರೆ. ನೀವು ಸುಳ್ಳು ಹೇಳೋದನ್ನು ಕಲಿಯಬೇಡಿ.

ಒಂದೆರಡು ಸುಳ್ಳು ಹೇಳಿದ್ರೆ ಅದರಿಂದೇನೂ ನಷ್ಟವಿಲ್ಲ. ಯಾವಾಗಲೂ ನಿಜವನ್ನೇ ಹೇಳಲು ಏನೋ ಒಂದು ತರಹ ಬೇಸರ.

ಜಮುನಾ ನಗುವುದನ್ನು ನೋಡಿ ನನಗೂ ನಗು ಬಂತು. ನಾನೆಂದೆ, ನೀನು ಗಂಭೀರಳಾಗಿರೋದನ್ನು ನೋಡಿ ನನಗೆ ಬೇಸರವಾಗಿತ್ತು. ನೀನು ಎಂದೂ ಗಂಭೀರಳಾಗಿರೋದಿಲ್ಲ. ಸದಾ ನಗು ನಗ್ತಾ ಇದೀಯ, ಸದ್ಯ ನಕ್ಕೆಯಲ್ಲ.

ನೀವು ಖಂಡಿತವಾಗಿಯೂ ನನ್ನನ್ನು ಪ್ರೀತಿಸ್ತೀರಾ ?

ಹೌದು, ನಾನು ನಿನ್ನನ್ನು ಪ್ರೀತಿಸುತ್ತೇನೆ. ಆದರೆ ಈಗ ನೀನು ನನ್ನನ್ನು ಪ್ರೀತಿಸುವ ಅವಶ್ಯಕತೆ ಇಲ್ಲ. ನೀನಿನ್ನೂ ಚಿಕ್ಕ ಹುಡುಗಿ. ನೀನು ಮೆಲ್ಲನೆ, ನಿಧಾನವಾಗಿ ಪ್ರೀತಿಸುವುದನ್ನು ಕಲಿಯುವಂತೆ.

ನೀವು ಪುನಃ ನನ್ನನ್ನು ಚಿಕ್ಕ ಹುಡುಗಿ ಎಂದಿರಿ ?

ಸರಿ, ಸರಿ ನೀನು ಚಿಕ್ಕ ಹುಡುಗಿಯಲ್ಲ. ಆದರೆ ಈಗ ನೀನು ಪ್ರೀತಿಸುವ ಅಗತ್ಯವಿಲ್ಲ. ನಿನ್ನ ಮುಖದಲ್ಲಿ ಪ್ರೀತಿಯ ಮಾತುಗಳು ತೀರಾ ಮುಗ್ಧ ಎಂದೆನಿಸುತ್ತದೆ.

ಯಾಕೆ ಅದು ನನ್ನಿಂದ ಸಾಧ್ಯವಿಲ್ಲವೇ ? ನಿಮ್ಮೊಬ್ಬರಿಂದಲೇ ಸಾಧ್ಯವೇ ?

ಆ ಮಾತು ಹಾಗಿರಲಿ, ಇದರ ಉತ್ತರವನ್ನು ನಾನು ನಿನಗೆ ಆಮೇಲೆ ಹೇಳುವೆ. ನೀನು ಒಂದು ಹಾಡು ಹೇಳು ನೋಡೋಣ.

ನಾನು ಒಂದು ಸಿಗರೇಟನ್ನು ಹತ್ತಿಸಿದೊಡನೆ, ಜಮುನಾ ಕಣ್ಣು ಮುಚ್ಚಿ ಹೊಗೆಯ ವಾಸನೆಯನ್ನು ಆಸ್ವಾದಿಸಿದಳು. ಮಗುವಿನ ತರಹ ಕಾಲು ಕುಣಿಸಿ ಹೇಳಿದಳು, ನನಗೊಂದು ಸಿಗರೇಟ್ ಕೊಡಿ ನೋಡೋಣ. ನಾನೆಂದೆ, ಇಲ್ಲ ನೀನು ಸಿಗರೇಟ್

ಸೇದಬಾರದು. ನನ್ನ ಸಿಗರೇಟ್ ತುಂಬಾ ಕಹಿ. ತುಟಿ ಕೊಂಕಿಸಿ, ಅಣಕಿಸುವಂತೆ ಹೇಳಿದಳು, ಆ ಸಿಗರೇಟನ್ನು ನಾನು ಬಹಳ ಸಲ ಸೇದಿದ್ದೇನೆ. ಹದಿನಾಲ್ಕನೇ ವಯಸ್ಸಿನಿಂದ ನಾನು ಸಿಗರೇಟ್ ಸೇದ್ತಾನೇ ಇದೀನಿ.

ನಾನು ರೇಗಿ ಹೇಳಿದೆ, ತುಂಬಾ ಪುಂಡು ಹುಡುಗಿಯಾಗ್ತಾ ಇದೀಯ ಅಂತ ಕಾಣುತ್ತೆ. ಯಾರ ಜೊತೆ ಸಿಗರೇಟ್ ಸೇದಿದಿ ?

ಕಾಲೇಜು ಹುಡುಗಿಯರ ಜೊತೆ. ಮನೆಯಲ್ಲಿ ಅಪ್ಪನ ಜೇಬಿನಿಂದ ಸಿಗರೇಟ್ ಕದ್ದು ನಾನು ಹಾಗೂ ಅಕ್ಕ ಸೇದುತ್ತೇವೆ. ಅಪ್ಪನಿಗೆ ಇದು ತಿಳಿಯುತ್ತಿರಲಿಲ್ಲ. ಒಂದು ಸಿಗರೇಟ್ ಕೊಡ್ತೀರಾ....

ಜನ ನೋಡಿದ್ರೆ ಏನು ತಿಳಿದುಕೊಂಡಾರು ?

ನೋಡಲಿ ಬಿಡಿ, ಏನಾಯ್ತೀಗ.

ಗಾಢ ಅಂಧಕಾರದಲ್ಲಿ ನಾನು ಅವಳಿಗೆ, ಸಿಗರೇಟ್ ಹೊತ್ತಿಸಿ ಕೊಟ್ಟೆ. ತುಂಬಾ ಜೋರಾಗಿ ಸೇದಲು ಹೋಗಿ, ಒಂದೆರಡು ಸಲ ಕಖ್ ಎಂದು ಜೋರಾಗಿ ಕೆಮ್ಮಿದಳು. ಅನಂತರ ಕಣ್ಣು ತುಂಬಾ ನೀರು ತುಂಬಿಕೊಂಡು ಹೇಳಿದಳು, ನಾನೆಂದೂ ಕೆಮ್ಮಿಲ್ಲ. ಆದರೆ, ಇವತ್ತು – ನಾನೆಂದೆ, ಅರ್ಥವಾಯ್ತು ಬಿಡು. ಇಲ್ಲಿ ನೋಡು ಈ ತರಹ, ಬೂದಿಯನ್ನು ಬೆರಳಿನಿಂದ ಝಾಡಿಸಬೇಕು.

ಅವಳೆಂದಳು, ಅಪ್ಪನ ಸ್ನೇಹಿತರೊಬ್ಬರು ಇದ್ದಾರೆ, ಅವರು ಬೂದಿ ಝಾಡಿಸುವಾಗ ಪ್ರತಿ ಸಲವೂ ಟಪ್ ಟಪ್ ಅಂತ ಶಬ್ದ ಮಾಡ್ತಾ ಇರ್ತಾರೆ.

ಜಮುನಾಳ ಒಂದು ಕೈ ನನ್ನ ತೊಡೆಯ ಮೇಲೆ ಇತ್ತು. ನಾನು ಬಹಳ ಸೂಕ್ಷ್ಮವಾಗಿ, ಸ್ವಲ್ಪ ದೂರ ಸರಿದು ಕುಳಿತುಕೊಂಡೆ. ನನ್ನ ದೇಹ ಅವಳ ದೇಹವನ್ನು ಸ್ಪರ್ಶಿಸುವುದು ಉಚಿತವಲ್ಲ. ದೇಹಕ್ಕೆ ದೇಹ ತಾಗಿಸುವ ರುಚಿಯನ್ನು ನಾನು ಅನೇಕ ಸಲ ಕಂಡಿದ್ದೇನೆ. ಆದರೆ ಇದೀಗ ಬೇಡ. ಒಂದೆರಡು ಸಲ ಸಿಗರೇಟ್ ಹೊಗೆ ಸೇದಿದ ಮೇಲೆ ನನಗೊಂದು ವಿಷಯ ಜ್ಞಾಪಕಕ್ಕೆ ಬಂತು. ನಾನೆಂದೆ, ನಿನಗೆ ಗೊತ್ತಾ ಮೊದಲನೇ ಸಲ ನಾನು ನಿನ್ನನ್ನು ಸಂಗೀತ ಶಾಲೆಯ ಎದುರು ಕಂಡಾಗ, ಆ ದಿನ ನೀನು ಹೇಳಿದ್ದೆ ನಾನು ತುಂಬಾ ಜೋರಾಗಿ ಮಾತನಾಡ್ತೀನಿ ಅಂತ. ನೀನು ಕೇಳಿದ್ದೆ ನನ್ನ ಕಣ್ಣುಗಳು, ಏಕೆ ಕೆಂಪಗಾಗಿವೆ ಅಂತ. ನೆನಪಿದೆಯೇ, ಆ ದಿನವೂ ನಾನು ಸುಳ್ಳು ಹೇಳಿದ್ದೆ. ನಿಜವಾಗಿಯೂ ಅಂದು ನಾನು ಗುಂಡು ಹಾಕಿದ್ದೆ.

ಸ್ವಲ್ಪ ಗಲಿಬಿಲಿಗೊಂಡು ಅವಳೆಂದಳು, ನೀವು ಗುಂಡು ಹಾಕ್ತೀರಾ ? ಯಾಕೆ ?

ನಾನೆಂದೆ, ಯಾರಿಗ್ಗೊತ್ತು ? ಸರಿಯಾಗಿ ಗೊತ್ತಿಲ್ಲ. ಜೊತೆಗೇ ಸ್ವಲ್ಪ ಯೋಚಿಸಿ ಹೇಳಿದೆ, ನಿಮ್ಮಪ್ಪ ಗುಂಡು ಹಾಕೋದಿಲ್ವೆ ?

ಜಮುನಾ ಗಂಭೀರಳಾಗಿ ಹೇಳಿದಳು, ಸ್ವಲ್ಪವೂ ಇಲ್ಲ. ಅಪ್ಪ ಗುಂಡು ಹಾಕೋದನ್ನ ಒಂದಿಷ್ಟೂ ಇಷ್ಟಪಡೋದಿಲ್ಲ. ಅಕ್ಕನ ಸ್ನೇಹಿತರೊಬ್ಬರು ಅಲಕೆಂದುದಾ ಗುಂಡು ಹಾಕ್ತಾರೆ ಅಂತ ಕೇಳಿ ಅಪ್ಪ ಆತನ ಜೊತೆ ಬೆರೆಯಬಾರದೆಂದು ಆಜ್ಞಾಪಿಸಿದ್ದರು.

ಹಾಗಾದ್ರೆ ನೀನು ನನ್ನ ಜೊತೆಯೂ ಬೆರೆಯೋದಿಲ್ಲ.

ನನ್ನ ಮಾತನ್ನು ಕೇಳಿ ಜಮುನಾ ಜೋರಾಗಿ ನಕ್ಕಳು. ಅನಂತರ ಅವಳೆಂದಳು,

ಆ ದಿನ ನನಗೆ ಸ್ವಲ್ಪವೂ ಅರ್ಥವಾಗಿರಲಿಲ್ಲ. ಆದರೆ ಆ ದಿನ ನಿಮ್ಮ ಮಾತು ಕೇಳಲು ಇಷ್ಟವಾಗಿತ್ತು. ನೀವು ಅಂದು, ಪ್ರತಿಯೊಂದು ಮಾತನ್ನೂ ಒತ್ತಿ ಒತ್ತಿ ಹೇಳುತ್ತಿದ್ದಿರಿ. ಅಂದು ನೀವು ರಸ್ತೆಯಲ್ಲಿ ಅನೇಕರನ್ನು ಕಂಡಿದ್ದಿರಿ. ಹೇಗಿದ್ದೀರ ಅಂತ ಅವರು ನಿಮ್ಮನ್ನ ವಿಚಾರಿಸಿದಾಗ, ಅವರಿಗೆಲ್ಲ ನೀವು ತೇಲುತ್ತರ ಕೊಟ್ಟಿದ್ದಿರಿ. ನೀವು ಗುಂಡು ಹಾಕಿದ್ದೀರ ಅಂತ ನನಗೆ ಸುಳಿವೇ ಸಿಕ್ಕಿರಲಿಲ್ಲ.

ನಾನು ನಗುತ್ತ ಹೇಳಿದೆ, ಪುಟಾಣಿ ಪುಟ್ಟಿ, ನಿನಗದು ಹೇಗೆ ಅರ್ಥವಾಗಬೇಕು ?

ಪುನಃ ನೀವು ನನ್ನನ್ನ ಪುಟ್ಟೀ ಎಂದಿರಿ.

ಸರಿ, ಪುಟಾಣಿ ಪುಟ್ಟಿಯಲ್ಲ, ನಾನು ನಿನ್ನನ್ನ ಬುಲ್‌ಬುಲ್ ಅಂತ ಕರೀತೀನಿ.

ಮುಖ ಮುಚ್ಚಿಕೊಂಡು, ಮೂಗಿನಿಂದ ಉಸಿರು ಬಿಟ್ಟರೆ ಒಂದು ರೀತಿಯ ನಗು ಹೊಮ್ಮುತ್ತೆ – ಆ ತರಹದ ನಗು ಬೀರಿ ಜಮುನಾಳೆಂದಳು, ಬುಲ್‌ಬುಲ್ ?

ಛೇ, ಜಮುನಾಳ ಭುಜ ನನ್ನ ದೇಹವನ್ನು ತಾಗುತ್ತಿತ್ತು. ಒಮ್ಮೆ ಬೇಕೆಂದೇ ಢಿಕ್ಕಿ ಹೊಡೆದಳು. ಆ ನೀಳ, ಶರೀರ ತೀರಾ ನನ್ನ ಸಮೀಪ ಬರುವುದು ಅಪಾಯ. ಬಿಸಿ ನನಗೂ ಹಾಗೂ ಅವಳಿಗೂ ಕೂಡಾ. ಒಂದು ವೇಳೆ ನನ್ನ ಬಯಕೆ ಎದ್ದುಬಿಟ್ಟರೆ ನಾನಾಗ ಸ್ವಲ್ಪ ಉಪ್ಪು ನೀರಿನಿಂದ ಅವಳ ಇಡೀ ಶರೀರವನ್ನ, ಒಂದೇ ತುತ್ತಿನಲ್ಲಿ ತಿಂದು ಬಿಡುತ್ತೇನೆ. ಅವಳಿಗೂ ಅಪಾಯ. ಅವಳಿಗದು ಗೊತ್ತಿಲ್ಲ, ಅವಳ ದೇಹದ ವಿಷಯ. ಅದು ಶಾಖವನ್ನು ಬಿಸಿ ವಿಕಿರಣ ಮಾಡುತ್ತಲೇ, ಪೂರ್ತಿಯಾಗಿ ಅವಳಿಗರಿವಿಲ್ಲದೆಯೇ, ಆ ಸಿಡಿಮದ್ದಿನ ಶರೀರ, ತನ್ನನ್ನು ಧ್ವಂಸ ಮಾಡಲು ಥಟ್ಟನೆ ಹತ್ತಿಕೊಂಡು ಉರಿಯಬಹುದು. ಇಲ್ಲಿ ಶರೀರದ ಆಟ ಬಹಳ ಸುಲಭ. ನಾನು ತುಂಬಾ ಕಂಡಿದ್ದೇನೆ, ಈ ಹುಡುಗಿಯನ್ನ ಗಮನಿಸದೆ ಬಿಡುವುದು ಉಚಿತ. ಕಾಲಿನ ಬೂಟಿನ ಲೇಸನ್ನು ಕಟ್ಟಿಕೊಳ್ಳುವ ನೆಪದಲ್ಲಿ ಬಗ್ಗಿ ನಾನು ಸ್ವಲ್ಪ ದೂರ ಸರಿದು ಕುಳಿತೆ. ಅದೇ ರೀತಿ ತಲೆ ತಗ್ಗಿಸಿದ್ದಾಗಲೇ ಪ್ರಶ್ನಿಸಿದೆ, ಜಮುನಾ, ನನ್ನ ಜೊತೆ ಕುಳಿತಿರೋದಕ್ಕೆ ನಿನಗೆ ಇಷ್ಟವಾಗ್ತಾ ಇದೆಯಾ ?

ಹೂಂ, ತುಂಬಾ. ಇಲ್ಲಿಗೆ ದಿನಾ ಬರೋಣ.

ಬೇಡ, ಅದು ಮಾತ್ರ ಬೇಡ. ಮನೇನಲ್ಲಿ ಗೊತ್ತಾಗಿ ಬಿಟ್ಟರೆ ಬೈತಾರೆ. ನಾನು ಗುಂಡು ಹಾಕ್ತೀನಿ ಅಂತ ಕೇಳಿ, ನನ್ನ ಬಗ್ಗೆ ನಿನಗೆ ಬೇಸರವಾಗಲಿಲ್ಲವೇ ಹೇಳು. ನಾನು ಇನ್ನೂ ಬಹಳ ಕೆಟ್ಟ ಕೆಲಸಗಳನ್ನು ಮಾಡಿದ್ದೇನೆ. ಎಷ್ಟೋ ಕೆಟ್ಟ ಕೆಲಸಗಳಲ್ಲಿ ನಾನು ಬೇಕೆಂದೇ ಪಾಲ್ಗೊಂಡಿದ್ದೇನೆ. ಆದರೂ ಮನಸ್ಸಿಗನಿಸುತ್ತೆ ನಾನು ಮನುಷ್ಯನ ರೂಪದಲ್ಲಿ ಒಳ್ಳೆಯವನೇ ಅಥವಾ ಕ್ರಮೇಣ ಒಳ್ಳೆಯವನಾಗ್ತಾ ಇದ್ದೇನೆ ಅಂತ. ನಾನು ನಿನಗೆ ಎಲ್ಲ ಹೇಳಿದ್ದೇನೆ. ಇದರ ನಂತರವೂ ನನ್ನ ಬಗ್ಗೆ ನಿನಗೆ ಬೇಸರವಾಗುತ್ತೋ ಇಲ್ಲವೋ ತಿಳಿಯದು.

ಯಾವ ಕೆಟ್ಟ ಕೆಲಸ ಮಾಡಿದ್ದಿರಿ, ಯಾರಿಗೆ ಹೊಡೆದಿರಿ ?

ನಾನು ಯೋಚಿಸಲಾರಂಭಿಸಿದೆ. ನಾನು ಯಾರಿಗಾದ್ರೂ ಹೊಡೆದಿದ್ದೆನೋ ಇಲ್ಲವೋ ಅಂತ ನೆನಪಾಗಲಿಲ್ಲ. ತುಂಬಾ ಜನರನ್ನು ಹೊಡೆಯಬೇಕೆಂದೇನೋ ನಾನು ಅಂದುಕೊಂಡಿದ್ದೆ. ಅನೇಕರನ್ನು ಹೊಡೆಯಬಲ್ಲವನು ಕೂಡಾ ಆಗಿದ್ದೆ ಅಥವಾ

ನನ್ನಿಂದ ಕೊಲೆ ಮಾಡಲೂ ಸಾಧ್ಯವಿತ್ತು. ಆದರೆ ಇಷ್ಟರವರೆಗೂ ಅದು ಸಾಧ್ಯವಾಗಿರಲಿಲ್ಲ. ಬರೀ ಉಪಾಯದ ಬಗ್ಗೆ ಯೋಚಿಸಿ, ತಣ್ಣಗಾಗಿದ್ದೆ. ಉಪಾಯದ ಬಗ್ಗೆ ಯೋಚಿಸಿದರೆ, ಇನ್ನು ಹೊಡೆಯಲು ಸಾಧ್ಯವಿಲ್ಲ. ಮನುಷ್ಯನನ್ನು ಹೊಡೆಯಲು ಯಾವೊಂದು ಉಪಾಯವೂ ಇಲ್ಲ. ಯಾರನ್ನಾದರೂ ಹೊಡೆಯ ಹೋದರೆ ಅವರು ಪುನಃ ಹಿಂತಿರುಗಿ ಹೊಡೆಯುತ್ತಾರೆ. ಅದೇ ಒಂದು ದೊಡ್ಡ ತೊಂದರೆ. ನಾನು ಆತ್ಮರಕ್ಷಣೆಗಾಗಿಯೇ ಸದಾ ಎಚ್ಚರದಿಂದಿರುತ್ತಿದ್ದೆ. ಥಟ್ಟನೆ ನನಗೆ ರವಿಯ ವಿಷಯ ನೆನಪಾಯಿತು. ನಾನೆಂದೆ, ರವೀಂತ ಒಬ್ಬ ಸ್ನೇಹಿತನಿದ್ದ. ಅವನೀಗ ಸತ್ತು ಹೋಗಿದ್ದಾನೆ. ಅವನ ಸಾವಿಗೆ ನಾನೇ ಕಾರಣವೇನೋ ಎಂದೆನಿಸುತ್ತೆ.

ಜಮುನಾ ವ್ಯಾಕುಲಳಾಗಿ ಹೇಳಿದಳು, ಇಲ್ಲ, ಇಲ್ಲ.

ನಾನೆಂದೆ, ಆ ಘಟನೆಯನ್ನು ಕೇಳು...

ಆ ದಿನದ ಪ್ರತಿಯೊಂದು ಘಟನೆಯೂ ನನ್ನ ಕಣ್ಣ ಮುಂದೆ ತೇಲಿ ಬಂತು. ಎರಡು ವರ್ಷದ ಹಿಂದಿನ ಆ ಸಂಜೆ, ಅಂದು ನಾನು ಬೇಸರಗೊಂಡಿದ್ದೆ. ರವಿ ತೀರಾ ವಿನೀತನಾಗಿ ನನ್ನ ಕೈ ಹಿಡಿದು ಹೇಳಿದ್ದ, ನನ್ನನ್ನು ಬಿಟ್ಟು ಹೋಗ್ತೀಯಾ? ಸರಿ ಒಂದು ದಿನ ಇದರ ಸೇಡನ್ನು ತೀರಿಸಿಕೊಳ್ತೀನೆ. ನಾನು ರವಿಯನ್ನು ತಳ್ಳಿ ದೂರ ದಬ್ಬಿ ಬಿಟ್ಟಿದ್ದೆ. ರವಿ ನನ್ನ ಕಾಲೇಜಿನ ಸ್ನೇಹಿತ. ಕಾಲೇಜಿನ ವ್ಯಾಸಂಗವನ್ನು ಪೂರ್ಣ ಗೊಳಿಸಲು ಸಾಧ್ಯವಾಗಲಿಲ್ಲ. ಅದರ ಮಧ್ಯದಲ್ಲೇ, ಅಧಃಪತನಕ್ಕಿಳಿಯಲಾರಂಭಿಸಿದ್ದ. ಹೌದು, ರವಿ ಅಧಃಪತನಕ್ಕಿಳಿದ. ಆದರೆ ನಾನು ಇಳಿಯಲಿಲ್ಲ. ರವಿಯ ಜೊತೆ ನಾನು ಹೆಂಡದಂಗಡಿ ಹಾಗೂ ಮಠಾರಗಳಿಗೆ ಹೋಗುತ್ತಲಿದ್ದೆ. ಆದರೆ ಎಂದೂ ನಾನು ರವಿಯ ಸಮ ಅಂತ ಅಂದುಕೊಂಡಿರಲಿಲ್ಲ. ರವಿಯ ಕಣ್ಣು ಹಾಗೂ ಮುಖದಲ್ಲಿ ತಪ್ಪಿತಸ್ಥ ಭಾವನೆ ಮೂಡಿತ್ತು. ರವಿಯ ಕೈಗೆ ಎಲ್ಲಿಂದಲೋ ಹಣ ಬರಲಾಂಭಿಸಿತು. ಓದು-ಬರಹ ಬಿಟ್ಟ ರವಿ ಕಣ್ಣಿಗೆ ಕಪ್ಪು ಕನ್ನಡಕ ಹಾಕಲಾರಂಭಿಸಿದ್ದ. ರವಿಯ ಮುಖ ಸುಂದರವಾಗಿತ್ತು. ಆದರೆ ಕೆಲವು ತಿಂಗಳ ನಂತರ ಯಾವಾಗ ಅವನನ್ನು ಕಂಡರೂ, ಅವನ ಕಣ್ಣುಗಳು ಕೆಳಗಿಳಿಯುತ್ತಿದ್ದವು. ಅನ್ಯಾಯದ ಹಣವನ್ನು ಅನುಭವಿಸುವುದು ಎಲ್ಲರಿಗೂ ಬರೋದಿಲ್ಲ. ಒಂದು ರೀತಿಯ ಅಪಮಾನ ಭಾವನೆಯಿಂದ ಕೆಳಗೆ ಕುಗ್ಗಲೇಬೇಕು. ರವಿಯ ಅವಸ್ಥೆಯೂ ಅದೇ ರೀತಿಯಾಗಿತ್ತು. ಒಬ್ಬಿಬ್ಬರು ಇರುತ್ತಾರೆ. ಅವರಿಂದ ನಮಗೆ ಏನೂ ಆಗಬೇಕಾಗಿರೋದಿಲ್ಲ. ಆದರೂ ಅವರನ್ನ ಒಮ್ಮೊಮ್ಮೆ ನೋಡುತ್ತಿರಬೇಕಾಗುತ್ತೆ. ರವಿಯನ್ನು ನಾನು ಅದೇ ರೀತಿ ಕಾಣುತ್ತಿದ್ದೆ. ರವಿ ನನಗೆ ಏನೋ ಒಂದು ನಿಗೂಢ ರಹಸ್ಯವನ್ನು ಹೇಳಬಯಸುತ್ತಿದ್ದ. ತಾನೊಂದು ರಹಸ್ಯದ ಮೆಟ್ಟಲನ್ನು ಕಂಡುಹಿಡಿದು, ಕ್ರಮೇಣ ಮೆಟ್ಟಲನ್ನೇರುತ್ತ ಗುರಿ ತಲುಪಿ ಬಿಡುತ್ತೇನೆ ಅಂತ. ಆದರೆ ಯಾವ ಗುರಿ? ಅದನ್ನು ಅರಿತವರ್‍ಯಾರು?

ಒಂದು ದಿನ ಮೌಲಾಲಿಯ ತಿರುವಿನಲ್ಲಿ ಅವನು ಸಿಕ್ಕಿದ್ದ. ನಾನಾಗ ಮೆಸ್‌ನಲ್ಲಿ ವಾಸವಾಗಿದ್ದೆ. ರವಿಯ ಮುಖ ಒಣಗಿತ್ತು. ಅವನೆಂದ, ನೀನೀಗ ಎಲ್ಲಿರೋದು? ನಾನು ಕೈ ಎತ್ತಿ ಮೆಸ್ ತೋರಿಸಿದೆ. ರವಿ ಥಟ್ಟನೆ ಕೋಟಿನ ಜೇಬಿನಿಂದ, ಒಂದು ಪರ್ಸ್ ಹೊರತೆಗೆದು ಹೇಳಿದ, ಇದನ್ನು ನೀನು ನಿನ್ನ ಹತ್ತಿರ ಇಟ್ಟುಕೋ. ಇದರಲ್ಲಿ

ಎರಡು ಸಾವಿರ ರೂಪಾಯಿ ಇದೆ. ನಾನು ಆಮೇಲೆ ಬಂದು ಇಸ್ಕೊಂಡು ಹೋಗ್ತೀನಿ. ಪ್ಲೀಸ್ ಇಟ್ಟುಕೊಂಡಿರಪ್ಪಾ ಅಂತ ಅಂದ. ನಾನು ಸಿಟ್ಟು ಮಾಡಿಕೊಂಡು ಹೇಳಿದೆ, ಈ ಹಣ ಗಿಣ ಎಲ್ಲ ನನ್ನಿಂದ ಇಟ್ಟುಕೊಳ್ಳೋದಕ್ಕಾಗೋದಿಲ್ಲ. ರವಿ ದೈನ್ಯಭಾವದಿಂದ ಕೇಳಿಕೊಂಡ, ಪ್ಲೀಸ್ ನಾನು ಒಂದು ಜಾಗಕ್ಕೆ ಅವಸರವಾಗಿ ಹೋಗಬೇಕು. ಅಲ್ಲಿ ಹೋದರೆ ಈ ದುಡ್ಡು ಖರ್ಚಾಗಿ ಬಿಡುತ್ತೆ. ಇಲ್ಲಾಂದ್ರೆ ಯಾರಾದರೂ ನನ್ನಿಂದ ಇಸ್ಕೊಂಡು ಬಿಡುತ್ತಾರೆ, ಪ್ಲೀಸ್. ನಾನೆಂದೆ, ನೀನು ಆ ಸ್ಥಳಕ್ಕೆ ಹೋಗೋದೆ ಬೇಡ ಅಥವಾ ಮನೆಗೆ ಹೋಗಿ ದುಡ್ಡಿಟ್ಟು ಹೋಗಬಾರದೇಕೆ ? ರವಿ ಚಿಂತಿತನಾಗಿ ಹೇಳಿದ, ಅದಕ್ಕೆಲ್ಲ ಸಮಯವಿಲ್ಲ, ನೀನೇ ನನ್ನ ಹಳೆಯ ಗೆಳೆಯ. ನನಗೊಂದಿಷ್ಟು ಉಪಕಾರ ಮಾಡಪ್ಪ.

ನಾನು ಕೋಪವನ್ನು ಪ್ರದರ್ಶಿಸಿ ಹೇಳಿದೆ, ಬೇಡ, ನಾನು ಖಂಡಿತವಾಗಿಯೂ ನಿನ್ನ ಸ್ನೇಹಿತನಲ್ಲ. ನೀನು ನಿನ್ನ ಸ್ವಂತ ಕೆಲಸಕ್ಕಾಗಿ ಪಾರ್ಟಿ ಜನರ ಹತ್ತಿರವೇ ಹೋಗು. ರವಿ ನನ್ನ ಕೈಗೆ ಅನಾಮತ್ತಾಗಿ ಪರ್ಸ್ ತುರುಕಿ ಹೊರಟೇ ಹೋಗಿದ್ದ.

ನಾನು ಮೆಸ್‌ಗೆ ಹಿಂತಿರುಗಿ, ಬೃಜೇಶ್ವರದಾಗೆ ಹೇಳಿದ್ದೆ, ಬೃಜೇಶ್ವರದಾ ನೋಡಿ ಈ ಕಥೆ. ನನಗೆ ನಮ್ಮ ರವಿಯ ಮೇಲೆ ಸಿಟ್ಟು ಬರ್ತಾ ಇದೆ. ಬೃಜೇಶ್ವರದಾ ಎಂದರು, ಪರ್ಸ್ ತೆಗೆದು ಮೊದಲು ಎಣಿಸಿ ನೋಡು, ನಿಜವಾಗಿಯೂ ಎರಡು ಸಾವಿರ ರೂಪಾಯಿ ಇದೆಯೋ ಇಲ್ಲವೋ ಅಂತ. ಆಮೇಲೆ ಗಮನವಿಟ್ಟು ನೋಡು ಅವು ನಕಲಿ ನೋಟುಗಳೋ ಅಲ್ವೋ ಅನ್ನೋದನ್ನ. ಒಂದು ವೇಳೆ ನಕಲಿ ಹಣವಲ್ಲದಿದ್ದರೆ, ನಡಿ ಬಾ. ಇಬ್ಬರೂ ಸೇರಿ ಹಣವನ್ನು ಉಡಾಯಿಸಿ ಬಿಡೋಣ.

ನಾನು ಆಶ್ಚರ್ಯದಿಂದ ಕೇಳಿದೆ, ಹಣವನ್ನು ಖರ್ಚು ಮಾಡಿ ಬಿಡಬೇಕೇ ? ಅದೂ ಅಲ್ಲದೆ ಇಷ್ಟೊಂದು ದುಡ್ಡನ್ನೇ ? ಬೃಜೇಶ್ವರದಾ ಎಂದರು, ಅದು ಬಿಟ್ರೆ ಇನ್ನೇನು ಮಾಡ್ತೀಯ, ಗೋವಿಂದಾಯ ನಮಃ ಮಾಡೋದೇ ಒಳ್ಳೆಯದು. ಈ ಹಣವನ್ನು ಅವನು ಸಂಪಾದನೆ ಮಾಡಿರೋದು ಅಂತ ಅಂದುಕೊಂಡಿದೀಯ ? ಸಂಪಾದಿಸಿದ ಹಣವನ್ನು ತಮ್ಮ ಬಳಿ ಇಟ್ಟುಕೊಳ್ಳಲು ಜನ ಹೆದರೋದಿಲ್ಲ. ನಾನೆಂದೆ, ಇದು ನಾನೂ ಸಂಪಾದಿಸಿದ ಹಣವಲ್ಲವಲ್ಲ. ಇದನ್ನು ಮುಟ್ಟೋದಕ್ಕೆ ಹೇಸಿಗೆಯಾಗುತ್ತೆ. ಸರಿ ಹಾಗಾದ್ರೆ ಒಂದು ವೇಳೆ ಖರ್ಚು ಮಾಡಬೇಕೆನಿಸಿದರೆ, ನೀವು ತೆಗೆದುಕೊಳ್ಳಿ ಎಂದು ನಾನು ಪರ್ಸನ್ನು ಬೃಜೇಶ್ವರದಾನ ಮುಂದೆ ಬಿಸಾಕಿದ್ದೆ. ಬೃಜೇಶ್ವರದಾ ನಡುಗಿ ಹೇಳಿದ್ದರು, ಬೇಡ, ಬೇಡ, ನನಗೆ ಕೊಡಬೇಡ. ನಾನು ಅದಕ್ಕೆಲ್ಲ ಸಿಕ್ಕಿ ಹಾಕಿಕೊಳ್ಳೋನಲ್ಲ. ಒಂದು ವೇಳೆ ನೀನು ಖರ್ಚು ಮಾಡಿದರೆ ಅದರಲ್ಲಿ ಭಾಗವಹಿಸಲು ಸಿದ್ಧ. ಏನೇ ಆಗಲಿ ಆ ಹಣವನ್ನು ಖರ್ಚು ಮಾಡಲಾಗಲಿಲ್ಲ. ಎರಡು ದಿನದ ನಂತರ ರವಿ ಬಂದ. ನನ್ನೆದುರೇ ಹಣವನ್ನು ಎಣಿಸಿಕೊಂಡು, ಆಶ್ಚರ್ಯದಿಂದ ಮುಗ್ಧನಾಗಿ, ನನ್ನನ್ನೇ ದಿಟ್ಟಿಸುತ್ತ ನಿಂತುಬಿಟ್ಟ. ಅವನೆಂದುಕೊಂಡಿದ್ದ – ಖಂಡಿತವಾಗಿಯೂ ನಾನು ಆ ಹಣದಿಂದ ಕನಿಷ್ಠ ಪಕ್ಷ ಐವತ್ತು, ಅರವತ್ತು ರೂಪಾಯಿಯನ್ನಾದರೂ ಖರ್ಚು ಮಾಡಿರಬೇಕು ಅಂತ. ಅದಕ್ಕಾಗಿ ಅವನು ಸಿದ್ಧನಾಗಿಯೂ ಬಂದಿದ್ದ. ಆಗ ನಾನು ಅವನ ಕಣ್ಣಿಗೆ ಒಬ್ಬ ಮಹಾ ಪುರುಷನಾಗಿದ್ದೆ.

ಕೇಳಿ ನನ್ನ ಮೈ ಉರಿದು ಹೋಯಿತು. ನಾನು ನಿಷ್ಠೂರದ ದನಿಯಲ್ಲಿ ಹೇಳಿದ್ದೆ, ನೋಡು ರವಿ, ಇನ್ನು ಮುಂದೆ ನೀನು ನನ್ನನ್ನು ಭೇಟಿಯಾಗೋದು ಬೇಡ. ಈ ತರಹದ ವ್ಯವಹಾರ ನನ್ನೊಂದಿಗೆ ಮಾಡೋಕೆ ಬಂದ್ರೆ ತೊಂದರೆಯಾಗುತ್ತೆ, ಹೇಳಿ ಬಿಟ್ಟಿದೀನಿ ನೋಡು. ಎಚ್ಚರಿಕೆ, ಇನ್ನೆಂದೂ ನೀನು ನನ್ನ ಹತ್ತಿರ ಬರೋದೇ ಬೇಡ. ರವಿ, ವಿಚಲಿತನಾಗಲಿಲ್ಲ. ನೀನು ಈ ಪೆನ್ನನ್ನ ಇಟ್ಕೊಂಡಿರು, ನಾನು ಸುಮ್ನೆ ಕೊಡ್ತಾ ಇದೀನಿ. ಅಪ್ಪಟ ಜರ್ಮನಿಯ ವಸ್ತು ಎಂದಿದ್ದ. ನಾನು ಪೆನ್ನನ್ನು ಇಸಿದುಕೊಂಡು, ಕಿಟಕಿಯ ಹತ್ತಿರ ನಿಂತುಕೊಂಡು, ಬೇಸರದ ದನಿಯಲ್ಲಿ ಪ್ರಶ್ನಿಸಿ, ರಸ್ತೆಗೆ ಬಿಸಾಕಿ ಬಿಡ್ತೀನಿ, ಇದು ನಿನ್ನದಲ್ಲ ನಡಿ. ಇನ್ನು ಇಲ್ಲಿಂದ ಹೊರಡು ಎಂದಿದ್ದೆ.

ಆದರೆ ಈ ಘಟನೆಯ ನಂತರವೂ, ರವಿ ಭೇಟಿಯಾದರೆ, ಬಲವಂತವಾಗಿ ಬಂದು, ಜೊತೆಯಲ್ಲಿ ಸ್ನೇಹಿತರ್‍ಯಾರಾದ್ರೂ ಇದ್ದರೆ, ಅವರ ಪರಿಚಯ ಮಾಡಿಸಿ ಕೊಡುತ್ತಿದ್ದ. ಜೊತೆಯಲ್ಲಿ ತಿಂಡಿ ತಿನ್ನಲು ಒತ್ತಾಯಿಸುತ್ತಿದ್ದ. ರವಿಯನ್ನು ನೋಡಿದರೆ ನನಗೆ ಸಿಟ್ಟು ಬರುತ್ತಿತ್ತು. ಅದೇ ರೀತಿಯ ಅವಸ್ಥೆ.

ಒಂದು ದಿನ ಪಾರ್ಕ್ ಸ್ಟ್ರೀಟಿನ ರೆಸ್ಟೋರೆಂಟ್ ಒಂದರಲ್ಲಿ ನಾನು ರವಿಯನ್ನು ಕಂಡೆ. ಅಂದು ಅವನು ಕಂಠಪೂರ್ತಿ ಗುಂಡು ಹಾಕಿಬಿಟ್ಟಿದ್ದ. ಆ ದಿನ ನನಗೂ ಮನಸ್ಸು ಸರಿಯಾಗಿರಲಿಲ್ಲ. ಆ ದಿನ ತುಂಬಾ ಹೊತ್ತು ಮನೀಷಳ ಮನೆ ಎದುರು ನಿಂತಿದ್ದರೂ, ಮನೀಷಳನ್ನು ಕಾಣಲಾಗಿರಲಿಲ್ಲ. ಮನೀಷಳನ್ನು ಕಾಣದಿದ್ದುದಕ್ಕೆ ನಾನು ತೀರಾ ಅನ್ಯಮನಸ್ಕನಾಗಿ ಬಿಟ್ಟಿದ್ದೆ. ನಾನು ಅಲ್ಲಿಗೆ ನನ್ನ ಸ್ನೇಹಿತರನ್ನು ಹುಡುಕಲು ಹೋಗಿದ್ದೆ. ಆದರೆ ಅವರ್‍ಯಾರು ಅಲ್ಲಿರಲಿಲ್ಲ. ಆದರೆ ರವಿಯನ್ನು ನಾನು ಅಲ್ಲಿ ಕಂಡೆ. ರವಿಯನ್ನು ಕಂಡೊಡನೆ, ನಾನು ಅಲ್ಲಿಂದ ಹೊರಟು ಹೋಗುವವನಿದ್ದೆ. ಆದರೆ ಅಷ್ಟರಲ್ಲಿ ಅವನು ನನ್ನನ್ನು ನೋಡಿ ಬಿಟ್ಟ. ಜೋರಾಗಿ ಓಡಿ ಬಂದು ಗಟ್ಟಿಯಾಗಿ ನನ್ನನ್ನು ತಬ್ಬಿಕೊಂಡು ಹೇಳಿದ, ಬಾರಯ್ಯ, ಇವತ್ತು ನೀನು ನನ್ನೊಡನೆ ಕುಡಿಯಲೇಬೇಕು. ಬಾ, ಅವರಿಗೆ ನಿನ್ನ ಪರಿಚಯ ಮಾಡಿಸಿ ಕೊಡ್ತೀನಿ. ಇವರು ಮೂರೂ ಜನ ನನ್ನ ಸ್ನೇಹಿತರು. ಜಹಜಿನ ಕ್ಲಿಯರಿಂಗ್ ಏಜೆಂಟರುಗಳು, ದೊಡ್ಡ ಮನುಷ್ಯರು. ನಾನೆಂದೆ, ನಾನು ಇಲ್ಲಿಗೆ ನನ್ನ ಸ್ನೇಹಿತರನ್ನು ಹುಡುಕಿಕೊಂಡು ಬಂದಿದ್ದೆ, ನಾನಿನ್ನು ಬರ್ತೀನಿ. ರವಿ ನನ್ನ ಕೈ ಹಿಡಿದು ಬಲವಂತ ಮಾಡತೊಡಗಿದ, ಬಾರಯ್ಯಾ ಅವರೂ ಎಲ್ಲ ಒಳ್ಳೆಯವರೇ. ನಿನಗೆ ಒಂದು ವೇಳೆ ವಿದೇಶಿ ಗಡಿಯಾರ, ಟ್ರಾನ್ಸಿಸ್ಟರ್ ಬೇಕಾದರೆ ಹೇಳು. ಅವರ ಬಳಿಯಿದೆ ಬಾರಯ್ಯಾ. ನಾನು ನನ್ನ ಸ್ವರವನ್ನು ಮೃದುಗೊಳಿಸಿ ಹೇಳಿದೆ, ಇದೇನೋ ನಿನ್ನ ಅವಸ್ಥೆ ಮನೆಗೆ ಹೋಗಬಾರದೆ ?

ರವಿ ಕಣ್ಣು ಮಿಟುಕಿಸಿ ಹೇಳಿದ, ಚುಪ್, ಇವತ್ತು ನೀನು ಸಿಕ್ಕಿದೀಯ. ಇವತ್ತು ದೊಡ್ಡ ಪಾರ್ಟಿ ಮಾಡೋಣ ? ಎಷ್ಟೂಂತ ಹೇಳು, ನಿನಗೆ ಏನು ಇಷ್ಟವೋ, ಎಷ್ಟು ಇಷ್ಟವೋ, ಏನು ಬೇಕೋ ಅದನ್ನು. ಗೊತ್ತಾಯ್ತು, ನಿನಗೇನು ಬೇಕೋ ಅದನ್ನು ಬಾಯ್ಬಿಟ್ಟು ಹೇಳಯ್ಯ... ಎಲ್ಲವನ್ನೂ ನೋಡಿ ನನಗರ್ಥವಾಯ್ತು. ರವಿ, ನಾನು ಇವತ್ತು ಒಳ್ಳೇ ಮಾತ್ನಲ್ಲೇ ಹೇಳ್ತಾ ಇದೀನಿ. ಇನ್ನು ನೀನು ಮನೆಗೆ ಹೋಗೋದೇ ಮೇಲು ಎಂದೆ. ರವಿ ನನ್ನ ಕೈ ಬಿಗಿಯಾಗಿ ಹಿಡಿದುಕೊಂಡು ಹೇಳಿದ, ನೀನೇ ನನ್ನ

ಮನೆ ತಲುಪಿಸಿಬಿಡಯ್ಯ. ನನ್ನಿಂದ ಇವತ್ತು ಒಬ್ಬನೇ ಹೋಗೋದಕ್ಕಾಗೋದಿಲ್ಲ. ನನ್ನ ಜೇಬಿನಲ್ಲಿ ಇವತ್ತು ಬೇರೆ ತುಂಬಾ ದುಡ್ಡಿದೆ. ಆ ಬಡ್ಡೀ ಮಕ್ಕಳನ್ನು ನಾನು ನಂಬೋದಿಲ್ಲ. ಸದ್ಯ ಒಳ್ಳೇದಾಯ್ತು ಇವತ್ತು ನಾನು ನಿನ್ನ ನೋಡಿದೆನಲ್ಲ. ನಿನ್ನ ಕಾಲು ಹಿಡೀತೀನಿ, ದಮ್ಮಯ್ಯ ಅಂತೀನಿ ಕಣೋ. ಅವನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ, ನಾನು ಅವರ ಟೇಬಲಿಗೆ ಹೋಗಿ ಕುಳಿತುಕೊಂಡಿದ್ದೆ. ಅವನ ಸ್ನೇಹಿತರೆಲ್ಲ ಮಧ್ಯ ವಯಸ್ಸಿನವರು, ಬೆಲೆಬಾಳುವ ಉಡುಪು ಧರಿಸಿದ್ದರು. ಆದರೆ ಅದೇನೋ ಒಂದು ರೀತಿಯ ನಿಷ್ಠುರವಾದ ಮುಖ. ನೋಡಲೇನೋ ಗಟ್ಟಿಮುಟ್ಟಾಗಿದ್ದರು. ನಾನು ಈ ತರದ ಜನರನ್ನು ಬಹಳ ಕಂಡಿದ್ದೆ. ಇಂಥವರು ನನಗಿಷ್ಟವಾಗೋದಿಲ್ಲ. ನಾನು ಒಂದು ಗ್ಲಾಸ್ ಕುಡಿಯುತ್ತಲೇ, ಎದ್ದು ಹೊರಡಲು ಪ್ರಯತ್ನಿಸಿದೆ. ಯಾಕೋ ಏನೋ, ಅವರ ಮಾತುಗಳೆಲ್ಲ ಬೇರೆಯೇ ರೀತಿಯವು ಎನಿಸಿತು. ಅವರೆಲ್ಲ ಜಹಜಿನ ಬಗ್ಗೆ ಮಾತನಾಡುತ್ತಿದ್ದರು. ಅವರ ಮುಂದೆ, ಜಹಜಿನ ಬೃಹತ್ ಚಿತ್ರವೇನೂ ತೇಲಿ ಬರುತ್ತಿರಲಿಲ್ಲ, ಆದರೆ ಕೇವಲ ಒಂದಂಶ ಮಾತ್ರ ತೇಲಿ ಬರುತ್ತಿತ್ತೇನೋ. ರವಿ, ಪುನಃ ನನ್ನ ಕೈಹಿಡಿದು ಹೇಳಿದ, ಇವತ್ತು ಹೆಂಡದ ಹೊಳೆಯನ್ನೇ ಹರಿಸಿ ಬಿಡ್ತೀನಿ. ಹೋಗ್ಬೇಡ. ನನ್ನನ್ನು ನೀನೇ ಮನೆ ತಲುಪಿಸುವಿಯಂತೆ. ರವಿ ಜೇಬಿನಿಂದ ಒಂದು ಕಟ್ಟು ನೋಟು ಹೊರ ತೆಗೆದು ಪುನಃ ಆರ್ಡರ್ ಮಾಡಿದ. ಆದರೆ ನನ್ನ ಮನಸ್ಸು ತೀರ ಕೆಟ್ಟಿತ್ತು. ಮನೀಷಳ ಬಗ್ಗೆ ಯೋಚಿಸಿ, ಎದೆಯೊಳಗೆ ಅಪಮಾನ ಭುಗಿಲೆದ್ದಿತ್ತು. ನನಗೋ ಒಂದಿಷ್ಟೂ ಮನಸ್ಸಿರಲಿಲ್ಲ. ಬಾತ್‌ರೂಮಿಗೆ ಹೋಗುವ ನೆವ ಒಡ್ಡಿ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದೆ. ಆದರೆ ರವಿ ನನ್ನ ಮೇಲೆ ಒಂದು ಕಣ್ಣು ಇಟ್ಟಿದ್ದ. ಆ ದಿನ ಬಾಗಿಲ ಹತ್ತಿರ ಪುನಃ ರವಿ ನನ್ನ ಕೈ ಹಿಡಿದುಕೊಂಡ. ಪುನಃ ನನ್ನನ್ನು ಎಷ್ಟು ಜೋರಾಗಿ ಬಲವಂತ ಮಾಡಲಾರಂಭಿಸಿದನೆಂದರೆ, ಅಂಗಡಿಯಲ್ಲಿರುವವರೆಲ್ಲರೂ ನಕ್ಕರು. ರವಿಯ ಕಣ್ಣು ಮುಖ ಎರಡೂ ಕೆಂಪಡರಿದ್ದವು. ರವಿಯ ಹಣೆ ತುಂಬಾ ಬೆವರು, ಅವನು ಹುಚ್ಚನ ತರಹ, ಹುಚ್ಚು ಹುಚ್ಚಾಗಿ ಬಡ ಬಡಿಸುತ್ತಿದ್ದ. ಅವನು ಅಲ್ಲಿರಲೂ ತುಂಬಾ ಹೆದರಿಕೊಂಡಂತಿದ್ದ. ಅವನಿಗೆ ಅಲ್ಲಿರಲು ಒಂದಿಷ್ಟೂ ಮನಸ್ಸಿದ್ದಂತಿರಲಿಲ್ಲ. ಅವನು ನನ್ನ ಕೇಳಿಕೊಂಡ, ನನ್ನನ್ನು ಮನೆಗೆ ತಲುಪಿಸಿ ಬಿಡಪ್ಪ, ನಾನು ಅವರ ಕೈಯಲ್ಲಿ ಸಿಕ್ಕಿಹಾಕಿಕೊಂಡು ಬಿಟ್ಟಿದೀನಿ. ಅವರೆಲ್ಲಾ ತೀರಾ ಅಪಾಯಕಾರಿಗಳು. ನಾವಿಬ್ಬರೂ ಒಟ್ಟಿಗೆ ಹೋಗೋಣವಂತೆ, ಇವತ್ತು ನೀನು ನನ್ನ ಜೊತೆ ಬರಲೇಬೇಕು. ನೀನೂ ನನ್ನ ಜೊತೆ ಕುಡಿಯುವಂತೆ. ಆಮೇಲೆ ನೀನೇ ನನ್ನನ್ನು ಮನೆ ತಲುಪಿಸಿ ಬಿಡು. ನಾನು ಸಿಡುಕಿದೆ, ನೀನು ಹೊರಡೋದಾದ್ರೆ ಈಗಲೇ ಹೊರಡು, ನಾನು ಟ್ಯಾಕ್ಸಿ ಕರೀತೀನಿ. ರವಿ ಹೊರಡಲಿಚ್ಛಿಸಲಿಲ್ಲ. ಅವನು ನನ್ನನ್ನು ತಡೆದು, ಅವನೊಡನೆ ಇಟ್ಟುಕೊಳ್ಳಬಯಸಿದ್ದ. ಆ ಜನರು ಅಪಾಯಕಾರಿ ಅಂತ ತಿಳಿದರೂ, ಅವನು ಯಾಕೆ ಅವರೊಂದಿಗೆ ಇರಬಯಸುತ್ತಿದ್ದಾನೆ ? ನಾನೆಂದೆ, ನಿನಗೇನಿಷ್ಟವೋ ಹಾಗೇ ಮಾಡಪ್ಪ. ನಾನಿನ್ನು ಕೂತ್ಕೊಳ್ಳೋದಿಲ್ಲ. ಆದರೂ ರವಿ ನನ್ನ ಬೆರಳುಗಳನ್ನು ಬಿಗಿಯಾಗಿಯೇ ಹಿಡಿದುಕೊಂಡಿದ್ದ. ನಾನು ಧೈರ್ಯ ಮಾಡಿ ರವಿಯನ್ನು ದೂರ ತಳ್ಳಿ ಬಿಟ್ಟೆ. ಕೆಳಗೆ

ಬೀಳುವುದನ್ನು ತಪ್ಪಿಸಿಕೊಂಡು, ಅವನು ಕಣ್ಣು ಕೆಂಪು ಮಾಡಿಕೊಂಡು, ನೀನು ನನ್ನನ್ನು ದಬ್ಬಿ ಬಿಟ್ಟೆ ಅಲ್ಲ, ಬಡ್ಡೀ ಮಗನೆ. ನೋಡ್ತಾ ಇರು, ಒಂದು ದಿನ ಮಾಡಿಸ್ತೀನಿ. ನನ್ನನ್ನು ಒಬ್ಬನ್ನೇ ಬಿಟ್ಟು ಹೋಗ್ತಾ ಇದೀಯ, ಇದರ ಸೇಡು ನಾನು ತೀರಿಸ್ಕೋತೀನಿ.

ಆಮೇಲೆ ಏನಾಯ್ತು ಗೊತ್ತಾ ಜಮುನಾ, ನಾನು ಮೂರ್ನಾಲ್ಕು ದಿನಗಳ ನಂತರ ಪುನಃ ಅದೇ ರೆಸ್ಟೋರೆಂಟ್‌ಗೆ ಹೋಗಿದ್ದೆ. ರವಿಯ ಅದೇ ಮೂರು ಜನ ಸ್ನೇಹಿತರು ಕುಳಿತುಕೊಂಡಿದ್ದರು. ಒಬ್ಬಾತ ನನ್ನನ್ನು ನೋಡಿ ಹೇಳಿದ, ನಿಮ್ಮ ಸ್ನೇಹಿತ ರವಿಯ ಸುದ್ದಿ ತಿಳಿಯಿತೇ ? ನಾನು ವಿಚಾರಿಸಿದೆ, ಏನು ಸುದ್ದಿ ? ಒಬ್ಬ ಕಣ್ಣು ಮುಚ್ಚಿ, ಕೈ ಅಲ್ಲಾಡಿಸಿ ತೋರಿಸಿದ. ನಾನು ಕೇಳಿದೆ, ಏನು ? ಒಬ್ಬನೆಂದ, ರವಿ ಸತ್ತು ಹೋದ. ಸುದ್ದಿ ಕೇಳಿ ಮೊದಲು ನನ್ನ ಮನಸ್ಸಿಗೆ ಏನೂ ಅನ್ನಿಸಲಿಲ್ಲ. ಸ್ವಾಭಾವಿಕವಾಗಿಯೇ ಕೇಳಿದೆ, ಏನಾಯ್ತು ? ಅದೇ ವ್ಯಕ್ತಿ ಹೇಳಿದ, ಆ ದಿನ ಒಟ್ಟಾರೆ ತುಂಬಾ ಕುಡಿದು ಬಿಟ್ಟಿದ್ದ. ನಾವು ಅವನನ್ನು ಮನೆ ತಲುಪಿಸಬೇಕೆಂದಿದ್ದೆವು. ಆದರವನು ನಮ್ಮನ್ನು ನಂಬಲಿಲ್ಲ. ರಸ್ತೆ ದಾಟುವಾಗ ಅವನು ಒಂದು ಗಾಡಿಗೆ ಸಿಕ್ಕು ಒಮ್ಮೆಗೇ ಛಿದ್ರ ಛಿದ್ರವಾಗಿ ಬಿಟ್ಟ. ಜೇಬಿನ ತುಂಬಾ ದುಡ್ಡಿಟ್ಟುಕೊಂಡೇ ಸ್ವರ್ಗಕ್ಕೆ ಹೋಗಿದ್ದಾನೆ. ಆ ಮಾತು ಕೇಳಿ, ನಿಜ ಹೇಳ್ತಾ ಇದೀನಿ, ಮೊದಲು ನನ್ನ ಮನಸ್ಸಿಗನಿಸಿತ್ತು, ಸದ್ಯ ಬದುಕಿದೆ, ಪಾಪ ಕಳೀತು ಅಂತ. ದಿಟ್ಟಿಸಿ ನೋಡಿದೆ, ಅವರ ಮುಖಗಳು ಗಡುಸಾಗಿರಲಿಲ್ಲ. ಅವರೆಲ್ಲ ತಲೆ ತಗ್ಗಿಸಿ ಕುಳಿತಿದ್ದರು. ಅವರ ಪಕ್ಕದಲ್ಲಿ ಒಂದು ಕುರ್ಚಿ ಖಾಲಿ ಇತ್ತು. ನನಗನಿಸಿತು ಅಲ್ಲಿ ರವಿಯ ನೆರಳು ಕುಳಿತಿದೆಯೋ ಏನೋ ಎಂದು. ನಾನು ಥಟ್ಟನೆ ಅಲ್ಲಿಂದ ಎದ್ದು ಹೊರಟು ಬಂದೆ. ಸ್ವಲ್ಪ ಹೊತ್ತಿನ ಮೇಲೆ ಬಾತ್‌ರೂಮಿಗೆ ಹೋಗಿದ್ದೆ. ಅಲ್ಲಿ ಗೋಡೆಯ ಮೇಲೆ ಪೆನ್ಸಿಲ್ಲಿನಿಂದ ಯಾರೋ ಬರೆದಿದ್ದರು 'ರವಿ ಇನ್ನಿಲ್ಲ'. ಆಕಸ್ಮಾತ್ ಅದು ನನ್ನ ಕಣ್ಣಿಗೆ ಬಿದ್ದಿತ್ತು. ರವಿ ಇನ್ನಿಲ್ಲ. ಸೊಟ್ಟಂಬಟ್ಟ ಅಕ್ಷರದಲ್ಲಿ ಬರೆದದ್ದು ನನ್ನ ಮನಸ್ಸಿಗೆ ನಾಟಿತು. ಇನ್ನು ಸ್ವಲ್ಪ ಹೊತ್ತಾಗಿದ್ದಿದ್ದರೆ, ನಾನು ತಲೆಸುತ್ತಿ ಬಿದ್ದು ಬಿಟ್ಟಿರುತ್ತಿದ್ದೆ. ಥಟ್ಟನೆ ನನ್ನ ಮನಸ್ಸಿಗೆನಿಸಿತು, ಅವನ ಸಾವಿಗೆ ನಾನೇ ಕಾರಣ. ಒಂದು ವೇಳೆ ನಾನು ಅಂದು ರವಿಯನ್ನು ಮನೆ ತಲುಪಿಸಿ ಬಿಟ್ಟಿರುತ್ತಿದ್ದರೆ, ಅವನು ಸಾಯ್ತಾನೇ ಇರಲಿಲ್ಲವೋ ಏನೋ. ಅಥವಾ ಅವನು ಇದೇ ತರಹ ಒಂದಲ್ಲ ಒಂದು ದಿನ ಸಾಯ್ತಾ ಇದ್ದನೋ ಏನೋ. ಆದರೆ ಆ ದಿನದವರೆಗಾದರೂ ಅವನು ಬದುಕುಳಿಯುತ್ತಿದ್ದ. ನಾನು ಬಯಸಿದ್ದರೆ, ಖಂಡಿತವಾಗಿಯೂ, ಅವನನ್ನು ನಾನು ಒಂದು ದಿನದ ಮಟ್ಟಿಗಾದ್ರೂ ಉಳಿಸಲು ಸಾಧ್ಯವಿತ್ತು. ಆದರೆ ನನಗೆ ಗೊತ್ತೇ ಆಗಲಿಲ್ಲ. ಇದೆಲ್ಲಕ್ಕೂ ನಾನೇ ಹೊಣೆ, ಗೊತ್ತು. ಆದರೆ ನನಗೆ ಗೊತ್ತೇ ಆಗಲಿಲ್ಲ. ರವಿಯ ಬಗ್ಗೆ ಯೋಚಿಸಿದರೆ ನನಗೆ ತುಂಬಾ ದುಃಖವಾಗುತ್ತೆ. ಈ ವಿಷಯವನ್ನು ನಾನು ಯಾರಿಗೂ ಹೇಳಿಲ್ಲ. ಆದರೆ ಅದಕ್ಕಾಗಿ ಎಂದಾದರೂ ನಾನು ಶಿಕ್ಷೆ ಅನುಭವಿಸಲೇಬೇಕು ಅಂತ ನನಗನಿಸುತ್ತೆ. ಆದರೆ ನಾನು ಗೊತ್ತಿಲ್ಲದೆಯೇ, ದೊಡ್ಡ ತಪ್ಪು ಮಾಡಿಬಿಟ್ಟಿದ್ದೇನೆ. ಆ ದಿನ ಅವನಿಗೆ ಸಾವಿನ ಬಗ್ಗೆ ತಿಳಿದಿತ್ತೋ ಏನೋ, ಅದಕ್ಕೆ ಅವನು ನನ್ನನ್ನು ತಡೆದಿಟ್ಟುಕೊಳ್ಳ

ಬಯಸಿದ್ದ. ಆದರೆ ನಾನವನಿಗೆ ಆಶ್ರಯ ನೀಡಿರಲಿಲ್ಲ, ನಾನು ಅವನಿಗೆ ಸಹಾಯ ಮಾಡಲಿಲ್ಲ. ನಾನವನನ್ನು ತಳ್ಳಿ ಬಿಟ್ಟಿದ್ದೆ. ಅದನ್ನೆಲ್ಲ ಯೋಚಿಸಿದರೆ ತುಂಬಾ ಸಂಕಟವಾಗುತ್ತೆ.

ಜಮುನಾ ಎರಡೂ ಕೈಗಳಿಂದ ನನ್ನ ಭುಜವನ್ನು ಹಿಡಿದುಕೊಂಡು ಹೇಳಿದಳು, ಅದ್ಯಾಕೆ ನೀವು ಆ ತರಹ ಮಾಡಿದಿರಿ? ಏನೇ ಆಗಲಿ ಅದರ ಬಗ್ಗೆ ಇನ್ನು ಮಾತನಾಡೋದು ಬೇಡ....

ನಾನು ಅವಳ ಕಡೆ ತಿರುಗಿ ಹೇಳಿದೆ, ನೀನೇ ಹೇಳು ಅದು ನನ್ನ ತಪ್ಪೇ? ಇಲ್ಲ, ದಿಟವಾಗಿ ತಪ್ಪು ಮನೀಷಳದು. ಅಂದು ಮನೀಷ ನನ್ನ ಮನಸ್ಸನ್ನು ಕೆಡಿಸಿ ಬಿಟ್ಟಿದ್ದಳು. ಆದ್ದರಿಂದ ನನಗೆ ಇತರರ ಬಗ್ಗೆ ಯೋಚಿಸಲು ಸಾಧ್ಯವಾಗಿರಲಿಲ್ಲ. ಜಮುನಾ ಸುಮ್ಮನೇ ಇದ್ದಳು. ನಾನೇ ಪುನಃ ಕೇಳಿದೆ, ಹೇಳು, ತಪ್ಪು ಯಾರದು?

ಜಮುನಾ ತಾರುಣ್ಯದ ದನಿಯಲ್ಲಿ ಹೇಳಿದಳು, ಗೊತ್ತಿಲ್ಲ. ನನಗೆ ಹೇಗೆ ಗೊತ್ತಾಗಬೇಕು?

ಅವಳ ದನಿಯನ್ನು ಕೇಳಿ ನನ್ನ ಮನಸ್ಸಿಗೇನೋ ಒಂದು ತರಹ ಎನ್ನಿಸಿತು. ಕತ್ತಲಲ್ಲಿ ನಾನು ಅವಳ ಗದ್ದವನ್ನು ಎತ್ತಿ ಹಿಡಿದೆ. ಬಾಳೆಗಿಡದಲ್ಲಿನ ಎಳೆ ಬಾಳೆಎಲೆಯ ಸುಳಿಯಂತೆ ಮೃದು, ಪವಿತ್ರವಾದ ಮುಖ ಜಮುನಾಳದು. ಆ ಮುಖದಲ್ಲಿ ಶಿಶಿರದ ಹನಿಯಂತೆ, ಎರಡು ಕಣ್ಣೀರ ಹನಿ. ನಾನು ಆಶ್ಚರ್ಯಗೊಂಡು ಕೇಳಿದೆ, ನೀನು ಅಳ್ತಾ ಇದೀಯ?

ಇಲ್ಲವಲ್ಲ. ನೀವು ಅವನ ಬಗ್ಗೆ ಹೇಳಿದ್ದು ಕೇಳಿ ಮನಸ್ಸಿಗೆ ತುಂಬಾ ವ್ಯಥೆಯಾಯಿತು.

ಅಯ್ಯೋ ಬಿಡು. ಬಾ ನಿನ್ನ ಮುಖ ಒರೆಸಿ ಬಿಡ್ತೇನೆ. ಬೇಡ, ನೀನೇ ನಿನ್ನ ಮುಖವನ್ನು ಚೆನ್ನಾಗಿ ಒರೆಸಿಕೊಂಡು ಬಿಡು.

ರವಿಗಾಗಿ ನಾನು ಎಂದೂ ಅತ್ತಿರಲಿಲ್ಲ, ಅಳೋದು ಮರೆತೇ ಹೋಗಿತ್ತು ಅಂತಲೇ ಹೇಳಬಹುದು. ರವಿಗಾಗಿ ಜಮುನಾ ಕೂಡಾ ಅಳೋದನ್ನು ಕಂಡು ನನ್ನ ಎದೆ ಹಗುರಾಯಿತು. ರವಿಯ ಸಾವಿನ ಬಗ್ಗೆ ಪೂರ್ತಿ ಮರೆತೇ ಬಿಟ್ಟಿರಲಿಲ್ಲ. ರವಿ ಒಂದು ದಿನದ ಮಟ್ಟಿಗಾದರೂ ಬದುಕುಳಿದಿದ್ದ. ರವಿಗಾಗಿ ನಾನು ಮರುಗುವುದರೊಂದಿಗೆ, ಜಮುನಾಳೂ ವ್ಯಥೆ ಪಟ್ಟಿದ್ದು ಕಂಡು ನನಗೆ ಬೇಸರವಾಯಿತು. ಯಾಕಾದ್ರೂ ಈ ಮಗುವನ್ನು ಅಳಿಸಿ ಬಿಟ್ಟೆನೋ ಎಂದೆನಿಸಿತು ಅಥವಾ ಅಳೋದರಲ್ಲಿ ನಿಜವಾಗಿಯೂ ಕಷ್ಟಕ್ಕಿಂತ ಸುಖವೇ ಇದೆ ಎಂದೆನಿಸಿತು.

ಮುಖವನ್ನು ಒರೆಸಿಕೊಂಡು ಜಮುನಾ ಹೇಳಿದಳು, ಸುನೀಲ್‌ದಾ ನೀವು ಅಲ್ಲಿಗೆ ಇನ್ನೆಂದೂ ಹೋಗಬೇಡಿ.

ಎಲ್ಲಿಗೆ?

ಆ ರೆಸ್ಟೋರೆಂಟಿಗೆ! ಅಂಗಡಿಗೆ.

ಇಲ್ಲ ಇನ್ನೆಂದೂ ಹೋಗಿಲ್ಲ. ಹೋಗೋದೂ ಇಲ್ಲ.

ನಡಿ, ಇನ್ನು ಹೊರಡು. ಇನ್ನು ನೀನು ಮನೆಗೆ ಹೋಗೋದೇ ಮೇಲು. ಎದ್ದು

ಸ್ವಲ್ಪ ದೂರ ನಡೆದ ಮೇಲೆ ಜಮುನಾ ಪ್ರಶ್ನಿಸಿದಳು, ಮನೀಷ ಯಾರು ? ನಾನೆಂದೆ, ಅವಳೊಬ್ಬ ಹಟಮಾರಿ ಹುಡುಗಿ. ಅವಳ ಬಗ್ಗೆ ನಿನಗೆ ನಾನು ಆಮೇಲೆ ಹೇಳ್ತೀನಿ. ನಾವು ಮಾತನಾಡುತ್ತಿರುವಾಗಲೇ ದೊಡ್ಡ ದೊಡ್ಡ ಮಳೆ ಹನಿ ಬೀಳಲಾರಂಭಿಸಿತು. ಆಗ ನಾವು ಬಟಾ ಬಯಲಿನಲ್ಲಿದ್ದೆವು. ನಾನೆಂದೆ, ಓಡೋಕ್ಕಾಗುತ್ತಾ? ಜಮುನಾ ಜಿಂಕೆಯ ಮರಿಯಂತೆ ಓಡತೊಡಗಿದಳು. ಓಡುವಾಗ ಹಾಡಿನ ಪುಸ್ತಕ ಕೈ ಜಾರಿ ಕೆಳಗೆ ಬಿತ್ತು. ನಾನದನ್ನು ಎತ್ತಿಕೊಂಡೆ. ನಾವಿಬ್ಬರೂ ಕೈ ಕೈ ಹಿಡಿದು ಓಡುತ್ತಾ ಒಂದು ಮರದ ಕೆಳಗೆ ಬಂದು ನಿಂತೆವು. ನಾವು ಅಷ್ಟೇನೂ ನೆನೆದಿರಲಿಲ್ಲ. ಕರವಸ್ತ್ರವನ್ನು ತೆಗೆದು ಮುಖ ಒರೆಸಿಕೊಳ್ಳುತ್ತ ಹೇಳಿದೆ, ಇವತ್ತು ನಿನ್ನನ್ನು ಮನೇಲಿ ಬೈಯಬಹುದು.

ಜಮುನಾಳಿಗೆ ಬಹಳ ಖುಷಿಯಾದ ಹಾಗಿತ್ತು. ಸ್ವಲ್ಪ ಹೊತ್ತಿನ ಹಿಂದಿನ ಅಳುಮೋರೆ ಹೋಗಿ ನಗುವಿನಿಂದ ಇಡೀ ದೇಹ ತುಂಬಿತ್ತು. ಅವಳನ್ನು ನನ್ನ ಬಳಿಗೆ ಬರಸೆಳೆದುಕೊಳ್ಳಬೇಕೆಂದೆನಿಸಿತು. ಆದರೆ ಅವಳಿಗೆ ಅದು ಅರ್ಥವಾಗುವ ಮುನ್ನವೇ ನಾನು ಅವಳಿಂದ ದೂರ ಸರಿದುಕೊಂಡೆ. ಯಾವ ರೀತಿ ಮಳೆ ಬಂದಿತ್ತೋ ಹಾಗೇ ಹೊರಟು ಹೋಗಿತ್ತು.

ಮರದಿಂದ ಸರಿದು, ನಾವು ಒಂದೆರಡು ಹೆಜ್ಜೆ ನಡೆಯುತ್ತಲೇ, ಪ್ಯಾಂಟು, ಜುಬ್ಬ ತೊಟ್ಟ ಕೆಲವು ಪುಂಡ ಹುಡುಗರು ನಮ್ಮನ್ನು ನೋಡಿ, ಅಣಕದ ಮಾತುಗಳನ್ನಾಡಿದರು. ನಾನು ಅವರನ್ನು ವಾರೆಗಣ್ಣಿನಿಂದಲೇ ನೋಡಿದೆ. ಸರಿಯಾಗಿ ಅವರು ಐದು ಜನರಿದ್ದರು. ಅವರಂದದ್ದನ್ನು ನಾವು ಕೇಳಿಸಿಯೇ ಕೊಳ್ಳಲಿಲ್ಲವೇನೋ ಎನ್ನುವಂತೆ ನಡೆದುಹೋದೆವು. ಜಮುನಾಳೆಂದಳು, ಎಷ್ಟೊಂದು ಅಸಭ್ಯ ಮಾತುಗಳನ್ನಾಡ್ತಾರೆ, ಅಲ್ವಾ ? ನಾನು ತಡೆದು ನಿಂತು ಅವಳನ್ನು ಪ್ರಶ್ನಿಸಿದೆ, ನೀನು ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ತೀಯ ? ಜಮುನಾ ಉತ್ತರಿಸಲಿಲ್ಲ. ಅವಳ ಮುಖ ನೋಡಿದರೆ ಅವಳದನ್ನ ಮನಸ್ಸಿಗೆ ಹಚ್ಚಿಕೊಳ್ತಾಳೆ ಅಂತ ಅನ್ನಿಸಿತು. ಅದನ್ನ ನೋಡಿ ನನ್ನ ಮೈ ಉರಿದು ಹೋಯಿತು. ಆ ಪುಂಡು ಹುಡುಗರ ತಲೆ ಒಡೆದು, ಚೆಂಡಾಟವಾಡಬೇಕೆಂದು ಪ್ರಬಲವಾದ ಇಚ್ಛೆಯಾಯಿತು. ಆ ಹುಡುಗರು ಬೇರೆ ಮಾತನ್ನಾಡುತ್ತ, ವಿರುದ್ಧ ದಿಕ್ಕಿನಲ್ಲಿ ನಡೆದು ಹೋಗಿ ಬಿಟ್ಟರು. ಅಷ್ಟರಲ್ಲೇ ಅವರು ನಮ್ಮನ್ನು ನೋಡಿ ಏನು ಕುಹಕದ ಮಾತು ಹೇಳಿದ್ದರೆನ್ನುವುದೇ ಅವರು ಮರೆತು ಬಿಟ್ಟಂತಿದ್ದರು. ಅವರುಗಳ ಸ್ವಭಾವವೇ ಹಾಗೆ, ಎಲ್ಲಿ ಏನು ನಡೆಯುತ್ತಿದೆ ಎನ್ನುವುದೇ ತಿಳಿದಿರುವುದಿಲ್ಲ. ಹುಚ್ಚರಂತೆ, ಮನಸ್ಸಿಗೇನು ಬರುತ್ತೋ ಹೇಳುತ್ತಲಿರುತ್ತಾರೆ. ಆದರೆ ಅಂಥವರ ಸಂಖ್ಯೆಯೇ ಹೆಚ್ಚು. ಸ್ವಲ್ಪ ಸಾಹಸದ ಅಭಾವ ಹಾಗೂ ಯಾವೊಂದು ನಾಟಕೀಯ ಪ್ರಸಂಗಕ್ಕೂ ಸಿಕ್ಕಿ ಹಾಕಿಕೊಳ್ಳಲಿಚ್ಛಿಸದೆ ನಾನು-ಅವರೊಂದಿಗೆ ಸಿಕ್ಕಿ ಹಾಕಿಕೊಳ್ಳಲಿಲ್ಲ. ಪುನಃ ಮನಸ್ಸಿನ ಸ್ವಾಸ್ಥ್ಯವನ್ನು ಹಿಂತಿರುಗಿ ಪಡೆದು, ಜಮುನಾಳ ಹತ್ತಿರ ಸರಿದು ನಡೆಯುತ್ತಲೇ, ಒಂದು ವಿಷಯವನ್ನು ತಿಳಿದುಕೊಳ್ಳುವ ಕುತೂಹಲವಾಯಿತು ನನಗೆ. ನಾನು ಅವಳನ್ನು ಪಿಸುಮಾತಿನಲ್ಲಿ ಕೇಳಿದೆ, ಜಮುನಾ ನಿನ್ನನ್ನು ಎಂದಾದರು, ಯಾರಾದರೂ ಚುಂಬಿಸಿದ್ದಾರೆಯೆ ?

ಜಮುನಾ ಮುಖವೆತ್ತಿ ಹೇಳಿದಳು, ಹೋಗಿ, ನೀವೊಬ್ಬರು.

ಹೇಳು, ಯಾಕೆ ನಾಚಿಕೆ ?

ಹೋಗಿ, ನೀವು, ಇದೆಲ್ಲ ಏನು ?

ನಾನವಳ ತೀರಾ ಸಮೀಪಕ್ಕೆ ಸರಿದು ಹೇಳಿದೆ, ಹೇಳಿದ್ರೆ ಏನೂ ಆಗೋದಿಲ್ಲ. ಅವಳ ಮುಖ ನಾಚಿಕೆಯಿಂದ ಕೆಂಪಾಗಿ ಬಿಟ್ಟಿತ್ತು. ವಿಶಿಷ್ಟ ಭಂಗಿ ಮಾಡಿ ಅವಳೆಂದಳು, ಬೇಡ ಬಿಡಿ

ನಾನು ಪುನಃ ಕೇಳಿದೆ, ಹೇಳು, ಇದರಲ್ಲಿ ನಾಚಿಕೆ ಏನಿದೆ ?

ಬೇಡ, ಹೂಂ ಹೂಂ.

ಯಾರು ?

ತಪನ್‌ದಾ.

ಇನ್ನ್ಯಾರಾದರೂ.

ಇನ್ನ್ಯಾರೂ ಇಲ್ಲ.

ಇಲ್ಲ, ಇಲ್ಲ. ಇದರಲ್ಲಿ ಅವನದೇನು ತಪ್ಪಿಲ್ಲ. ನೀನು ತುಂಬಾ ಒಳ್ಳೇ ಹುಡುಗಿ.

ಜಮುನಾ ನಗುತ್ತ ಹೇಳಿದಳು, ನೀವು ಅಂದುಕೊಂಡಷ್ಟಂತೂ ಖಂಡಿತವಾಗಿಯೂ ಅಲ್ಲ.

ನಾನವಳ ಭುಜ ತಟ್ಟಿ ಹೇಳಿದೆ, ಬುಲ್‌ಬುಲ್, ನಾನು ಕೂಡಾ ನಿನ್ನನ್ನು ಆ ತರಹ ತುಂಬಾ ಒಳ್ಳೆಯ ಹುಡುಗಿ ಅಂತ ಅಂದುಕೊಂಡಿಲ್ಲ. ನೀನು ಬೇರೆಯೇ ತರದ ಹುಡುಗಿ.

ಸಂಗೀತದಲ್ಲಿ ನನಗೇನು ಅಷ್ಟೊಂದು ಆಸಕ್ತಿ ಇಲ್ಲ. ನಾನಂದುಕೊಳ್ತೇನೆ, ಜಮುನಾ ರವೀಂದ್ರ ಸಂಗೀತ ಕಲಿಯದಿದ್ದರೆ, ಆಕಾಶವೇನೂ ಕಳಚಿ ಬೀಳೋದಿಲ್ಲ. ಹಾಗೇ ಅವಳನ್ನು ಸಂಗೀತ ಶಾಲೆಗೆ ಹೋಗುವ ದಾರಿಯಿಂದ ಹಾರಿಸಿಕೊಂಡು ಹೋಗತೊಡಗಿದೆ. ಇದೇ ತರಹ ಅವಳನ್ನು ಒಂದು ದಿನ ಅವಳ ಮಧ್ಯಾಹ್ನದ ಕಾಲೇಜಿನಿಂದ ತಪ್ಪಿಸಿ, ಅಡ್ಡಾಡಲು ಅವಳನ್ನು ಬೈರಕ್‌ಪುರ್‌ಗೆ ಕರೆದುಕೊಂಡು ಬಂದೆ. ಜಮುನಾಳಿಗೆ ಭಯಗಿಯ ಒಂದೂ ಇಲ್ಲ. ಈ ತರಹ ಕಣ್ತಪ್ಪಿಸಿ, ಅಡ್ಡಾಡುವುದರಲ್ಲಿ ಅವಳು ಒಂದು ರೀತಿಯ ಆನಂದಹೊಂದಿ, ಅವಳು ಉತ್ಸಾಹಿತಳಾಗುತ್ತಾಳೆ. ಅವಳ ಚಂಚಲ ನಗು, ಸಂತಸ ಪದ್ಯದ ಛಂದಸ್ಸಿನಂತೆ. ಅವಳ ಮಾತುಕತೆ ನನ್ನನ್ನು ದಿನನಿತ್ಯ ಮುಗ್ಧನನ್ನಾಗಿ ಮಾಡುತ್ತಿತ್ತು. ಪ್ರಪಂಚದ ಯಾವ ವಿಷಯವನ್ನು ಕೇಳಲೂ ಅವಳು ಭಯ ಪಡುತ್ತಿರಲಿಲ್ಲ. ಯಾವ ವಸ್ತುವಿನ ಬಗೆಗೇ ಆಗಲಿ ಅವಳು ಮೊದಲಿನಿಂದಲೂ, ಅದು ಕೆಟ್ಟದು ಅಥವಾ ಇದು ಒಳ್ಳೆಯದೆಂದು ಮೊದಲೇ ಅಭಿಪ್ರಾಯವನ್ನು ಮೂಡಿಸಿಕೊಂಡಿರುವುದಿಲ್ಲ. ಆದರೆ ಒಮ್ಮೊಮ್ಮೆ ಬಹಳ ಆಶ್ಚರ್ಯಚಕಿತಳಾಗಿ ಅಬ್ಬಾ, ನಿಜವಾಗಿಯೂ, ಅಂತ ಕಣ್ಣರಳಿಸ್ತಾಳೆ. ಒಂದು ದಿನ ನಾನವಳಿಗೆ ನೂರ್‌ಜಹಾನಳ ವಿಷಯ ತಿಳಿಸಿದೆ. ಆದರೆ ನೂರ್‌ಜಹಾನಳ ವ್ಯವಹಾರವನ್ನು ಅವಳು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಅವಳು

ಆಶ್ಚರ್ಯದಿಂದ ಕೇಳಿದಳು, ಆಕೆ ಏಕೆ ಮಗುವನ್ನು ಬಿಟ್ಟು ಹೋಗಿದ್ದಳು ? ನಾನೆಂದೆ, ಅದೇ ಈಗ ಪೀಕಲಾಟಕ್ಕೆ ಬಂದಿರೋದು. ಜಮುನಾಳೆಂದಳು, ಒಮ್ಮೆ ಮದುವೆ ಮಾಡಿಕೊಂಡು, ಪುನಃ ಇನ್ನೊಮ್ಮೆ ಮದುವೆ ಮಾಡಿಕೊಳ್ಳಬಹುದೇ ? ಹೌದು, ಕ್ರಿಶ್ಚಿಯನ್‌ನವರು ಆ ರೀತಿ ಮಾಡಿಕೊಳ್ತಾರೆ ಅಂತ ಕೇಳಿದ್ದೀನಿ.

ಈ ನಡುವೆ ಎಲ್ಲ ಕಡೆಯೂ ನಡೆಯುತ್ತೆ.

ಸರಿ ಮದುವೆಯಾದ್ರೇನೇ ಮಕ್ಕಳು ಮರಿ ಆಗೋದು ಅಲ್ವೆ ? ಹಾಗಾದ್ರೆ ಪುನಃ ಮದುವೆ ಮಾಡಿಕೊಂಡಳು. ಮತ್ತೆ ಮಕ್ಕಳು ಯಾಕೆ ಆಗಲಿಲ್ಲ ?

ಆ ಮಾತಿಗೆ ಜಮುನಾ ಉತ್ತರ ತಿಳಿದುಕೊಳ್ಳೋದು, ಉಚಿತವೋ, ಅನುಚಿತವೋ ಎಂದು ನಾನು ಒಂದರೆಕ್ಷಣ ಯೋಚಿಸಿದೆ. ಆನಂತರ ಮನಸ್ಸಿಗನ್ನಿಸಿತು, ಅದರ ಬಗ್ಗೆ ಹೇಳೋದು ಬೇಡ.

ನಾನೆಂದೆ, ಆ ತರಹ ಆಗತ್ತೆ. ಆದರೆ ಅವಳಿಗಿನ್ನೂ ಮಕ್ಕಳಾಗಿಲ್ಲ. ಜಮುನಾಳೆಂದಳು, ಅವಳಿಗಿನ್ನೊಂದು ಮಗುವಾಗಿದ್ದಿದ್ದರೆ, ಈ ಮೊದಲಿನ ಮಗುವಿಗೋಸ್ಕರ ಅವಳು ಬರ್ತಿದ್ದಳೇ ?

ಈ ಪ್ರಶ್ನೆ ತೀರಾ ಕ್ಲಿಷ್ಟವಾದದ್ದು. ತುಂಬಾ ಯೋಚಿಸದೆ ನಾನೆಂದೆ, ಯಾರಿಗೆ ಗೊತ್ತು ?

ಜಮುನಾಳ ಒಡನಾಟದಿಂದಾಗಿ, ನನ್ನ ಮನಸ್ಸು ಕ್ರಮೇಣ ಹಗುರವಾಗ ಲಾರಂಭಿಸಿತು. ಬಹಳ ದಿನಗಳ ನಂತರ ಸರಳ ಸಂತೋಷವನ್ನು ಹೊಂದ ಲಾರಂಭಿಸಿದೆ. ಜಮುನಾ ನನ್ನ ಮಾತಿಗೆ ಆಶ್ಚರ್ಯಪಡುವುದನ್ನು ಕಂಡಾಗ, ನನಗನ್ನಿಸಲಾರಂಭಿಸಿತು – ಪ್ರಪಂಚದಲ್ಲಿ ನನ್ನಲ್ಲೂ ಆಶ್ಚರ್ಯಗೊಳಿಸುವ ವಸ್ತುವಿದೆ ಎಂದಾಯಿತು. ಈ ನಡುವೆ ನಾನು ಮೆಟ್ಟಿಲಿಳಿಯುವಾಗ, ಒಮ್ಮೆಗೇ ಮೂರ್ನಾಲ್ಕು ಮೆಟ್ಟಿಲುಗಳನ್ನು ಹಾರಿಕೊಂಡು ಇಳಿಯುತ್ತೇನೆ. ಟ್ರಾಮ್, ಬಸ್‌ಗಳಲ್ಲಿ ಅಷ್ಟೊಂದು ಜನಸಂದಣಿ ಇದ್ದರೂ, ಆದರಿಂದ ನನಗೇನೂ ಕೋಪವುಂಟಾಗುವುದಿಲ್ಲ. ಅಷ್ಟೇ ಅಲ್ಲ, ದೇಶದ ಆಹಾರ ಸಮಸ್ಯೆ ಸದ್ಯದಲ್ಲೇ ಕೊನೆಗೊಳ್ಳಬಹುದೆಂದು ನನಗನ್ನಿಸುತ್ತೆ. ಒಮ್ಮೊಮ್ಮೆ ಮಳೆ ಬಿದ್ದಾಗ, ಈ ದಿನ ಬಹಳ ಸುಂದರ ಅಂತ ಮನಸ್ಸಿಗನ್ನಿಸುತ್ತೆ, ಕೆಲವೊಮ್ಮೆ ತುಂಬಾ ಬಿಸಿಲಿದ್ದಾಗಲೂ, ಈ ನಡುವೆ, ಬೆಳಗಿನ ಹೊತ್ತು ತುಂಬಾ ಸುಂದರವೆಂದೆನಿಸತೊಡಗಿದೆ.

ಈಗೀಗ ನಾನು ಜಮುನಾಳ ಕೈಹಿಡಿದುಕೊಳ್ಳುತ್ತೇನೆ, ಅಷ್ಟೆ. ಅವಳ ಶರೀರವನ್ನಲ್ಲ. ಬೈರಕ್‌ಪುರದಲ್ಲಿ ಏಕಾಂತತೆಯಲ್ಲೂ ನಾನವಳನ್ನು ಚುಂಬಿಸುವುದಿಲ್ಲ. ಮ್ಯಾಜಿಷಿಯನ್ನರ ತರಹ ಕೇವಲ ನಾನು ಅವಳೆದುರು ಕೈ ಸುತ್ತುತ್ತಿರುತ್ತೇನೆ. ಆದರೆ ಅವಳನ್ನು ಮುಟ್ಟೋದಿಲ್ಲ. ಅವಳ ತಪನ್‌ದಾ ಅವಳನ್ನು ಚುಂಬಿಸಲಿ. ಅವಳ ತಪನ್‌ದಾ ಈಜು ಕಲಿಸುವ ನೆಪದಲ್ಲಿ, ಸ್ವಿಮ್ಮಿಂಗ್ ಕ್ಲಬ್‌ಗೆ ಕರೆದುಕೊಂಡು ಹೋಗಿ ಅವಳ ಮಾಟವಾದ ಎದೆಯನ್ನು ನೋಡಲಿ. ನನಗೆ ಅದರ ಅಗತ್ಯವಿಲ್ಲ. ಜಮುನಾಳಿಗೆ ಎಂದೂ ಗೊತ್ತಾಗೋದೇ ಇಲ್ಲ. ಅಚೇತನ ಭಾವದಿಂದ, ಸಹಜವಾಗಿ ನನ್ನ ಹತ್ತಿರ ಬರಲು ಕಾರಸ್ಥಾನ ರಚಿಸುತ್ತಲೇ ಇರುತ್ತೆ. ಆದರೆ ನಾನು ಎಣ್ಣೆ ನೀರು

ಯಾವ ರೀತಿ ಹೊಂದಿಕೊಳ್ಳುವುದಿಲ್ಲವೋ ಆ ರೀತಿ ಅದರೊಂದಿಗೆ ಬೆರೆಯುವುದಿಲ್ಲ. ಪುರುಷರ ಶರೀರದಲ್ಲಿ ಅಹಂಕಾರವಿದೆ. ಆದರೆ ಆತ್ಮಘಾತದ ಬೀಜವಿಲ್ಲ. ಹೆಂಗಸರ ಶರೀರದಲ್ಲಂತೂ ವಿಪರೀತ ಅವಾಂತರ. ಆದರೂ ರಾಮಕೃಷ್ಣರ ಒಂದು ಮಾತು ನನಗೆ ನೆನಪಾಗುತ್ತದೆ. ಶ್ರೀರಾಮಕೃಷ್ಣರು, ವಿವೇಕಾನಂದರ ಕುರಿತು ಹೇಳಿದ್ದರು, ಅವನ್ಯಾರು ಅನ್ನೋದು ಸ್ವತಃ ಅವನಿಗೇ ತಿಳಿದಿಲ್ಲ. ಎಂದು ಅವನಿಗದು ತಿಳಿಯುತ್ತೋ, ಆಗ ಅವನು ಮನುಷ್ಯರ ನಡುವೆ ಇರೋದಿಲ್ಲ. ಅದೇ ತರಹ ನನ್ನ ಮನಸ್ಸಿಗನಿಸುತ್ತೆ, ಹೆಂಗಸರು ಮೊದಲು ತಮ್ಮ ಶರೀರದ ಬಗ್ಗೆ ಏನೂ ಅರಿತಿರುವುದಿಲ್ಲ. ಎಂದು ಅವರು ಅರಿಯುತ್ತಾರೋ ಅಂದೇ, ದೇವಿತ್ವವನ್ನು ತ್ಯಜಿಸಿ, ಕೇವಲ ಹೆಂಗಸಾಗಿ ಉಳಿದು ಬಿಡುತ್ತಾರೆ. ಅನೇಕ ಹೆಂಗಸರನ್ನು ಕಂಡಿದ್ದಾಗಿದೆ. ಈ ಸಲ ಕೆಲವು ದಿನ ದೇವ ಸಂಪರ್ಕದಿಂದ ಆತ್ಮವನ್ನು ಶುದ್ಧಪಡಿಸಿಕೊಳ್ಳಬೇಕು. ಅದು ಎಷ್ಟು ದಿನ ಸಾಧ್ಯವಾಗುತ್ತೋ ಏನೋ.

ಆದರೆ ಜೀವನ ಬಹಳ ಜಟಿಲ. ನಾವು ಯಾವ ರೀತಿ ಅಥವಾ ಯಾವುದನ್ನು ಇಚ್ಛಿಸುತ್ತೇವೆಯೋ, ಅದನ್ನೇ ನಾವು ಪಡೆಯುವುದು. ಅದರಲ್ಲಿ ಸಂಶಯವೇ ಇಲ್ಲ. ಬೇರಲ್ಲೋ, ಎಷ್ಟೋ ಜನರ ಪ್ರಾಪ್ತಿಯ ಬಗ್ಗೆ ನಾನು ಯೋಚಿಸುವುದಿಲ್ಲ. ಏನೇನು ಮಾಡಿದ್ದೆವೋ ಅದರ ಒಳ್ಳೆಯದು ಕೆಟ್ಟದ್ದರ ಬಗ್ಗೆ ವಿಚಾರ ಮಾಡಬಹುದು. ಆದರೆ ಯಾವುದನ್ನು ಮಾಡಿಲ್ಲವೋ ಅದರ ಬಗ್ಗೆ ಎಂದೂ ಯೋಚಿಸಲು ಸಾಧ್ಯವಿಲ್ಲ.

ಒಂದು ದಿನ ಹುಲ್ಲಿನ ಮೇಲೆ ಕಾಲು ಚಾಚಿಕೊಂಡು ಕುಳಿತು ಜಮುನಾ ಹೇಳಿದಳು, ಸುನೀಲ್‌ದಾ, ನೀವು ನನ್ನನ್ನು ಪ್ರೀತಿಸ್ತೀನಿ ಅಂತ ಹೇಳಿದ್ದಿರಿ. ಖಂಡಿತವಾಗಿಯೂ ಅದು ನಿಜವಲ್ಲ.

ನಾನು ಆ ಮಾತು ಕೇಳಿ ಥಟ್ಟನೆ ಆಶ್ಚರ್ಯಗೊಂಡು ಕೇಳಿದೆ, ಏಕೆ ?

ನನಗೆ ನೀವು ಒಂದು ಪತ್ರವನ್ನೂ ಬರೆದಿಲ್ಲ.

ಪತ್ರ ಯಾಕೆ ಬರೀಬೇಕು ? ದಿನ ಬಿಟ್ಟು ದಿನ ನಿನ್ನನ್ನ ನೋಡೇ ನೋಡ್ತೀನಿ, ಅಂದ ಮೇಲೆ ಪತ್ರವೇಕೆ ?

ಆದರೆ, ತಪನ್‌ದಾ ನನಗೆ ಪತ್ರ ಬರೀತಾನೆ, ಇಲ್ಲಿ ನೋಡಿ.

ಎರಡು ಮೂರು ಆಂಗ್ಲ ಶಬ್ದವನ್ನು ಬಳಸಿದ್ದಾನೆ. ಆದರೆ ಪತ್ರವನ್ನು ತಪನ್ ಚೆನ್ನಾಗಿಯೇ ಬರೆದಿದ್ದಾನೆ. ತುಂಬಾ ಆವೇಗದಿಂದ ಬರೆಯುವಾಗ ಒಂದೆರಡು ಕಡೆ ತಪ್ಪಾಗಿದೆ. ಪತ್ರವನ್ನು ಓದಿ ನಾನು ನಗು ಮುಖದಿಂದ, ಜಮುನಾಳ ಕಡೆ ದಿಟ್ಟಿಸಿದೆ.

ಬಹಳ ಯೋಚನೆ ಮಾಡುವವಳಂತೆ ಜಮುನಾ, ಹುಬ್ಬು ಕೊಂಕಿಸಿ, ಹೇಳಿದಳು, ನಾನೀಗ ಏನು ಮಾಡಲಿ ಹೇಳಿ ನೋಡೋಣ.

ಅವಳ ಎಳೆ ಮುಖದಲ್ಲಿ ಆ ರೀತಿಯ ಯೋಚನೆಯ ಭಾವ ಕಂಡು ನಿಜವಾಗಿಯೂ ನನಗೆ ನಗು ಬಂತು. ನಾನು ಬೆರಳಿನಿಂದ, ಅವಳ ಹುಬ್ಬನ್ನು ತೀಡಿ ಹೇಳಿದೆ, ಬುಲ್‌ಬುಲ್ ನೀನೀಗ ಏನೂ ಯೋಚಿಸಬೇಕಾಗಿಲ್ಲ. ನಿನಗೆ ಇನ್ನೂ ಪ್ರೀತಿ ಮಾಡುವುದು ಅವಶ್ಯಕ. ನನ್ನೊಬ್ಬನಿಂದ ಎಷ್ಟೂಂತ ಸಾಧ್ಯ ? ಇನ್ನೂ ಅನೇಕರು ನಿನ್ನನ್ನು ಪ್ರೀತಿಸಲಿ. ಆದರೆ ನನಗೆ ಕೇವಲ ನೀನೊಬ್ಬಳೆ ಬೇಕು. ನನ್ನಲ್ಲಿ ಎಷ್ಟೋ

ಖರ್ಚಾಗಿ ಬಿಟ್ಟಿದೆ. ಜಮುನಾ ಪುನಃ ಅದೇ ತರಹ ನೋಡಿ ನಕ್ಕಳು. ನಂತರ ಮುಖ ಕೆಳಗೆ ಮಾಡಿ ಹೇಳಿದಳು, ಊಹೂಂ, ಇನ್ನು ಮುಂದೆ ನಾನು ಯಾರನ್ನೂ ಪ್ರೀತಿಸಲು ಸಾಧ್ಯವಿಲ್ಲ. ಯಾರ ಬಳಿಯೂ ಸ್ವಂತ ವಿಷಯವನ್ನು ಹೇಳಲು ಸಾಧ್ಯವಿಲ್ಲ. ಆದರೆ ನಿಮಗೆ ಹೇಳ್ತಾ ಇದೀನಿ. ನೀವು ಪ್ರೀತಿಯ ಬಗ್ಗೆ ತಲೆ ಕೆಡಿಸಿಕೊಳ್ಳಬೇಡಿ.

ಚೋಟುದ್ದದ ಬಾಯಲ್ಲಿ ಪ್ರೀತಿಯ ಬಗ್ಗೆ ಮಾತು ತೀರಾ ಅಪ್ಯಾಯಮಾನವಾಗಿ ಕಾಣುತ್ತೆ.

ಪುನಃ ನನ್ನನ್ನು ಚೋಟುದ್ದ ಹುಡುಗಿ ಅಂತ ಕರೀಬೇಡಿ, ಹೇಳಿದೀನಿ.

ಓ, ಏನು ದೊಡ್ಡವಳಾಗೋದಿಲ್ಲ ಅಂತ ಅನುಮಾನವೇ ? ದೊಡ್ಡವಳಾದ ಮೇಲೆ ನೋಡುವಿಯಂತೆ, ಚೋಟುದ್ದ ಹುಡುಗಿಯಾಗಿರೋಕೆ ಪ್ರಯತ್ನಿಸ್ತೀಯಾ, ನಿನ್ನ ಅಕ್ಕನ ತರಹ. ಜಮುನಾ ಯಾವೊಂದು ಕಪಟವಿಲ್ಲವೆ, ಜೋರಾಗಿ ನಗುತ್ತ ಹೇಳಿದಳು, ನಿಜವಾಗಿಯೂ ಅಕ್ಕ ಅದೇ ತರಹ. ಮನೆಯಿಂದಂತೂ ಹೊರ ಹೊರಡೋಕಾಗೋಲ್ಲ. ಅದಕ್ಕೆ ಇಡೀ ದಿನ, ಸುಮ್ಮನೆ ಟೆಲಿಫೋನ್ ಮಾಡ್ತಾ ಇರ್ತಾಳೆ. ಬೇರಿನ್ನೇನು, ಬರೀ ಹೊಲಸು ಮಾತು.

ಯಾರಿಗೆ ಟೆಲಿಫೋನ್ ಮಾಡ್ತಾಳೆ ?

ಅವಳ ಎಲ್ಲ ಸ್ನೇಹಿತೆಯರಿಗೆ. ನನಗದು ಇಷ್ಟವಾಗೋದಿಲ್ಲ. ಒಮ್ಮೊಮ್ಮೆ ನನ್ನ ಬಗ್ಗೆ ಅಪ್ಪನ ಹತ್ತಿರ ಚಾಡಿ ಹೇಳ್ತಾಳೆ.

ಏನಂತ ಚಾಡಿ ಹೇಳ್ತಾಳೆ.

ಯಾರಿಗೆ ಗೊತ್ತು ? ಸುನೀಲ್‌ದಾ ನಾನು ಅಕ್ಕನ ತರಹ ಖಂಡಿತವಾಗಿಯೂ ಆಗೋದಿಲ್ಲ.

ನಾನು ಅವಳನ್ನು ಸಂಪೂರ್ಣವಾಗಿ ಪ್ರೀತಿಪೂರ್ವಕವಾಗಿ ದಿಟ್ಟಿಸಿ ಹೇಳಿದೆ, ನೀನು ಯಾವ ತರಹ ಇದ್ದೀಯೋ ಅದೇ ತರಹಾನೇ ಇದ್ದು ಬಿಡು.

ಬೇಕೆಂದೇ ನಾನು ಕೆಲವು ದಿನಗಳಿಂದ ನನ್ನ ಸ್ನೇಹಿತರುಗಳಿಂದ ಕಣ್ ತಪ್ಪಿಸಿಕೊಳ್ಳುತ್ತಿದ್ದೆ. ಸುವಿಮಲ ಹಾಗೂ ಅವಿನಾಶನಿಂದ ತಪ್ಪಿಸಿಕೊಳ್ಳುವ ಸಲುವಾಗಿ, ಪ್ರತಿ ದಿನ ನಾನು ಹೊಸ ಹೊಸ ಯುಕ್ತಿಯನ್ನು ಹುಡುಕಬೇಕಾಗುತ್ತಿತ್ತು. ಶೇಖರ, ವೀಣಾ ಹಾಗೂ ನೂರ್‌ಜಹಾನಳ ಜೊತೆ ಏನು ಹಗರಣ ಮಾಡಿಕೊಂಡಿದಾನೋ ಏನೋ ? ಅದರ ಬಗ್ಗೆ ನನಗೊಂದಿಷ್ಟೂ ಕುತೂಹಲವೆನಿಸೋದಿಲ್ಲ. ಒಂದು ದಿನ ಪಾರಿತೋಷನನ್ನು ಅಕಸ್ಮಾತ್ ಕಂಡಿದ್ದೆ. ರಸ್ತೆಯಲ್ಲಿ ವಿದ್ಯಾರ್ಥಿಗಳ ಮೆರವಣಿಗೆಯ ಗುಂಪಿನಲ್ಲಿದ್ದವನು ನನ್ನನ್ನು ಕಂಡು ಮೆರವಣಿಗೆಯಿಂದ ಹೊರಬಂದು ಮಾತನಾಡಿಸಿದ್ದ. ಮುಖದಲ್ಲಿ ಅದೇ ಎಕನಾಮಿಕ್ಸ್ ವಿದ್ಯಾರ್ಥಿಗಿರುವ ಸಹಜವಾದ ಅಹಂಕಾರ, ತನ್ನ ಅಸ್ತಿತ್ವದಿಂದ ಪೃಥ್ವಿಗೇ ಉಪಕಾರ, ಇತರರು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ ಎನ್ನುವ ಮನೋಭಾವನೆ. ಜಾರುತ್ತಿದ್ದ ಕನ್ನಡಕವನ್ನು ಸರಿ ಮಾಡಿಕೊಳ್ಳುತ್ತ ಪಾರಿತೋಷ ಹಿಂದಿನಂತೇ, ಅಭಿಮಾನ ತುಂಬಿದ ದನಿಯಲ್ಲಿ

ಹೇಳಿದ, ಸುನೀಲ್‌ದಾ, ಒಂದು ಮುಖವಾಡ ಕೊಂಡು ಧರಿಸಲು ಅಣ್ಣನಿಗೆ ಹೇಳಿ. ನಾನು ಕಷ್ಟಪಟ್ಟುಕೊಂಡು ನಕ್ಕು ಹೇಳಿದೆ, ಏಕೆ? ಶೇಖರನಿಗೆ ಈ ಸಲ ಏನಾಯಿತು?

ಪಾರಿತೋಷನೆಂದ, ಅಣ್ಣ ಮನೇನಲ್ಲಿ ಅಸ್ವಾಮಿಗೆ ಸುತ್ತಾಡಲು ಹೋಗ್ತಾ ಇದೀನಿ ಅಂತ ಹೇಳಿದ್ದ. ಆದರೆ ಮೊನ್ನೆ ಗಣೇಶ ಅವೆನ್ಯೂನಲ್ಲಿ ಅಣ್ಣ ಒಂದು ಟ್ಯಾಕ್ಸಿಯಲ್ಲಿ ಹೋಗ್ತಾ ಇರೋದನ್ನ ಕಂಡೆ. ಜೊತೆಗೆ ಒಬ್ಬ ಸಾಬರ ಹೆಂಗಸೂ ಇದ್ದಂತಿತ್ತು. ನಾನು ಅವನನ್ನು ನನ್ನ ಸ್ವಂತ ಕಣ್ಣುಗಳಿಂದಲೇ ಕಂಡಿದ್ದೇನೆ.

ನಾನು ಅವನನ್ನು ಗದರಿಸಿದೆ, ನಿಮ್ಮಣ್ಣ ಏನು ಮಾಡ್ತಾನೆ ಇಲ್ಲ ಅನ್ನೋದರ ವರದಿ ನನಗ್ಯಾಕಯ್ಯ ತಂದೊಪ್ಪಿಸ್ತಾ ಇದೀಯ? ನಾನು ಅದಕ್ಕೆಲ್ಲ ಹೊಣೇನೇ?

ಇಲ್ಲ, ನೀವು ಅಮ್ಮನಿಗೆ ಏನೇನೋ ಮಾತು ಕೊಟ್ಟು ಬಂದಿದೀರಾ ಅಂತ ಕೇಳಿದೆ.

ನಾನು ಏನು ಮಾತು ಕೊಟ್ಟಿದೀನೋ ಅದರಂತೆ ಮಾಡ್ತೀನಿ. ನೀನು ಅದರಲ್ಲೆಲ್ಲ ತಲೆ ಹಾಕೋ ಅಗತ್ಯವಿಲ್ಲ.

ಪಾರಿತೋಷ ಹೆಚ್ಚು ಮಾತನಾಡದೆ, ದಾಪುಗಾಲು ಹಾಕುತ್ತ ಪುನಃ ಮೆರವಣಿಗೆಯಲ್ಲಿ ತನ್ನ ಸ್ಥಾನವನ್ನು ಸೇರಿ, ಜೋರಾಗಿ ಘೋಷಣೆಯನ್ನು ಕೂಗಲಾರಂಭಿಸಿದ.

ಪಾರಿತೋಷನಿಂದ ಉಂಟಾದ ಮನದ ಕಳಕವಳವನ್ನು ದೂರ ಮಾಡಿಕೊಳ್ಳಲೆಂದು ನಾನು ಜಮುನಾಳನ್ನು ಕಾಣಲು ಹೊರಟೆ. ಕಳವಳ, ಗಲಾಟೆ, ನೋವು, ತಥ್ ನಾನು ಇವುಗಳಿಂದ ಬದುಕುಳಿಯಬೇಕು. ನಾನು ಸಂಗೀತ ಶಾಲೆ ಎದುರು ಜಮುನಾಳನ್ನು ಕಂಡು, ಅವಳನ್ನು ಕರೆದುಕೊಂಡು, ನೇರವಾಗಿ ಒಂದು ಟ್ಯಾಕ್ಸಿ ಹಿಡಿದು ಗಂಗೆಯ ದಡಕ್ಕೆ ಹೊರಟು ಬಂದೆ. ಎಲ್ಲಿ ಕೈ ಬಿಟ್ಟು ಬಿಡ್ತಾಳೋ ಏನೋ ಎಂದು ಗಟ್ಟಿಯಾಗಿ ಅವಳ ಕೈ ಹಿಡಿದು ಮೆಟ್ಟಲಿಳಿಯುತ್ತ ಹೇಳಿದೆ, ಬಾ ಜಮುನಾ, ನಾವು ಕಣ್ಣುಮುಚ್ಚಾಲೆ ಆಟ ಆಡ್ತಿದೀವಿ. ತುಂಬಾ ಜನ ನಮ್ಮನ್ನು ಹುಡುಕ್ತಾ ಇದ್ದಾರೆ. ಅವರ ಕಣ್ಣು ತಪ್ಪಿಸಿ, ತಿರುಗುತ್ತಾ ಇದ್ದೇವೆ. ಜಮುನಾ ಪ್ರಶ್ನಿಸಿದಳು, ನೀವು ಯಾರನ್ನು ಹುಡುಕ್ತಾ ಇದೀರಾ? ಶಹರಿನ ಪ್ರತಿಯೊಬ್ಬನನ್ನೂ, ಗುಂಪಿನ ಪ್ರತಿಯೊಬ್ಬನನ್ನೂ ಈ ರೀತಿ ಪ್ರಶ್ನಿಸೋದು ಜಮುನಾಳಿಗೆ ತುಂಬಾ ಇಷ್ಟ. ಅವಳು ಪ್ರಶ್ನಿಸ್ತಿರುತ್ತಾಳೆ, ಮನೀಷ ಯಾರು? ಆಮೇಲೆ ಹೇಳ್ತೀನಿ ಅಂತ ಹೇಳಿದ್ದಿರಲ್ಲ? ನಾನು ಅವಳ ಜಡೆ ಎಳೆದು ಜಗ್ಗಿ ಹೇಳಿದೆ, ಅದನ್ನು ತಿಳಿದುಕೊಳ್ಳುವ ಕೆಟ್ಟ ಕುತೂಹಲ ಏಕೆ ಹುಡುಗಿ? ನೀನು ದೊಡ್ಡವಳಾಗಿ ಬಿಟ್ಟಿದೀಯ ಅಂತ ಕಾಣುತ್ತೆ. ಜಮುನಾ ಸಿಟ್ಟು ಮಾಡಿಕೊಂಡು ಹೇಳಿದಳು, ಕೂದಲಿಗೆ ಕೈಹಾಕ್ಬೇಡಿ. ಮೊದಲೇ ಹೇಳ್ತಿರ್ತೀನಿ, ವಿಪರೀತ ನೋವಾಗುತ್ತೆ. ಅವಳ್ಯಾರು ಅನ್ನೋದನ್ನ ಮೊದಲು ಹೇಳಿ. ನಾನೆಂದೆ, ಮನೀಷ ಕಲಕತ್ತೆಯ ಒಬ್ಬ ಹುಡುಗಿ. ಅವಳು ನನ್ನನ್ನು ಆತ್ಮೀಯನನ್ನಾಗಿ ಮಾಡಿಕೊಳ್ಳ ಬಯಸಿದ್ದಳು. ಆದರೆ ಅವಳು ನನಗೆ ನನ್ನ ಮನದ ಇಂಗಿತವನ್ನು ಹೇಳಲು ಅವಕಾಶವನ್ನೇ ಕೊಡಲಿಲ್ಲ. ಈ ಊರಿನ ಜನರೇ ಈ ರೀತಿ. ಸದ್ಯ ನಿನ್ನನ್ನು ನಾನು ಪಡೆದುಕೊಂಡೆ. ಜಮುನಾ ನನ್ನ ಕೈಗಳನ್ನು ಹಿಡಿದುಕೊಳ್ಳ

ಬಯಸಿದಳು. ಅವಳ ಶರೀರ ವಿಪರೀತ ಬಿಸಿಯಾಗಿತ್ತು. ನಾನು ಅದೇ ಕ್ಷಣದಲ್ಲಿ ಸಿಗರೇಟು ಕೊಂಡು ಕೊಳ್ಳುವ ನೆಪದಿಂದ ಅವಳಿಂದ ದೂರ ಸರಿದು ಹೋದೆ. ಆನಂತರ ದೂರ ನಿಂತು ಅವಳನ್ನು ವೀಕ್ಷಿಸಿದೆ. ಅವಳ ಮುಖದಲ್ಲಿ ಒಂದು ರೀತಿಯ ಅನಿರ್ವಚನೀಯ ಆಸೆ ಭುಗಿಲೆದ್ದಿತ್ತು. ಈ ಸಮಸ್ಯೆಯನ್ನು ಹೇಗೆ ಎದುರಿಸೋದು ? ನನಗರ್ಥವಾಗಲಿಲ್ಲ. ಜಮುನಾಳನ್ನು ಪ್ರೀತಿಸುವ ನೆಪದಲ್ಲಿ ನಾನು ಶಾರೀರಿಕ ಪ್ರೀತಿಯನ್ನು ಅಪೇಕ್ಷಿಸಿದ್ದೆ. ಆದರೆ ಈಗಲೇ ಅದನ್ನು ಉಪಯೋಗಿಸಿಕೊಳ್ಳಲೇ ? ಹಿಂದೆ ಇತರರೊಡನೆ, ಶರೀರದ ಭಾಷೆಯಿಂದ ವ್ಯವಹರಿಸಿ ಕಂಡಿದ್ದೇನೆ. ಆನಂತರ ಬೇರಿನ್ಯಾವ ಭಾಷೆಯನ್ನೂ ಹುಡುಕಲಾಗಿಲ್ಲ. ತುಂಬಾ ಕದ್ದು ಮುಚ್ಚಿ ಮಾಡಬೇಕೆನ್ನಿಸುತ್ತೆ. ಈಗ ಬೇರೆ ಮಾತನಾಡುವ ಮೊದಲೇ, ಶರೀರದ ಭಾಷೆ ಮಾತನಾಡುವುದು ಉಚಿತವೇ ?

ಈಗ ಜಮುನಾಳನ್ನು ಏನು ಮಾಡಲಿ ? ನನಗೆ ಈಗ ಸಮಸ್ಯೆಯೂ ಇಲ್ಲ ಹಾಗೂ ನಶೆಯೂ ಇಲ್ಲ. ಎದೆಯಲ್ಲಿ ಪಾಪ ಭೀತಿಯೂ ಇಲ್ಲ. ಜಮುನಾ ನನಗೆ ಅಗಾಧವಾದ ಉಲ್ಲಾಸವನ್ನು ತಂದು ಕೊಟ್ಟಿದ್ದಾಳೆ. ಜಮುನಾಳಿಗೆ ಅರ್ಥವಾಗಲಿ, ಬಿಡಲಿ ಅವಳ ಕಣ್ಣ ಮುಂದೆ ಕುಳಿತು ಸದಾ ಮಾತನಾಡುತ್ತಿರಬಲ್ಲೆ. ಕೆಲವೊಮ್ಮೆ ಅಳುವಿನಿಂದ ಅವಳ ಕಣ್ಣು ಹನಿಗೂಡುತ್ತೆ. ಇನ್ನೊಮ್ಮೆ ನಗು ಚಿಮ್ಮಿ ಬರುತ್ತೆ. ಅವಳೆನ್ನುತ್ತಾಳೆ, ನೀವು ಬಿಡಿ ಎಲ್ಲಾ ಹುಟ್ಟಿಸ್ಕೊಂಡು, ಹುಟ್ಟಿಸ್ಕೊಂಡು ಮಾತ್ನಾಡ್ತೀರ. ಹೌದು. ಅದೇನೋ ಸತ್ಯವಾದದ್ದೇ. ನಾನು ಈಗಲೂ ಸ್ವಲ್ಪ ಹುಟ್ಟಿಸಿಕೊಂಡು ಹೇಳೋದೇ ಹೆಚ್ಚು ಅಥವಾ ಹೇಳೋದನ್ನೇ ಸ್ವಲ್ಪ ಉತ್ಪ್ರೇಕ್ಷೆ ಮಾಡಿ ಹೇಳ್ತೀನಿ. ಆದರೆ ಕ್ರಮೇಣ ಅದು ಸರಿ ಹೋಗಿ ಬಿಡುತ್ತೆ, ನಾನು ಒಳ್ಳೆಯವನಾಗಿ ಬಿಡುತ್ತೇನೆ. ಆದರೆ ಈ ತರಹ ತುಂಬಾ ದಿನ ನಡೆಯೋದಿಲ್ಲ. ನನ್ನ ಮನಸ್ಸಿಗನಿಸುತ್ತೆ – ಜೀವನ ಇದೇ ರೀತಿ ನಿಲ್ಲೋದಿಲ್ಲ.

ಒಂದು ದಿನ ನಾನು ಸಂಗೀತ ಶಾಲೆಯ ಎದುರು ನಿಂತಿದ್ದೆ. ಜಮುನಾಳ ಜೊತೆ ಸರಸ್ವತಿಯೂ ಬಸ್ಸಿನಿಂದಿಳಿದಳು. ಜಮುನಾಳ ಮುಖ ಭಯದಿಂದ ಬಾಡಿತ್ತು. ನನಗೋ ತಪ್ಪಿಸಿಕೊಂಡು ಹೋಗಲು ಸಮಯವಿಲ್ಲ. ಅಷ್ಟರಲ್ಲಿ ಜಮುನಾ ನನ್ನನ್ನು ನೋಡಿ ಬಿಟ್ಟಿದ್ದಳು. ಸರಸ್ವತಿ ಅಷ್ಟರಲ್ಲೇ ಹೇಳಿದಳು, ಏನು ಸಮಾಚಾರ ? ನೀವು ಇಲ್ಲಿ ? ಸುಮ್ಮನೆ ನಿಂತು ಎಲ್ಲಿ ಹೋಗಲಿ ಅಂತ ಯೋಚಿಸ್ತಾ ಇದೀನಿ ಎಂದೆ.

ಸರಸ್ವತಿ ಎಂದಳು, ನೀನು ಹೋಗು ಮುನ್ನಿ, ಸರಿಯಾಗಿ ಎಂಟು ಗಂಟೆಗೆ ಬಂದು ನಾನು ನಿನ್ನನ್ನು ಕರ್ಕೊಂಡು ಹೋಗ್ತೀನಿ.

ಜಮುನಾಳೆಂದಳು, ಅಮ್ಮ ನಿನ್ನನ್ನು ಮಾವನ ಮನೆಗೆ ಹೋಗು ಅಂತ ಹೇಳಿದ್ದಾಳೆ. ನೀನು ಸುದ್ದೀನ ಸರಿಯಾಗಿ ತಿಳಿಸಿ..... ಸರಸ್ವತಿ ಸಿಡುಕಿದಳು, ನೀನು ಹೋಗೇ, ನನಗದೆಲ್ಲಾ ಗೊತ್ತು. ಜಮುನಾ ಹೊರಟು ಹೋಗುತ್ತಲೇ ಸರಸ್ವತಿ ನನ್ನ ಕಡೆ ತಿರುಗಿ ಹೇಳಿದಳು, ನಡೀರಿ.

ನಾನು ಬೇಸರದಿಂದ ಕೇಳಿದೆ, ಎಲ್ಲಿಗೆ ?

ಎಲ್ಲಿಗಾದರೂ ಸರಿ ಸ್ವಲ್ಪ ಅಡ್ಡಾಡಿಕೊಂಡು ಬರೋಣ. ಪಾರ್ಕ್ ಸ್ಟ್ರೀಟ್‌ಗೆ ಹೋಗೋಣವೇ? ತುಂಬಾ ದಿನದಿಂದ ಎಸ್‌ಪ್ರೆಸ್ಸೋ ಕಾಫಿ ಕುಡಿದಿಲ್ಲ. ನೀವು ಇವತ್ತು ಕೊಡಿಸ್ತೀರಾ?

ನನ್ನ ಕುತ್ತಿಗೆಯನ್ನು ನಾನೇ ಹಿಚುಕಿಕೊಳ್ಳುವಂಥಾಯ್ತು. ಯಾಕಾದ್ರೂ ಮೊದಲು ಎಲ್ಲಿಗೆ ಅಂತ ಕೇಳಿದ್ನೋ ಏನೋ. ಅದಲ್ಲದೆ ನನಗೆ ಕೆಲ್ಸ ಇದೆ, ಟ್ಯಾಕ್ಸಿ ಕಾಯ್ತಾ ಇದೀನಿ ಅಂತಲಾದ್ರೂ ಹೇಳಬಾರದಿತ್ತೆ? ಇವೇ ಸಣ್ಣ ತಪ್ಪುಗಳನ್ನು ನಾ ಮಾಡೋದು, ಆಮೇಲೆ ಅದರಿಂದ ತಪ್ಪಿಸಿಕೊಳ್ಳಲಾಗದೆ ಒದ್ದಾಡೋದು. ಸರಸ್ವತಿ, ಗಾಢ ಬಣ್ಣದ ಸೀರೆ ಉಟ್ಟು, ಹೈಹೀಲ್ಡ್ ಚಪ್ಪಲಿ ಮೆಟ್ಟಿಕೊಂಡು ಬಂದಿದಾಳೆ. ಈ ಹೆಂಗಸನ್ನು ಯಾರಾದ್ರೂ ಸುಂದರಿ ಅಂತ ಹೇಳೋಕಾಗುತ್ತ? ರಸ್ತೆಯಲ್ಲಿ ಮಗುವಿನಿಂದ ಹಿಡಿದು ಮುದುಕರವರೆಗೂ, ಯಾರಾದ್ರೂ ಕುತ್ತಿಗೆ ತಿರುಗಿಸಿ ಅವಳನ್ನ ನೋಡಿಕೊಂಡು ಹೋಗ್ದೆ ಇದಾರಾ? ನಾನು ಕೂಡಾ ರಾಣಿಯಿಂದ ಸಖೀವರೆಗೂ, ರಸ್ತೆಯಲ್ಲಿ ಯಾರೊಬ್ಬರ ಮುಖವನ್ನೇ ನೋಡದೇ ಬಿಡೋದಿಲ್ಲ. ಮೊದಲು ಅವರುಗಳ ಮುಖ, ಆನಂತರ ಎದೆ ಭಾಗ ಆನಂತರ ಅವರ ಸರ್ವಾಂಗ. ಆನಂತರ ಇಷ್ಟವಾದ್ರೆ ಪುನಃ ಅವರ ಕಣ್ಣುಗಳಲ್ಲೇ ದೃಷ್ಟಿ ನೆಡುತ್ತೇನೆ. ಆ ರೀತಿ ಹೆಂಗಸರನ್ನು ದಿಟ್ಟಿಸೋದು ವಾಡಿಕೆ. ಸರಸ್ವತಿಗೆ ತನ್ನ ಮೂಗು, ಎದೆ, ಎತ್ತರದ ಬಗ್ಗೆ ಅನಾವಶ್ಯಕ ಗರ್ವ. ಅವಳಿಗೆ ತನ್ನ ಬಾಹುಭಂಗಿ, ಗದ್ದದ ಕೆಳಗಿನ ಭಾಗದ ಬಗ್ಗೆಯೂ ಹೆಮ್ಮೆ. ತೆಳುವಾದ ಬ್ಲೌಸ್ ತೊಟ್ಟಿರೋದ್ರಿಂದ ಅವಳ ಬ್ರೇಸಿಯರ್ಸ್ ಕೂಡಾ ಕಾಣಿಸ್ತಾ ಇದೆ. ನಾನು ಅವಳ ಎದೆ ಭಾಗವನ್ನೇ ದಿಟ್ಟಿಸುತ್ತಿದ್ದೇನೆ ಅನ್ನೋದನ್ನ ಗಮನಿಸಿ, ಅವಳು ಬೇಕೆಂದೆ ನನ್ನೆಡೆಗೆ ತಿರುಗಿ, ಎದೆ ಭಾಗ ತೋರಿಸುವಂತೆ ನಿಂತಳು. ಇದೇ ತರಹ ಹಿಂದೆ ಒಮ್ಮೆ ಸುವಿಮಲ ಏನು ಮಾಡಿದ್ದ ಎಂದರೆ... ಮೆಟ್ರೋ ಸಿನೇಮಾದ ಮುಂದೆ ನಾನು ಸುವಿಮಲ ಬರುತ್ತಿದ್ದೆವು. ದಿನಕ್ಕೊಂದು ಒಳ್ಳೆ ಕೆಲಸ ಮಾಡಬೇಕು ಅಂತ ಸುವಿಮಲನ ಪ್ರತಿಜ್ಞೆ. ಮೆಟ್ರೋ ಸಿನೇಮಾದ ಮುಂದೆ ಸುವಿಮಲ ಥಟ್ಟನೆ ನಿಂತು ಹೇಳಿದ, ನಿಲ್ಲೋ, ನನ್ನ ಗುಡ್ ಟರ್ನ್ ಮಾಡಿ ಮುಗಿಸಿ ಬಂದು ಬಿಡ್ತೀನಿ. ನಾನು ಆಶ್ಚರ್ಯದಿಂದ ಅವನನ್ನು ಕೇಳಿದ್ದೆ, ಪರೋಪಕಾರ ಮಾಡೋ ಅವಕಾಶ ಇಲ್ಲಿ ಎಲ್ಲಿ ಸಿಗ್ತು ನಿನಗೆ? ಸುವಿಮಲನೆಂದ, ನೀನು ಸ್ವಲ್ಪ ದಾರಿ ಬಿಟ್ಟು ನಿಂತ್ಕೋ. ಸುವಿಮಲನದು ಹದ್ದಿನ ಕಣ್ಣು. ಸಿನೇಮಾ ಥಿಯೇಟರಿನೆದುರು ಒಬ್ಬ ಸುಂದರ ಯುವತಿ ನಿಂತುಕೊಂಡಿದ್ದಳು. ಯಾರನ್ನೋ ನಿರೀಕ್ಷಿಸುತ್ತಿರುವಂತಿತ್ತು. ಮುಖದಲ್ಲಿ ಒಂದು ರೀತಿಯ ಅಧೀರತಾ ಭಾವ. ಹೆಣ್ಣಿನ ಉಡುಪು ಯಾವ ರೀತಿ ಇತ್ತೆಂದರೆ, ದೇಹವನ್ನು ಬಟ್ಟೆಯಿಂದ ಸುತ್ತಿಕೊಂಡಂತಿತ್ತು. ಆದರೂ ಆಕೆಯನ್ನು ರೂಪವತಿ ಎಂದೇ ಹೇಳಬಹುದು. ಆ ಹುಡುಗಿಯ ಕಣ್ಣಿಗೆ ಇಡೀ ಪ್ರಪಂಚದ ಬಗ್ಗೆ ಅಸಡ್ಡೆಯ ಭಾವನೆ. ಇನ್ನೇನು ಅವಳ ಭುಜ ಮುಟ್ಟುವ ರೀತಿ, ಅವಳ ತೀರಾ ಸಮೀಪಕ್ಕೆ ಹೋಗಿ ಸುವಿಮಲನೆಂದ, ಏನು ವಿಷಯ? ನೀವಿಲ್ಲಿ? ಆಕೆ ಸುವಿಮಲನನ್ನು ಗುರುತಿಸಿಲ್ಲವೆನ್ನುವುದು ಸ್ಪಷ್ಟವಾಗಿತ್ತು. ಏಕೆಂದರೆ ಅವನನ್ನು ಅವಳು ಆಶ್ಚರ್ಯದಿಂದ ನೋಡಿದ್ದಳು. ಆದರೆ ಹುಬ್ಬು ಕೊಂಕಿಸಿರಲಿಲ್ಲ. ಸುವಿಮಲ ಕಚ್ಚೆ

ಪಂಚೆ, ಜುಬ್ಬ ಉಟ್ಟುಕೊಂಡಿದ್ದ. ಮೃದುವಾದ ದನಿ. ಕಾರ್ತೀಕ ಮಾಸದ ಕಾರ್ತೀಕನ ತರಹ ಮುಖ. ವಾರ್ನಿಷ್ ಸವರಿದಂಥ ಮುಖದಲ್ಲಿ ಶಾಂತ ಕಳೆ. ಅವನನ್ನು ನೋಡಿದ್ರೆ ಯಾರೂ ಹೇಳಬೇಕು, ಜೇಬಿನಲ್ಲಿ ಬಿಡಿಗಾಸಿಲ್ಲ ಅಂತ. ವಾಸ್ತವವಾಗಿ ಅನುಮಾನಾಸ್ಪದ ನಟ. ಆ ಹೆಂಗಸೆಂದಳು, ನಾನಂತೂ ಸರಿಯಾಗಿ ಗುರುತು ಹಿಡಿಯಲಿಲ್ಲ. ಸುವಿಮಲ ಹತಾಶನಾಗಿ ಹೇಳಿದ, ಗುರುತು ಸಿಗಲಿಲ್ಲ ಅಲ್ಲವೇ ? ನೀವಿರೋದು ಬಾಲಿಗಂಜಿನಲ್ಲಿ ತಾನೇ ? ಆಕೆ ಸಂಶಯದಿಂದ, ಹೌದು ಎಂದಳು. ಸುವಿಮಲ ನಿಟ್ಟುಸಿರು ಬಿಟ್ಟು ಹೇಳಿದ, ನನ್ನ ಗುರ್ತು ಸಿಗಲಿಲ್ಲವೇ ? ನಿಮ್ಮ ಮನೆಗೆ ನಾನು ಎಷ್ಟೊಂದು ಸಲ ಬಂದಿದ್ದೆ. ನಿಮ್ಮ ಅಣ್ಣ ಅಮಲ ನನ್ನ ಸ್ನೇಹಿತ. ಆಕೆ ಕೋಪಗೊಂಡು, ನಿಮಗೆಲ್ಲೋ ತಪ್ಪು ಕಲ್ಪನೆಯಾಗಿದೆ. ನನ್ನಣ್ಣನ ಹೆಸರು ಆಮಲ ಎಂದಲ್ಲ... ಸುವಿಮಲ ಕೆಟ್ಟ ಮೋರೆ ಹಾಕಿಕೊಂಡು, ಹೌದಾ, ಹಾಗಾದ್ರೆ ನಿಜವಾಗಿಯೂ ನನ್ನಿಂದ ತಪ್ಪಾಗಿದೆ. ಕ್ಷಮಿಸಿ ಬಿಡಿ, ಏನೂ ತಿಳ್ಕೋಬೇಡಿ, ನೀವು ಥೇಟ್, ಇಂದ್ರಾಣಿ ತರಹಾನೇ ಕಾಣಿಸಿದಿರಿ ಎಂದ. ಆನಂತರ ಸುವಿಮಲ ಆಕೆಯನ್ನು ಪುನಃ ದಿಟ್ಟಿಸಿ ಮೇಲಿಂದ ಕೆಳಗಿನವರೆಗೂ ನೋಡಿದ. ಸುವಿಮಲ ಜೇಬಿನಲ್ಲಿ ಎರಡೂ ಕೈ ಇಳಿ ಬಿಟ್ಟುಕೊಂಡು ಮೆಲುದನಿಯಲ್ಲಿ ಆಕೆಗೆಂದ, ನಿಮ್ಮ ಹತ್ತಿರ ಒಂದು ಮಾತು ಹೇಳ್ಬೇಕು. ನಿಮ್ಮ ಮುಖದಲ್ಲಿನ ಅಹಂಕಾರವನ್ನು ತೆಗೆದುಬಿಡಿ. ಆಗ ನೀವು ನಿಜವಾಗಿಯೂ, ಇಂದ್ರಾಣಿಯ ತರಹ ಸುಂದರವಾಗಿ ಕಾಣ್ತೀರ. ನನ್ನ ಮಾತನ್ನು ನಂಬಿ.

ನಾನು ನಿರ್ಮಲ ದೃಷ್ಟಿಯಿಂದ ಒಮ್ಮೆ ಸರಸ್ವತಿಯನ್ನು ನೋಡಿದೆ. ಮನಸ್ಸಿಗನ್ನಿಸಿತು, ಇನ್ನು ಜಮುನಾಳನ್ನು ಇಂದು ಭೇಟಿ ಮಾಡಲು ಸಾಧ್ಯವಿಲ್ಲ. ಆದರೆ ಕ್ಷೀಣವಾದ ಆಸೆಯಿಂದ ಕೇಳಿದೆ, ನೀವು ನಿಮ್ಮ ಮಾವನ ಮನೆಗೆ ಹೋಗಬೇಕಲ್ಲವೇ ?

ಸರಸ್ವತಿ ತುಟಿ ಕೊಂಕಿಸಿ ಹೇಳಿದಳು, ಅದನ್ನು ಆಮೇಲೆ ನೋಡಿಕೊಂಡರಾಯಿತು. ಹೊರಡಿ ಇನ್ನು, ನಾನು ಎಷ್ಟೋ ದಿನದಿಂದ ಮನೆಬಿಟ್ಟು ಹೊರಗೆಲ್ಲೂ ಹೋಗೇ ಇಲ್ಲ.

ನೀವು ಮನೆಯಿಂದ ಜಾಸ್ತಿ ಹೊರ ಹೋಗೋದಿಲ್ಲ ಅಂತ ಕಾಣುತ್ತೆ.

ಅಮ್ಮ ಹೊರ ಹೋಗೋದಕ್ಕೆ ಬಿಡೋದಿಲ್ಲ. ನಮ್ಮಲ್ಲಂತೂ ಪೋಲೀಸರ ಹುಕುಂ. ನೀವು ನನ್ನನ್ನ ನೀವು ಅಂತ ಯಾಕೆ ಕರೀತೀರಾ ? ಹಿಂದೆ ನೀವು ಆ ರೀತಿ ಇರಲಿಲ್ಲ.

ಓ ಹೌದಾ ! ಮರೆತೇ ಬಿಟ್ಟಿದ್ದೆ.

ಕಾಫಿಯಂಗಡಿಯಲ್ಲಿ ನನ್ನಿಂದ ಹೆಚ್ಚಿಗೆ ಮಾತನಾಡಲಾಗಲಿಲ್ಲ. ಸರಸ್ವತಿಯದೇ ಅತೀ ಮಾತು. ನಾನು ಎಲ್ಲಿ ಕೆಲಸ ಮಾಡ್ತಿದೀನಿ, ನಾನು ಸಾಯಂಕಾಲ ಎಲ್ಲಿಗೆ ಹೋಗ್ತೀನಿ, ನನಗೆ ಪ್ರೇಯಸಿ ಇದ್ದಾಳೋ ಇಲ್ಲವೋ, ನಾನು ಮಾತನಾಡುವಾಗ ಮುಖವನ್ನು ಬಲಭಾಗಕ್ಕೆ ತಿರುಗಿಸಿಕೊಂಡಿರುತ್ತೇನೆ, ಆದರಿಂದ ನಾನು ದುಷ್ಟನಂತೆ ಕಾಣುತ್ತೇನೆ, ನನ್ನಂತೆ ನಾಚಿಕೆ ಸ್ವಭಾವದವರು ಹೆಂಗಸರೊಡನೆ ಬೆರೆಯೋದು

ವಿಪರೀತ ಕಷ್ಟ, ನಾನು ಯಾಕೆ ಮೀಸೆ ಬಿಟ್ಟಿದೀನಿ, ಹೆಂಗಸರು ಈ ನಡುವೆ ಮೀಸೇನಾ ಇಷ್ಟಪಡೋದಿಲ್ಲ, ರಾತ್ರಿಯಾದ ಮೇಲೆ ನಾನು ಓದಿ ಬರೆದು ಮಾಡೋದು ಉಚಿತವಲ್ಲ, ಅದರಿಂದಲೇ ನನ್ನ ಕಣ್ಣಿ ಅಂಚಿನಲ್ಲಿ ಕಪ್ಪು ಪಟ್ಟೆ ಬಂದಿರೋದು, ವಾರಕ್ಕೊಂದು ದಿನ ನಾನು, ಶ್ಯಾಂಪು ಹಾಕಿಕೊಂಡು ಕೂದಲು ತೊಳೆದು ಕೊಳ್ಳುತ್ತೇನೋ ಇಲ್ಲವೋ, ನಾನು ಫುಟ್‌ಬಾಲ್ ಆಟ ಆಡ್ತೇನೋ ಇಲ್ವೋ ಇತ್ಯಾದಿ. ನನ್ನ ಮುಖ ನೋಡಿದ್ರೆ ಅವಳಿಗದೆಲ್ಲ ಗೊತ್ತಾಗುತ್ತೋ ಹೇಗೆ ?

ಮನೆಯಿಂದ ಸರಸ್ವತಿಗೆ ಹೊರ ಹೋಗೋದಕ್ಕಾಗೋದಿಲ್ಲ. ಅದಕ್ಕೇ ಅವಳಿಗೆ ಅಷ್ಟೊಂದು ಕುತೂಹಲ ಅಂತ ಕಾಣುತ್ತೆ. ಪಂಜರದ ಹಕ್ಕಿಯನ್ನು ಬಿಡುಗಡೆ ಮಾಡಿದರೆ ಅದು ಮೊದಲು ನೇರವಾಗಿ ಹಾರೋದಿಲ್ಲ. ಸ್ವಲ್ಪ ಹೊತ್ತು ಹಾರಿ ಬಲಗಡೆ ಹೋಗಿ, ಪುನಃ ಹಿಂತಿರುಗಿ ಬಂದು, ಥಟ್ಟನೆ ಬಲಗಡೆ ತಿರುಗಿ, ತುಂಬಾ ದೂರ ಹಾರಿ ಹೋಗುತ್ತೆ. ಸರಸ್ವತಿಯೂ ಸ್ವಲ್ಪ ಹಾರಾಡುತ್ತಿದ್ದಳು. ನಾನು ಅದನ್ನು ಗಮನಿಸಿದೆ. ಥಟ್ಟನೆ ಅವಳು ನನ್ನನ್ನು ಪ್ರಶ್ನಿಸಿದಳು, ನೀವು ಬಂಗಾಲಿಯರೇ ?

ನಾನೆಂದೆ, ಹೌದು. ಯಾಕೆ ?

ಸರಸ್ವತಿ ಪಿಸಿ ಪಿಸಿ ನಕ್ಕು ಹೇಳಿದಳು, ಹೀಗೇ ಸುಮ್ಮನೆ. ಬಂಗಾಲಿಗರು ಬಹಳ ಗಟ್ಟಿಯಾಗಿರ್ತಾರೆ. ಮತ್ತು......

ನಾನೆಂದೆ, ಮತ್ತಿನ್ನೇನು ?

ಅದೇ ರೀತಿ ನಗು ನಗುತ್ತ ಹೇಳಿದಳು, ಅಲ್ಲದೆ ಅವರು ತುಂಬಾ ಪ್ಯಾಸಿಯನೇಟ್ ಆಗಿರ್ತಾರೆ.

ನಾನೆಂದೆ, ಬಂಗಾಲಿಗರು ನೀಗ್ರೋಗಳೇನೂ ಅಲ್ಲವಲ್ಲ. ಅಲ್ಲದೆ ನೀವು ಅದನ್ನೆಲ್ಲ ಹೇಗೆ ತಿಳಿದುಕೊಂಡಿರಿ ?

ರಹಸ್ಯವನ್ನು ಭೇದಿಸುವ ವ್ಯರ್ಥ ಪ್ರಯತ್ನ ಮಾಡಿ ಅವಳೆಂದಳು, ನನಗೆಲ್ಲಾ ಗೊತ್ತು.

ನನಗೆ ಅವಳು ಪುಟ್ಟ ಮಗುವಿನಂತೆ ಎನ್ನಿಸಿತು. ಸರ್ವನಾಶ, ಅವಳ ಕಂಕುಳು ಹಾಗೂ ಮೂಗಿನ ಹತ್ತಿರ ಸ್ವಲ್ಪ ಬೆವರು. ಇದರ ಸುಳಿವು ಸಿಕ್ಕಿತು. ಅವಳನ್ನು ಈಗಲೇ ಎಳ್ಕೊಂಡು ಹೋಗಿ ಮದುವೆ ಮಾಡೋದು ಅವರಪ್ಪ ಅಮ್ಮನಿಗೆ ಸೂಕ್ತ. ಸ್ವಲ್ಪ ಹುಡುಗಾಟದ ಹುಡುಗಿ. ಹುಡುಗಾಟ ಆಡೋಕೆ ಹೋದರೆ, ಕೈಕಾಲು ಮುರಿದುಕೊಳ್ತಾಳೆ. ಅದರ ಯೋಚ್ನೆ ಇದೆಯೋ ಇಲ್ವೋ ಅವಳಿಗೆ. ನಡಿ ಹೋಗೋಣ ನನಗೂ ಸ್ವಲ್ಪ ಕೆಲಸವಿದೆ ಎಂದೆ ನಾನವಳಿಗೆ. ವಯ್ಯಾರ ಮಾಡುತ್ತ ಸರಸ್ವತಿ ಎಂದಳು, ಏನೇ ಕೆಲಸವಿರಲಿ ನನ್ನನ್ನು ಮಾವನ ಮನೆತನಕ ತಲುಪಿಸಿಬಿಡಿ. ನಾನು ಪ್ರಶ್ನಿಸಿದೆ, ನಿಮ್ಮ ಮಾವನ ಮನೆ ಎಲ್ಲಿ? **ಕಾಲಿಘಾಟ್** –

ರಸ್ತೆಯಲ್ಲಿ ನಡೆಯುವಾಗ, ನಾನು ಟ್ಯಾಕ್ಸಿಯ ಕಡೆ ಗಮನ ಹರಿಸಲಿಲ್ಲ. ಈ ಹುಡುಗೀನ ಕಟ್ಟಿಕೊಂಡು ಟ್ಯಾಕ್ಸಿ ಗೀಕ್ಸಿ ಹತ್ತೋದು ಬಹಳ ಅಪಾಯಕಾರಿ. ಇಂದಿನಿಂದ ಮೂವತ್ತೊಂದು ದಿನಗಳ ಹಿಂದೆ, ಒಂದು ವೇಳೆ ನಾನು ಜಮುನಾಳನ್ನು ರಸ್ತೆಯಲ್ಲಿ ಕಂಡಿಲ್ಲದೆ ಇದ್ದಿದ್ದರೆ, ನನ್ನ ಜೀವನದ ಗತಿ ಈ ರೀತಿ ಬದಲಾಯಿಸುವುದರ

ಬಗ್ಗೆ ಯೋಚ್ನೆ ಮಾಡ್ತಾ ಇರಲಿಲ್ಲ. ಆಗ ಸರಸ್ವತಿ ಜೊತೆ ಏನು ಹಗರಣ ಮಾಡ್ತಿದ್ದನೋ ಏನೋ, ಅದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ.

ಪಾರ್ಕ್ ಸ್ಟ್ರೀಟ್ ಹಿಡಿದು, ಚೌರಂಗಿಯ ಕಡೆ ಹೊರಡುವ ಬಸ್ ಹಿಡಿಯಲೆಂದು ನಡೆದಾಗ, ಮಾತನಾಡಬೇಕಲ್ಲ ಎಂದು ನಾನೆಂದೆ, ನಿಮ್ಮಣ್ಣ ವರುಣ ವಿದೇಶದಲ್ಲಿ ನಿಜವಾಗಿಯೂ ಮದುವೆ ಮಾಡಿಕೊಂಡಿದಾನಾ ಹೇಗೆ?

ಸರಸ್ವತಿ ತುಟಿ ಕೊಂಕಿಸಿ ಹೇಳಿದಳು, ಯಾರಿಗೆ ಗೊತ್ತು? ಎಲ್ಲೋ ಒಂದಿಷ್ಟು ಹಗರಣ ಮಾಡಿಕೊಂಡಿರಬೇಕು ಅಂತ ಕಾಣುತ್ತೆ. ಇನ್ನು ಮದುವೆ ಮಾಡಿಕೊಳ್ಳದೇ ಬೇರೆ ದಾರೀನೇ ಇಲ್ಲವೇನೋ. ಅದನ್ನು ನಾವ್ಯಾಕೆ ಯೋಚನೆ ಮಾಡಬೇಕು. ಅಮ್ಮನಂತೂ ತೀರಾ ರಾದ್ಧಾಂತ ಮಾಡಿಬಿಟ್ಟಳು. ಅವನಿಷ್ಟ ಮಾಡಿಕೊಂಡಿದ್ದಾನೆ.

ನಾನು ವರುಣನ ಮುಖವನ್ನು ಜ್ಞಾಪಿಸಿಕೊಳ್ಳಬಯಸಿದೆ. ಅವನು ವರ್ಗದಲ್ಲಿನ ಪರೀಕ್ಷೆಯಲ್ಲಿ ಯಾವಾಗಲೂ ಮೊದಲಿಗನಾಗಿರುತ್ತಿದ್ದ. ಪಾಲಿಶ್ ಮಾಡಿದ, ಪ್ರತಿಮೆಯಂತೆ ಮುಖ. ಅವನಂತೂ ಹಗರಣ ಮಾಡಿಕೊಂಡಿರುವ ಸಾಧ್ಯತೆ ಇಲ್ಲ. ಯಾರಿಗೆ ಗೊತ್ತು ಮುಖಕ್ಕೆ ಬಣ್ಣ ಹಚ್ಚಿಕೊಂಡಾಗ ಏನೂ ತಿಳಿಯೋದಿಲ್ಲ.

ಸ್ವಲ್ಪ ದೂರ ಹೋದ ಮೇಲೆ ಸರಸ್ವತಿ ಕಿರುಚಿದಳು, ಸಾನ್ಯಾಲ್‌ದಾ. ಒಂದು ಖಾಕಿ ಬಣ್ಣದ ಜೀಪು ಥಟ್ಟನೆ ನಿಂತಿತು. ಅನಂತರ ಹಿಂದೆ ಸರಿದು ಬಂದು ನಮ್ಮ ಹತ್ತಿರವೇ ಬಂದು ನಿಂತಿತು. ಪೊಲೀಸ್ ಗಾಡಿಯಿಂದ, ಭಾರಿ ಮೀಸೆ ಹೊತ್ತ ಒಬ್ಬ ಇನ್ಸ್‌ಪೆಕ್ಟರ್ ಮುಖ ಹೊರ ಹಾಕಿ ಹೇಳಿದ, ಏನು ವಿಶೇಷ? ಇದೇನು ನೀವು ಇಲ್ಲಿ? ಅಮ್ಮ ಹೇಗಿದ್ದಾರೆ?

ಸ್ವಲ್ಪ ವಾಸಿ. ನೀವು ನಮ್ಮನ್ನು ಅರೆಸ್ಟ್ ಮಾಡ್ತೀರಾ?

ಆತ ನಗುತ್ತ ಕೇಳಿದ, ಎಲ್ಲಿಗೆ ಹೋಗಬೇಕು?

ಸರಸ್ವತಿ ಒಂದೇ ಸಮನೆ, ಪಟ ಪಟ ಬಡಬಡಿಸಿದಳು, ಹಾಗಾದ್ರೆ ನೀವು ನಮ್ಮನ್ನು ಅರೆಸ್ಟ್ ಮಾಡಿ, ಕಾಲಿಘಾಟ್‌ತನಕ ತಲುಪಿಸಿಬಿಡಿ.

ನಾನೆಂದೆ, ಸರಸ್ವತಿ ಹಾಗಾದ್ರೆ ನಾನೇನು ಬರೋದು ಬೇಕಿಲ್ಲ ತಾನೇ?

ಅವಳೆಂದಳು, ಬನ್ನಿ ಪೋಲೀಸ್ ಗಾಡಿ ಅಂತ ನಿಮಗೆ ಸಂಕೋಚವೇ? ನಿಮಗೆ ತಪ್ಪಿತಸ್ಥ ಅಂತ ಅನ್ನಿಸ್ತಿದೆಯೇ?

ನಾನು ಏನೊಂದೂ ಉತ್ತರಿಸದೆ, ಅವಳೊಡನೆ ಜೀಪ್ ಹತ್ತಿದೆ. ಸರಸ್ವತಿ ಎಂದಳು, ಸಾನ್ಯಾಲ್‌ದಾ, ನಿಮಗೆ ಇವರ ಪರಿಚಯ ಮಾಡಿಕೊಡ್ತೀನಿ. ಇವರು ನನ್ನ ಸ್ನೇಹಿತರು.....

ಕಾಲೇಜುಗಳಲ್ಲಿ ಸ್ಟ್ರೈಕ್ ನಡೀತಿದೆ. ಈಗ ಮಧ್ಯಾಹ್ನದ ಹೊತ್ತು. ಏನೇ ಆದ್ರೂ ಜಮುನಾಳನ್ನು ಕಾಣಲು ಸಾಧ್ಯವಿಲ್ಲ. ಜಮುನಾ ಸಂಗೀತದ ಶಾಲೆಗೂ ಬಂದಿರಲಿಲ್ಲ. ಕೆಲಸವಿಲ್ಲದೆ, ಸುಮ್ಮನೆ ನಾನು ಆರರಿಂದ ಎಂಟರವರೆಗೆ ಸಂಗೀತದ ಶಾಲೆಯ ಮುಂದೆ ನಿಂತಿದ್ದೆ. ಎಷ್ಟೋ ಜನ ಹುಡುಗಿಯರು ಒಳಹೋದರು, ಮತ್ತೆಷ್ಟೋ ಜನ ಹಿಂತಿರುಗಿದರು. ಅನೇಕರು ನೋಡಲು ಜಮುನಾಳಂತೆಯೇ. ಆದರೆ

ಅವರ್ಯ್ಯಾರೂ ಜಮುನಾಳಲ್ಲ. ನದಿಗಳು ಕಾಣಲು ಎಲ್ಲ ಒಂದೇ ತರಹ ಕಂಡರೂ, ಎಲ್ಲ ನದಿಯಲ್ಲೂ ಸ್ನಾನ ಮಾಡಿದೊಡನೆ ಪುಣ್ಯ ಲಭಿಸುವುದಿಲ್ಲ. ಎರಡು ಗಂಟೆಗಳ ಕಾಲ ರೇಲಿಂಗ್‌ಗೆ ಒರಗಿ, ನಿಂತುಕೊಳ್ಳುವುದರಲ್ಲಿ ನೋವಿದೆ ಎನ್ನುವುದು ನನಗೆ ಹಿಂದೆ ಗೊತ್ತಿರಲಿಲ್ಲ. ಈ ಎರಡು ಗಂಟೆ, ತೀರಾ ದೀರ್ಘ ಎಂದು ಮನಸ್ಸಿಗೆನ್ನಿಸಿತು. ಪ್ರಪಂಚದಲ್ಲಿ ಒಂದೇ ಸ್ಥಳದಲ್ಲಿ ಎಲ್ಲಕ್ಕಿಂತ ಹೆಚ್ಚು ಹೊತ್ತು, ಒಂದೇ ಸ್ಥಳದಲ್ಲಿ ತುಂಬಾ ಹೊತ್ತು ನಿಂತುಕೊಳ್ಳುವುದರಲ್ಲಿ ನಾನು ದಾಖಲೆಯನ್ನೇ ಸ್ಥಾಪಿಸಿಬಿಟ್ಟಿದ್ದೆ. ಸನ್ಯಾಸಿಗಳು ಸೂರ್ಯನ ಕಡೆ ಒಂದು ಕೈ ಎತ್ತಿ ನಿಂತುಕೊಂಡು, ತಪಸ್ಸು ಮಾಡುತ್ತಾರೆ. ಮನಸ್ಸು ಮಾಡಿದರೆ ನಾನು ಅವರನ್ನು ಸೋಲಿಸಬಲ್ಲೆ ಅಂತ ನನ್ನ ಮನಸ್ಸಿಗನ್ನಿಸುತ್ತದೆ. ಆದರೆ ಸನ್ಯಾಸಿಗಳು ಆ ರೀತಿಯ ಘೋರ ತಪಸ್ಸಿನ ಅಂತ್ಯದಲ್ಲಿ ಏನಾದರೊಂದು ಫಲ ಪಡೆದೇ ಪಡೆಯುವರು. ಆದರೆ ನಾನಾದರೂ ಯಾವ ಫಲವೂ ಇಲ್ಲದೆ ನಿಂತೇ ಇದ್ದೆ. ಬಸ್ ಸ್ಟಾಪಿನ ಹತ್ತಿರ ರೇಲಿಂಗ್‌ಗೆ ಒರಗಿ ನಿಂತು, ಒಂದಾದ ಮೇಲೊಂದರಂತೆ ಸಿಗರೇಟ್ ಸೇದಲಾರಂಭಿಸಿದೆ. ರಸ್ತೆಯಲ್ಲಿನ ಜನರೆಲ್ಲರೂ ನಾನು ಒಂಟಿಯಾಗಿ ನಿಂತಿರುವುದನ್ನು ಗಮನಿಸಿದ್ದಾರೆ. ನಾನೊಬ್ಬ ಕೆಲಸವಿಲ್ಲದವನೆಂಬಂತೆ ನೋಡಿಕೊಂಡು ಹೋಗುತ್ತಿದ್ದಾರೆ.

ಜಮುನಾಳು ಸಿಗದೆ ನಾನೇನು ಮಾಡಲಿ ಎಂದೇ ನನಗೆ ತೋಚುತ್ತಿಲ್ಲ. ಮೊದಲು ನಾನು ಯಾವ ರೀತಿ, ಸಮಯ ಕಳೆಯುತ್ತಿದ್ದೆ ಎನ್ನುವುದೇ ನನಗೆ ಮರೆತು ಹೋಗಿದೆ. ಜಮುನಾಳಿಲ್ಲದೆ, ದೀರ್ಘವಾದ ಸಂಜೆ ಹಾಗೂ ರಾತ್ರಿಯನ್ನು ನಾನು ಹೇಗೆ ಕಳೆಯಲಿ ಎಂದು ಯೋಚನೆಯಾಗುತ್ತದೆ. ಎಲ್ಲಿಗೆ ಹೋಗಲಿ? ಎಲ್ಲಿಗೆ ಹೋಗಲಿ? ಎಂದು ನಾನು ಕೃಷ್ಣಚೂಡ ಮರವನ್ನು ಪ್ರಶ್ನಿಸಿದೆ. ಗಾಳಿಯಲ್ಲಿ ತಲೆತೂಗಿಸಿ ಮರ ಹೇಳಿತು, ನನಗೇನು ಗೊತ್ತು? ನಾನು ಎಲ್ಲೂ ಹೋಗದೆ, ನಿಂತಲ್ಲೇ ನಿಂತಿರುತ್ತೇನೆ. ಒಂದು ದಿನ ನೀನು, ನಾನು ಇಬ್ಬರೂ ಸ್ಮಶಾನಕ್ಕೆ ಹೋಗಿ ಸುಟ್ಟು ಹೋಗುತ್ತೇವೆ.

ನಾನೆಂದೆ, ಇರಲಿ ಬಿಡು. ಆನಂತರ ಉರಿಯುತ್ತಿರುವ ಸಿಗರೇಟನ್ನು ಮರದ ಮೈಗೊತ್ತಿ ಹಿಡಿದು ಹೇಳಿದೆ, ಈ ಸಲ ನೋಡು ಸುಟ್ಟರೆ ಹೇಗಿರುತ್ತೇಂತ.

ಜಮುನಾ ಸಿಗದಿದ್ದರೆ ಸಾಧ್ಯವೇ ಇಲ್ಲ. ಎಷ್ಟೊಂದು ತೀವ್ರವಾಗಿ ನಾನು ಅವಳಲ್ಲಿ ಒಂದಾಗಿ ಬಿಟ್ಟಿದೀನಿ ಅನ್ನೋದು ನಿಜವಾಗಿಯೂ ನನಗೆ ಹಿಂದೆಂದೂ ತಿಳಿದಿರಲಿಲ್ಲ. ಆ ದಿನ ಪಂಚೆ ಉಟ್ಟು, ಚಪ್ಪಲಿ ಮೆಟ್ಟಿಕೊಂಡು ಹೊರಟಿದ್ದೆ. ಒಬ್ಬಾತ, ಅಕಸ್ಮಾತ್ ನನ್ನ ಕಾಲು ತುಳಿದುಬಿಟ್ಟ. ನೋವಿನಿಂದ ಕಿರುಚಿ, ಹಲ್ಲು ಕಡಿಯುತ್ತ ಆತನಿಗೆಂದೆ, ಈಡಿಯಟ್ ಕಣ್ಣಿಲ್ವಾ? ಆತನೆಂದ, ಕ್ಷಮಿಸಿ, ಕಾಣಿಸಲಿಲ್ಲ. ನನ್ನ ಕಾಲು ಉರಿಯುತ್ತಲೇ ಇತ್ತು. ನಾನು ಅದೇ ಕರ್ಕಶ ಭಾವದಿಂದ ಹೇಳಿದೆ, ನಾನ್‌ಸೆನ್ಸ್ ನೋಡಲಾಗಲಿಲ್ಲ ಅಂದರೇನು? ಆತ ಆಶ್ಚರ್ಯದಿಂದ ನನ್ನನ್ನೇ ದಿಟ್ಟಿಸಿದ. ಪಾಪದ ಮುಖದ ಪ್ರೌಢ. ಕೈಯಲ್ಲಿ ದೊಡ್ಡ ಬ್ಯಾಗ್. ಮೇಷ್ಟ್ರೋ ಗೀಷ್ಟ್ರೋ ಇರಬೇಕೂಂತ ಕಾಣುತ್ತೆ. ಆತ ವಿನಂತಿಸಿಕೊಳ್ಳುವ ರೀತಿಯಲ್ಲಿ ಹೇಳಿದ, ನಿಜವಾಗಿಯೂ ಕಾಣಿಸಲಿಲ್ಲ. ಬೇಕೆಂದೇ ಯಾರೂ, ಇಷ್ಟೊಂದು ಗುಂಪಿನಲ್ಲಿ, ಇನ್ನೊಬ್ಬರ ಕಾಲನ್ನು

ತುಳಿಯೋದಿಲ್ಲ. ನಾನು ಸಿಡುಕಿ ಹೇಳಿದೆ, ಇರಲಿ ಬಿಡಿ, ಇರಲಿ ಬಿಡಿ. ಇನ್ನು ನೀವು ವಟಗುಟ್ಬೋದು ಬೇಡ. ಆತ ಕಾರುಣ್ಯ ಭಾವದಿಂದ ನನಗೆ ತಿಳಿ ಹೇಳಲು ಪ್ರಯತ್ನಿಸಿದ. ನಾನು ಇನ್ನೂ ರೇಗಿ, ದನಿ ಎತ್ತರಿಸಿದೆ. ಅಷ್ಟರಲ್ಲಿ ನನ್ನ ಏರಿದ ದನಿ ಕೇಳಿ ಇತರ ಜನರ ಜೊತೆ, ಒಬ್ಬ ಹುಡುಗಿ, ಕುತ್ತಿಗೆ ಉದ್ದ ಮಾಡಿ ನನ್ನನ್ನೇ ಆಶ್ಚರ್ಯದಿಂದ ದಿಟ್ಟಿಸಿದಳು. ಆ ಹುಡುಗಿಗೂ ಜಮುನಾಳಿಗೂ ಯಾವೊಂದು ಹೊಂದಾಣಿಕೆಯೂ ಇಲ್ಲ. ಈ ಹುಡುಗಿ ಕಪ್ಪು, ದಪ್ಪ ಮುಖ. ಆದರೆ ಅವಳನ್ನು ನೋಡಿ ನನಗೆ ಜಮುನಾಳ ಮುಖ ಜ್ಞಾಪಕಕ್ಕೆ ಬಂತು, ಆ ಹುಡುಗಿಯ ಆಶ್ಚರ್ಯ ಚಕಿತ ಕಣ್ಣುಗಳಿಂದ. ಜಮುನಾಳೇ- ಯಾಕೆ ಈತನ ಜೊತೆ ಕಟುವಾಗಿ ವ್ಯವಹರಿಸ್ತಿದೀರಾ ? ಖಂಡಿತವಾಗಿಯೂ ಅವರು ಬೇಕೆಂದೇ ನಿಮ್ಮ ಕಾಲು ತುಳಿದಿಲ್ಲ ಎಂದಂತಾಯಿತು. ಗುಂಪಿನ ಜನರೆಲ್ಲರೂ ನನಗೆ ವಿರುದ್ಧವಾಗಿದ್ದರೂ ನಾನು ಯಾರನ್ನೂ ಲಕ್ಷಿಸದೇ, ಸಿಡುಕಿಕೊಂಡೇ ನಿಂತಿದ್ದೆ. ನನ್ನ ಕಣ್ಣು ಇನ್ನೂ ಉರಿಯುತ್ತಿತ್ತು. ನಾನು ಜಮುನಾಳನ್ನು ಉದ್ದೇಶಿಸಿ ಮನದಲ್ಲೇ ಉತ್ತರಿಸಿದೆ, ಮಾಡೇ ಮಾಡ್ತೀನಿ, ಕೆಟ್ಟ ವ್ಯವಹಾರ ಮಾಡೇ ಮಾಡ್ತೀನಿ. ಹಿಂದೆ ಎಂದಾದರೂ, ಬಸ್, ಟ್ರಾಮ್‌ಗಳಲ್ಲಿ ನಾನು ಜಗಳವಾಡಿದ್ದೇನೆಯೇ ? ಅಥವಾ ಯಾವುದಾದರೂ ಪ್ರೌಢ ವ್ಯಕ್ತಿಗೆ ನೀನು ಎಂದಿದ್ದೇನೆಯೇ ? ಈಗ ನಾನು ಅದನ್ನೆಲ್ಲ ಮಾಡೇ ಮಾಡ್ತೀನಿ. ನೀನು ಯಾಕೆ ನನ್ನನ್ನು ಕಾಣೋಕೆ ಬರೋದಿಲ್ಲ ?

ಆಫೀಸಿನಲ್ಲಿ ದೊಡ್ಡ ಭಾವನವರು ತಮ್ಮ ಕೋಣೆಗೆ ಕರೆಸಿಕೊಂಡು ನನಗೆಂದರು, ನೀನು ವನಮಾಲಿ ಬಾಬುಗಳನ್ನು ಮುದಿನಾಯಿ ಅಂತ ಬೈದೆಯಂತೆ. ಛೆ, ಆತ ನನ್ನ ಬಳಿ ದೂರು ಹೇಳೋಕೆ ಬಂದು ಅಳೋಕ್ಕೇ ಪ್ರಾರಂಭಿಸಿಬಿಟ್ಟರು. ವಯಸ್ಸಾದವರು ಒಂದೆರಡು ಕೆಲಸದಲ್ಲಿ ತಪ್ಪು ಮಾಡಬಹುದು. ಹಾಗೇಂತ ಕೆಟ್ಟ ಮಾತುಗಳನ್ನು ಬಳಸಿ ಮಾತನಾಡೋದು ತೀರಾ ಅನ್ಯಾಯ.

ನಾನು ಉತ್ತರಿಸದೆ ತಲೆತಗ್ಗಿಸಿ ನಿಂತಿದ್ದೆ. ನನ್ನ ಇಡೀ ದೇಹ ಅಹಂಕಾರದಿಂದ ತುಂಬಿತ್ತು. ನಾನು ಮನಸ್ಸಿನಲ್ಲೇ ಬಡಬಡಿಸಿದೆ, ಹುಂ ಮಾಡೇ ಮಾಡ್ತೀನಿ. ಪುನಃ ಮುದಿ ನಾಯಿ ಅಂತ ಹೇಳ್ತೀನಿ. ಬಡ್ಡೀ ಮಗ, ಠಕ್ಕ, ಮೋಸಗಾರ, ರೋಗದ ಮುದ್ದೆ ಈ ರೀತಿ ಹೇಳಿ ಯಾರೂಂದ್ರೆ ಅವರನ್ನು ಬೈತೀನಿ. ಎಲ್ಲೀವರೆಗೂ ಜಮುನಾಳನ್ನು ನೋಡೋಕಾಗೋಲ್ಲವೋ ಅಲ್ಲೀವರೆಗೂ ಅದೇ ರೀತಿ ಮಾಡ್ತೀನಿ. ಜಮುನಾಳನ್ನು ನಾನು ಯಾಕೆ ನೋಡೋದಿಕ್ಕಾಗ್ತಾ ಇಲ್ಲ.

ಜಮುನಾಳ ಮನೆ ಎದುರೇ ಸುತ್ತಾಡುತ್ತಿದ್ದೆ. ಬೇಕೆಂದೇ ಒಳಗೆ ಹೋಗಲಿಲ್ಲ. ರಸ್ತೆಯಲ್ಲಿನ ಗೋಡೆಗಳ ಮೇಲಿನ ಪೋಸ್ಟರ್‌ಗಳೆಲ್ಲಾ ಕಂಠಸ್ಥವಾದ ಮೇಲೆ, ಜಮುನಾ ಮನೆಯಿಂದ ಹೊರ ಹೊರಟಿದ್ದನ್ನು ನೋಡಿದೆ. ಅವಳ ಜೊತೆಯಲ್ಲಿ ಇನ್ನೂ ಒಂದಿಬ್ಬರು ಹುಡುಗಿಯರಿದ್ದರು. ಇಂದಿನ ಸಂಜೆ ಬಹಳ ಮೋಜು, ಹುಡುಗಿಯನ್ನು ನೋಡಿಯೇ ನನ್ನ ಮನಸ್ಸು ಪ್ರಫುಲ್ಲವಾಗಿ ಬಿಟ್ಟಿತ್ತು. ಎಷ್ಟೊಂದು ಸುಂದರವಾದ ದೇಹರಾಶಿ. ಅದಕ್ಕೆ ನಾನು ಆಸೆ ಪಡೋದಿಲ್ಲ. ಇನ್ನೂ ಆ ಶರೀರದ ವಿವಿಧ ಉಬ್ಬು ತಗ್ಗುಗಳು ಸ್ಪಷ್ಟವಾಗಿ ಮೂಡಿಲ್ಲ. ಅಂಥ ಎಳೆ ಶರೀರಕ್ಕಾಗಿ ನಾನು

ಆಸೆಪಡುವುದಿಲ್ಲ. ನಾನು ಕೇವಲ ಅವಳ ಮಾಧುರ್ಯವನ್ನು ಇಷ್ಟಪಡುತ್ತೇನೆ. ಆದರೆ ನಾನು ಜಮುನಾಳೊಬ್ಬಳನ್ನೇ ಇಷ್ಟಪಡೋದು. ಅಕ್ಕಪಕ್ಕದಲ್ಲಿರುವ ಆ ಹುಡುಗಿಯರ್‍ಯಾರನ್ನೂ ಅಲ್ಲ.

ಜಮುನಾಳು ನನ್ನನ್ನು ನೋಡಲಿಲ್ಲ. ಬಹಳ ಅವಸರವಾಗಿ ನಡೆದು ಹೋಗುತ್ತಿದ್ದರು ಅವರು. ಬಸ್ ಸ್ಟಾಪಿನ ಕಡೆಗೇ ಹೊರಟಿದ್ದಾರೆ. ತಕ್ಷಣ ಅವಳು ಬಸ್ ಹತ್ತಿಬಿಟ್ಟರೆ, ಇನ್ನವಳು ಸಿಗೋದಿಲ್ಲ. ನಾನು ಸರಸರನೆ ನಡೆದು ಅವಳ ಸಮೀಪಕ್ಕೆ ಬಂದು, ನನ್ನ ನಡಿಗೆಯ ವೇಗವನ್ನು ಕಡಿಮೆಗೊಳಿಸಿ ಹೇಳಿದೆ, ಎಲ್ಲಿಗೆ ಹೊರಟಿದ್ದೀಯಾ ? ನನ್ನ ದನಿಯಲ್ಲಿ ಸ್ವಲ್ಪ ಅಸ್ವಾಭಾವಿಕತೆ ಇತ್ತೋ ಏನೋ. ಜಮುನಾ ಆಶ್ಚರ್ಯದಿಂದ ಹಿಂತಿರುಗಿ, ನೋಡಿ ಥಟ್ಟನೆ ನಿಂತು ಪ್ರಶ್ನಿಸಿದಳು, ನಮ್ಮ ಮನೆಗೆ ಹೋಗಿದ್ದಿರಿ ಅಂತ ಕಾಣುತ್ತೆ.

ಹೋಗಿದ್ರೂ ನೀನು ಸಿಗ್ತಾ ಇರಲಿಲ್ಲವಲ್ಲ. ಹಿಂದೆ ಒಮ್ಮೆ ಹೋಗಿ ನೀನು ಸಿಕ್ಕದೆ ಹಿಂತಿರುಗಿದ್ದೆ. ಇಂದು ಎಲ್ಲಿಗೆ ಹೊರಟಿದ್ದೀಯ ? ರಿಹರ್ಸಲ್‌ಗಾ ?

ಇಲ್ಲ ಸಿನೇಮಾಗೆ, ಟಿಕೆಟ್ ತೊಗೊಂಡಿದ್ದಾಗಿದೆ.

ಇವತ್ತು ಸಿನೇಮಾಗೆ ನೀನು ಹೋಗೋದೇನು ಬೇಡ ಎಂದು ಹೇಳುವ ಮನಸ್ಸಾಯಿತು ನನಗೆ. ಆದರೆ ಬಾಯ್ಬಿಟ್ಟು ಹೇಗೆ ಹೇಳೋದು ? ನಾನು ಸುಮ್ಮನೆ ಬೇಸರದಿಂದ ಹೇಳಿದೆ, ಎಲ್ಲಿ ಚೌರಂಗಿಯಲ್ಲೇ ? ಹೊತ್ತಾಗಿದ್ರೆ ಬೇಗ ಬಸ್ ಹತ್ತಿ ಬಿಡಿ.

ಹುಂ, ಅಲ್ಲಿ ನಮಗಾಗಿ ನಮ್ಮ ಸ್ನೇಹಿತೆಯರು ಕಾಯ್ತಾ ಇರ್ತಾರೆ. ಜಮುನಾ ತನ್ನ ಸ್ನೇಹಿತೆಯರನ್ನು ಬಿಟ್ಟು, ನನ್ನ ಹತ್ತಿರಕ್ಕೆ ಬಂದು ಹೇಳಿದಳು, ಸುನೀಲ್‌ದಾ, ನೀವೂ ನಮ್ಮೊಡನೆ ಬನ್ನಿ ನಡೀರಿ.

ಬೇಡ ಬೇಡ, ನಿನ್ನ ಸ್ನೇಹಿತೆಯರ ಜೊತೆ ಬಂದು ನಾನೇನು ಮಾಡಲಿ ? ಅವರಿಗೆಲ್ಲ ಸಂಕೋಚವಾಗಬಹುದು.

ಖಂಡಿತವಾಗಿಯೂ ಇಲ್ಲ. ನಿಮಗೆ ಅವರೆಲ್ಲರ ಪರಿಚಯ ಮಾಡಿಕೊಡುತ್ತೇನೆ. ಇವರಿಬ್ಬರೂ ಅರ್ಚನಾ ಹಾಗೂ ನವನೀತ. ನನ್ನ ತರಗತಿಯ ಹುಡುಗಿಯರು. ನಿಮಗೆ ಸುನೀಲ್‌ದಾನ ಬಗ್ಗೆ ಹೇಳಿದ್ದೆನಲ್ಲ. ನಡೀರಿ, ನೀವೂ ಬನ್ನಿ ನಮ್ಮ ಜೊತೆ. ಬರಲಿಲ್ಲಾಂದ್ರೆ ನಿಮ್ಮ ಜೊತೆ ನಾನೆಂದೂ ಸಿನೇಮಾನೇ ನೋಡೋದಿಲ್ಲ....

ಇಲ್ಲಾ ಪುಟ್ಟಿ ಇವತ್ತು ಬೇಡ.

ಪುನಃ ಪುಟ್ಟಿ ?

ನವನೀತ ಎಂಬ ಹೆಸರಿನ ಹುಡುಗಿಯೆಂದಳು, ಏಯ್ ಬಸ್ ಬರ್ತಾ ಇದೆ. ಅದರಲ್ಲೇ ಹತ್ತೋಣ.

ಜಮುನಾ ನನ್ನ ಮುಖವನ್ನೇ ದಿಟ್ಟಿಸಿದಳು. ನಾನಿನ್ನೇನೋ ಹೇಳಬೇಕೆಂದುಕೊಂಡೆ – ನಾನೂ ಆ ಕಡೆಯೇ ಹೊರಟಿದ್ದೇನೆ ನಡಿ, ನಿಮ್ಮ ಜೊತೆ ಬಸ್ಸಿನಲ್ಲಿ ಜೊತೆಯಾಗಿಯೇ ಬರ್ತೀನಿ. ಕೊನೆ ಘಳಿಗೆಯಲ್ಲಿ ಈ ಮಾತುಗಳನ್ನಾಡದೆ ನಾನೆಂದೆ, ನಿನ್ನ ಜೊತೆ ಬಸ್ಸಿನಲ್ಲಿ ಕೊನೇವರೆಗೂ ಬರ್ತೀನಿ.

ನೀವೂ ಆ ಕಡೆಯೇ ಹೋಗ್ತಾ ಇದೀರಾ ?
ನಾನು ಯಾವ ಕಡೆ ಹೋದರೂ ನಡೆಯುತ್ತೆ.

ಬಸ್ಸಿನಲ್ಲಿ ಮೇಲಂತಸ್ತಿನಲ್ಲಿ ಎರಡು ಸೀಟಿನ ಜನ ಎದ್ದು ನಿಂತರು. ನಾನು, ಜಮುನಾ ಒಟ್ಟಾಗಿಯೇ ಕುಳಿತುಕೊಂಡೆವು. ಮೈ ಮೈ ತಾಗಿಸದೆ ವಿಧಿಯಿಲ್ಲ, ಜಮುನಾಳ ಬಿಸಿ ದೇಹ ಸೋಂಕಿದಾಗ, ಬಹಳ ಹಿತವೆನಿಸುತ್ತಿತ್ತು. ನಿಶ್ವಾಸದೊಂದಿಗೆ, ಅವಳ ಎದೆ ಉಯ್ಯಾಲೆಯಾಡುತ್ತಿದೆ. ಇಡೀ ದೇಹ ಸುಗಂಧಿತ. ನಾನು ಪ್ರಶ್ನಿಸಿದೆ, ಇವತ್ತು ನೀನು ತುಂಬಾ ಸೆಂಟ್ ಸವರಿಕೊಂಡಿದೀಯ ಅಂತ ಕಾಣುತ್ತೆ. ಅವಳು ಚಕಿತಳಾಗಿ ದಿಟ್ಟಿಸಿ ಹೇಳಿದಳು, ಮತ್ತೆ ಸಿನೇಮಾಗೆ ಹೋಗುವಾಗ ಯಾರಾದ್ರು ಸೆಂಟ್ ಹಾಕಿಕೊಳ್ಳದೆ ಇರ್ತಾರಾ ?

ನಾನು ನಗುತ್ತ ಹೇಳಿದೆ, ಓ, ಸಿನೇಮಾಗೆ ಹೋಗಬೇಕಾದ್ರೆ ಸೆಂಟ್ ಹಾಕ್ಕೊಳ್ಳೇಬೇಕೂಂತ ನಿಯಮವೇನಾದ್ರೂ ಇದೆಯೇ ?

ಎಲ್ಲರೂ ಸವರಿ ಕೊಳ್ತಾರೆ.

ನೀನು ಸಂಗೀತದ ಶಾಲೆಗೆ ಯಾಕೆ ಹೋಗ್ತಾ ಇಲ್ಲ.

ಅಮ್ಮ ಇನ್ನೊಂದು ತಿಂಗಳು ಹೋಗೋದು ಬೇಡ ಅಂತ ಹೇಳಿದಾಳೆ. ಮುಂದಿನ ತಿಂಗಳೇ ಪರೀಕ್ಷೆ.

ಸಿನೇಮಾಗೆ ಹೋಗಬಹುದಂತೆ, ಸಂಗೀತ ಕಲಿಯೋಕೆ ಹೋದ್ರೆ ಏನು ತೊಂದ್ರೆ ?

ಜಮುನಾ ಬೇಸರದಿಂದ ಹೇಳಿದಳು, ನೀವು ನನ್ನನ್ನು ಬೈತೀರಾ, ಇದರಲ್ಲಿ ನನ್ನದೇನು ತಪ್ಪು ?

ಇಲ್ಲ ನಾನು ಬೈತಾ ಇಲ್ಲ. ನಾನು ಅವಳನ್ನು ಬೈಯಲೂ ಇಷ್ಟಪಡೋದಿಲ್ಲ. ನನಗೆ ಅವಳ ತಲೆ ಕೂದಲು ಸವರಿ, ಬುಲ್‌ಬುಲ್ ನಾನು ನಿನ್ನನ್ನು ಬೈಯಲಿಲ್ಲ, ನನ್ನ ತಲೆ ಕೆಟ್ಟಿದೆ ಅಂತ ಹೇಳಬೇಕೆಂದೆನಿಸಿತು. ಟ್ರಾಮ್, ಬಸ್ಸುಗಳಲ್ಲಿ ಮಾತುಕತೆಯಾಡಲು ಅವಕಾಶವಾದರೂ ಎಲ್ಲಿದೆ ? ಅಕ್ಕಪಕ್ಕದವರಂತೂ ಏನೂ ಕಂಡೇ ಇಲ್ಲವೇನೋ ಎನ್ನುವಂತೆ, ಕಣ್ಣು ಬಾಯಿ ಬಿಟ್ಕೊಂಡು ನೋಡ್ತಾ ಇರ್ತಾರೆ. ಈ ಪಕ್ಕದ ಸೀಟಿನಲ್ಲೂ ಇಬ್ಬರು ಹುಡುಗಿಯರು ಕುಳಿತುಕೊಂಡಿದಾರೆ. ಅವರನ್ನು ನೋಡಬಾರದೇ, ಹಾಳಾದವರು. ಅವರಿಗೆ ಒಬ್ಬ ಹುಡುಗ ಹುಡುಗಿ ಕೂತಿರೋದನ್ನು ನೋಡೋಕೆ ಬಹಳ ಇಂಟರೆಸ್ಟಿಂಗ್. ಏನಾದ್ರೂ ಅವರಿಗೆ ಏಕಾಂತ ಲಭ್ಯವಾಗಬಾರದು ಅಂತ ಅವರ ಭಾವನೆ ಇರಬೇಕು. ನಾನು ಸಿಟ್ಟಿನಿಂದ ನಿಟ್ಟುಸಿರುಬಿಟ್ಟೆ.

ಬಸ್ ಬಹಳ ವೇಗದಿಂದ ಚಲಿಸುತ್ತಿದೆ. ಗುರಿ ಮುಟ್ಟಲು ಇನ್ನು ಕೆಲವು ಕ್ಷಣವೇ ಸಾಕು. ಸಮಯವಿಲ್ಲ, ಇನ್ನು ಸಮಯವಿಲ್ಲ. ಗಂಟಲಿನ ದನಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಮೃದುಗೊಳಿಸಿ ಹೇಳಿದೆ, ನಿನ್ನನ್ನು ನೋಡಬೇಕೂಂತ ನನಗೆ ತುಂಬಾ ಇಷ್ಟವಾಗುತ್ತೆ. ಕಿಟಕಿಯಿಂದ ಹೊರನೋಡುತ್ತ ಜಮುನಾಳೆಂದಳು, ನನಗೂ.

ನಿಮ್ಮನ್ನು ಭೇಟಿಯಾಗೋದು ಅತ್ಯಾವಶ್ಯಕ.

ಅಕ್ಕ ನನ್ನ ಮೇಲೆ ತುಂಬಾ ಹಕ್ಕು ಚಲಾಯಿಸ್ತಾಳೆ. ನನಗದು ಇಷ್ಟವಾಗೋದಿಲ್ಲ.

ಆದರೆ ಭೇಟಿಯಾಗೋದು ಬಹಳ ಅಗತ್ಯ.

ನನ್ನನ್ನು ಈ ನಡುವೆ, ಒಂಟಿಯಾಗಿ ಹೋಗೋಕೆ ಬಿಡೋದೇ ಇಲ್ಲ. ಆ ಕಡೆ, ಸೀಟಿನಲ್ಲಿ ಕುಳಿತಿದ್ದ ಅರ್ಚನಾ ಎಂಬ ಹುಡುಗಿ ಥಟ್ಟನೆ ಕಿರುಚಿದಳು, ಏಯ್ ಜಮುನಾ ನೋಡಲ್ಲಿ, ಅದೇ ಟಿ.ಕೆ.ಪಿ. ನಿಂತುಕೊಂಡಿದ್ದಾರೆ. ನಾನು ಹೇಳಿರಲಿಲ್ಲವಾ ಅವರ ಮದುವೆ ಆಗಿದೆ ಅಂತ. ಜೊತೆಗೆ ಅವರ ಹೆಂಡತಿಯೂ ಇದ್ದಾರೆ.

ಜಮುನಾ ಉತ್ತೇಜಿತಳಾಗಿ ಕೇಳಿದಳು, ಎಲ್ಲಿ ?

ಆಗ ಬಸ್ ಸ್ವಲ್ಪ ನಿಂತಿತ್ತು. ನಾನು ಕೈ ಸರಿಸಿ ಜಾಗ ಬಿಟ್ಟು ಕೊಟ್ಟೆ. ಜಮುನಾ ಎದ್ದು ಕಿಟಕಿಯ ಬಳಿ ಓಡಿದಳು. ನಾನು ಪ್ರಶ್ನಿಸಿದೆ, ಟಿ.ಕೆ.ಪಿ. ಯಾರು ?

ನಮ್ಮ ಇಂಗ್ಲಿಷ್ ಪ್ರೊಫೆಸರ್.

ಏನೇ ಹೇಳು ಅವಳೆ ಅವರ ಹೆಂಡತಿ, ಟಿ.ಕೆ.ಪಿ.ಗೆ ತಕ್ಕ ಹೆಂಡತಿ.

ಹೌದು, ಅವರ ಹೆಂಡತಿಯೂ ಸ್ಮಾರ್ಟ್ ಆಗಿದಾರೆ.

ಏಯ್ ಅಷ್ಟೊಂದು ತಲೆ ಬಗ್ಗಿಸಬೇಡ, ನಮಗ್ಯಾರಿಗೂ ಕಾಣಿಸೋದಿಲ್ಲ.

ಮೂರು ಜನ ಹುಡುಗಿಯರೂ ಸೇರಿ ವಟವಟ ಮಾತಾಡಲಾರಂಭಿಸಿದರು. ಯಾವನೋ ಇಂಗ್ಲಿಷ್ ಪ್ರೊಫೆಸರ್. ಅವನಿಗಾಗಿ ಸಮಯ ವ್ಯರ್ಥ. ನಾನು ಅದನ್ನು ಕೇಳಿಸಿಕೊಳ್ಳಬೇಕಾ ? ಜಮುನಾಳಂತೂ ಬ್ರೆಬೌರ್ನ್‌ನಲ್ಲಿ ಓದ್ತಾ ಇದ್ದಾಳೆ. ಅಲ್ಲಿ ಪುರುಷ ಲೆಕ್ಚರರ್ಸ್ ಇದಾರೋ ಇಲ್ಲವೋ ಅಥವಾ ಯಾವುದಾದರೂ ಕೋಚಿಂಗ್ ಕ್ಲಾಸಿನಲ್ಲಿ ಅಥವಾ ಪ್ರೈವೇಟ್ ಟ್ಯೂಟರ್ ಅರ್ಥಾತ್ ಒಬ್ಬ ಅಡ್ನಾಡಿಡ್ಡಿ ಮನುಷ್ಯ. ಅವನಿಂದಾಗಿ ನಮ್ಮ ಅಮೂಲ್ಯವಾದ ಸಮಯ ನಷ್ಟವಾಗ್ತಾ ಇದೆ. ನಾನು ಸುಮ್ಮನೆ ಹತಾಶನಾಗಿ ಕುಳಿತೇ ಇದ್ದೆ. ಒಂದೊಂದು ಕ್ಷಣವೂ ಮೈಲುಕಲ್ಲಿನ ತರಹ ಬಹುದೂರ. ಆನಂತರ ಮನದಲ್ಲೇ ಎಲ್ಲವನ್ನು ಕೊಡವಿಕೊಂಡು ಸ್ವಾಭಾವಿಕನಾದೆ. ನನ್ನದೇ ತಪ್ಪು. ಯಾರೋ ಒಬ್ಬ ಫಸ್ಟ್ ಇಯರ್ ಹುಡುಗಿ ಸಿನೇಮಾ ನೋಡಲೆಂದು ಹೊರಟಿದ್ದಾಳೆ. ಅವಳು ಸಾಮಾನ್ಯ ವಿಷಯದ ಬಗ್ಗೆಯೂ ಹುಡುಗಾಟ ಆಡೇ ಆಡ್ತಾಳೆ. ಯುವಕ ಪ್ರೊಫೆಸರರಿಗೆ, ಮದುವೆಯಾಗಿದೆಯೋ ಇಲ್ಲವೋ ಅಂತ ಕುತೂಹಲ ತೋರಿಸ್ತಾಳೆ. ಸಾಯಿರಾಬಾನು ಹಾಗೂ ದಿಲೀಪ್‌ಕುಮಾರರ ಬಗ್ಗೆ ಯೋಚನೆ ಮಾಡ್ತಾಳೆ. ಇವೆಲ್ಲ ಸ್ವಾಭಾವಿಕ. ನಾನು ಇದರ ನಡುವೆ ಎದ್ದು ಗಡಸು ದನಿಯಲ್ಲಿ ಇದೆಲ್ಲ ಅಸ್ವಾಭಾವಿಕ ಎಂದರೆ, ನಾನು ಸ್ವಾರ್ಥಿ ಅಂತ ಗೊತ್ತಾಗುತ್ತೆ. ಒಂಟಿಯಾಗಿ ನೋಡದಿದ್ದರೆ ನನಗಾಗೋದಿಲ್ಲ ಎಂದರೆ ತಕ್ಷಣ ಅರ್ಥವಾಗಿ ಬಿಡುತ್ತೆ. ನಾನು ಮನಸ್ಸಿನ ಕ್ಲೇಶವನ್ನು ದೂರ ಮಾಡಿಕೊಂಡು ನಗುಮುಖದಿಂದ ಅವರನ್ನು ದಿಟ್ಟಿಸಿದೆ.

ಅವರೆಲ್ಲ ಇಳಿಯುವ ಸ್ಥಳ ಬಂದಾಗ, ಅವರ ಜೊತೆ ನಾನು ಇಳಿಯಲಿಲ್ಲ. ನಾನು ಬಸ್ಸಿನಲ್ಲೇ ಉಳಿದೆ. ಮೆಟ್ಟಿಲವರೆಗೆ ಹೋಗಿ, ಜಮುನಾ ಥಟ್ಟನೆ ಹಿಂತಿರುಗಿ ಬಂದು, ನಗುಮುಖದಿಂದ ಕುತ್ತಿಗೆ ಕೊಂಕಿಸಿ ಹೇಳಿದಳು, ನಾವಿನ್ನು ಬರ್ತೀವಿ. ಅವಳ ಸುಂದರವಾದ ಕೂದಲು ಹೊಳೆಯುತ್ತಿತ್ತು. ಅವಳು ಸೀರೆಯ ಸೆರಗನ್ನು ಬಲಭುಜದ

ಮೇಲೆ ಹೊದ್ದುಕೊಂಡಿದ್ದಳು. ನಾನು ಹಸನ್ಮುಖಿನಾಗಿ ಹೇಳಿದೆ, ಬೇಗ ಹೊರಡು, ಬಸ್ ಹೊರಟು ಬಿಡುತ್ತೆ. ಆದರೂ ಜಮುನಾ ಒಂದೆರಡು ಸೆಕೆಂಡ್ ನಿಂತೇ ಇದ್ದಳು. ಅನಂತರ ತಕ್ಷಣ ದನಿ ಬದಲಿಸಿ, ಸುನೀಲ್‌ದಾ, ನೀವು ನನಗೆ ಒಂದೂ ಪತ್ರ ಬರೀಲೇ ಇಲ್ಲ ಎಂದು ಹೇಳಿ ಇಳಿದು ಹೋಗಿಬಿಟ್ಟಳು.

ಪತ್ರ ಬರೆಯಲಿಲ್ಲ? ಈ ಮಾತಿನ ಅರ್ಥವೇನು? ಇಷ್ಟೆಲ್ಲ ಹಗರಣದ ನಂತರವೂ, ನಾನು ಪತ್ರ ಬರೆದು, ಪ್ರೇಮ ಪ್ರಸಂಗವನ್ನು ಮತ್ತೊಮ್ಮೆ ಪ್ರಾರಂಭಿಸಬೇಕೆ? ಜಮುನಾಳ ಈ ಪತ್ರ ವಿಚಾರ ನನ್ನಿಂದ ಅರ್ಥ ಮಾಡಿಕೊಳ್ಳಲಾಗಲಿಲ್ಲ. ಆದರೆ ಕೊನೆ ಗಳಿಗೆಯಲ್ಲಿ ಅವಳು ನಿಂತು ಮಾತನಾಡಿದ್ದು ನನಗೆ ವಿಪರೀತ ಇಷ್ಟವಾಗಿತ್ತು ಮತ್ತು ನನ್ನ ನಾಡಿ ಬಡಿತದ ವೇಗ ಹೆಚ್ಚಾಗಿತ್ತು. ಒಳ್ಳೆಯ ಗಾಳಿ ಬೀಸಿ, ಅನಾಯಾಸವಾಗಿ ಎದೆ ತುಂಬಿ ನಿಶ್ವಾಸ ಬಿಡಲು ಸಾಧ್ಯವಾಯಿತು.

ಬಸ್ ಸ್ವಲ್ಪ ದೂರ ಹೋದ ಮೇಲೆ, ಟ್ರಾಫಿಕ್ ಜ್ಯಾಮ್‌ನಲ್ಲಿ ನಿಂತಿತ್ತು. ಸಧ್ಯ ಹಿಂದೆಯೇ ಈ ರೀತಿ ವಾಹನಗಳು ತಡೆಗಟ್ಟಲಿಲ್ಲವಲ್ಲ. ಹಾಗಾಗಿದ್ರೆ ಜಮುನಾಳಿಗೆ ಸಿನೇಮಾಗೆ ಹೋಗಲು ತಡವಾಗಿ ಬಿಡುತ್ತಿತ್ತು. ಈಗವರು ಸಂತೋಷವಾಗಿ ಸಿನೇಮಾ ನೋಡಲಿ. ಕಿಟಕಿಯಿಂದ ನಾನು ಒಬ್ಬ ಪರಿಚಿತ ವ್ಯಕ್ತಿಯನ್ನು ಕಂಡೆ. ಅದೇ ಆಫೀಸಿನ ವನಮಾಲಿ ಬಾಬುಗಳು. ಇಬ್ಬರು ಚಿಕ್ಕ ಹುಡುಗಿಯರ ಕೈ ಹಿಡಿದುಕೊಂಡು, ಫುಟ್‌ಪಾತಿನಲ್ಲಿ ಬಟ್ಟೆ ಕೊಂಡುಕೊಳ್ಳುತ್ತಿದ್ದಾರೆ. ಅವರನ್ನೇ ನಾನು ಮುದಿ ನಾಯಿ ಎಂದಿದ್ದನ್ನು ಜ್ಞಾಪಿಸಿಕೊಂಡು ನನಗೆ ನಗು ಬಂತು. ವನಮಾಲಿ ಬಾಬುಗಳನ್ನು ನೋಡಿದರೆ, ಹಿಂದೆ ಅವರಿಗೆ ಒಳ್ಳೆ ಆರೋಗ್ಯವಿತ್ತೂಂತ ಕಾಣುತ್ತೆ. ವಯಸ್ಸಾದಂತೆ ಅವರು ಕುಗ್ಗಿದ್ದರು. ಅವರ ಎರಡೂ ಭುಜಗಳು ಕುಗ್ಗಿವೆ, ಕೈಗಳು ರೆಕ್ಕೆಯಂತೆ ಉದ್ದವಾಗಿ ಬಿಟ್ಟಿವೆ. ಈಗ ಕನ್ನಡಕದ ನಂಬರೂ ಹೆಚ್ಚಾದಂತೆ ತೋರುತ್ತೆ. ಅವರಿಗೆ ಖಂಡಿತವಾಗಿಯೂ ಕಣ್ಣು ಅಷ್ಟಾಗಿ ಕಾಣೋದಿಲ್ಲ ಅಂತ ಕಾಣುತ್ತೆ. ಅದಕ್ಕೆ ಅವರ ಕೆಲಸದಲ್ಲಿ ಒಮ್ಮೊಮ್ಮೆ ತಪ್ಪಾಗೋದು. ಆಫೀಸಿನಲ್ಲಿ ಅವರ ಮುಖದಲ್ಲಿ ಏನೋ ಒಂದು ರೀತಿಯ ಅಪರಾಧಿ ಭಾವನೆ ಮೂಡಿರುತ್ತೆ. ಆದರೆ ಈಗ ಆ ಹುಡುಗಿಯರ ಕೈಹಿಡಿದು ನಿಂತಿರುವಾಗ, ಅವರ ಮುಖ ಬೇರೆಯದೇ ತರಹ ಕಾಣುತ್ತೆ. ಒಂದು ರೀತಿಯ ರಕ್ಷಕ ಹಾಗೂ ಆಶ್ರಯದಾತನ ಮುಖಭಾವ ಎದ್ದು ಮೂಡಿದೆ ಅವರ ಮುಖದಲ್ಲಿ. ಪ್ರಶಂಸಾ ಭಾವದಿಂದ ಅಂಗಡಿಯವನೊಂದಿಗೆ ಏನೋ ಹೇಳುತ್ತಲಿದ್ದಾರೆ. ತಕ್ಷಣ ಇಳಿದು ಹೋಗಿ ಅವರಲ್ಲಿ ಕ್ಷಮೆ ಕೇಳಬೇಕು ಎಂದೆನಿಸಿತು. ಸ್ವಲ್ಪ ಎದ್ದು ನಿಂತೆ. ಆಮೇಲೆ, ಬೇರೇನೋ ಯೋಚಿಸಿ ಪುನಃ ಕುಳಿತುಬಿಟ್ಟೆ. ನನ್ನ ವ್ಯವಹಾರ ತೀರಾ ನಾಟಕೀಯವೆಂದೆನಿಸಿ, ಅವರು ತಬ್ಬಿಬ್ಬಾಗಿ ಬಿಟ್ಟರೆ ಕಷ್ಟ. ನಾನು ಕ್ಷಮೆ ಯಾಚಿಸಿದರೆ, ಪುನಃ ಅವರು ಹೆದರಿಕೊಂಡು ಬಿಡ್ತಾರೋ ಏನೋ? ನನ್ನನ್ನು ಅಂದು ಭಾವನರು ಗದರಿಸಿದ ವಿಷಯ ಖಂಡಿತವಾಗಿಯೂ ಅವರ ಕಿವಿಗೂ ಬಿದ್ದಿರುತ್ತೆ. ಅಷ್ಟರಿಂದಲೇ ಅವರಿಗೆ ತುಂಬಾ ಸಂತೋಷವಾಗಿರುತ್ತೆ. ಕಿಟಕಿಯಿಂದ ಅವರನ್ನೆ ದಿಟ್ಟಿಸಿ, ಮನದಲ್ಲೇ ಅವರಲ್ಲಿ ಕ್ಷಮೆ ಯಾಚಿಸಿದೆ. ವನಮಾಲಿ

ಬಾಬುಗಳೇ, ವಾಸ್ತವವಾಗಿ ನಾನೇನೂ ಅಂಥ ಕೆಟ್ಟವನೇನಲ್ಲ. ಸಿಟ್ಟಿನ ಭರದಲ್ಲಿ ಆ ರೀತಿ ಮಾತನಾಡಿಬಿಟ್ಟಿದ್ದೆ. ನನ್ನನ್ನು ನೀವು ಕ್ಷಮಿಸುತ್ತೀರಲ್ಲವೇ? ಮನುಷ್ಯ ಒಂದೆರಡು ತಪ್ಪು ಮಾಡೋದು ಸಹಜ. ಜಮುನಾಳನ್ನು ಭೇಟಿಯಾಗಿರಲಿಲ್ಲವೆಂದು, ಅಂದು ನನ್ನ ತಲೆ ಕೆಟ್ಟಿತ್ತು. ಮುಂದೆ ಜಮುನಾಳನ್ನು ಒಂಟಿಯಾಗಿ ಭೇಟಿಯಾದರೆ ನನ್ನ ತಲೆ ಸರಿಯಾಗಿ ಬಿಡುತ್ತೆ. ನಾನು ಪೂರ್ತಿಯಾಗಿ ಬದಲಾಯಿಸಿ ಬಿಡುತ್ತೇನೆ.

ಅವಳೊಬ್ಬಳನ್ನೇ ಹೇಗೆ ನೋಡೋದಕ್ಕಾಗುತ್ತೆ? ಏನೇ ಮಾಡಿದ್ರೂ ಜಮುನಾ ಭೇಟಿಯಾಗ್ತಾನೇ ಇಲ್ಲ. ಈ ನಡುವೆ ಸಂಗೀತದ ಶಾಲೆಗೂ ಅವಳು ಬರುತ್ತಿಲ್ಲ. ಅಂದ ಮೇಲೆ ಅವಳನ್ನು ಕಾಣೋದಾದ್ರೂ ಎಲ್ಲಿ? ಕೆಲವು ದಿನ ಜಮುನಾಳನ್ನು ಕಾಣದೇ ನನ್ನ ಕಾಲು ಕೆರೆಯಲಾರಂಭಿಸಿತು. ಜಮುನಾಳ ಜೊತೆ ಇದ್ದಾಗ ಮೃದುವಾದ ಹುಲ್ಲು ಹಾಸಿಗೆಯ ಮೇಲೆಯೇ ನಡೆಯುತ್ತಿದ್ದೇನೇನೋ ಎನ್ನುವಂತೆ, ನಾಲ್ಕು ಕಡೆ ಅಚ್ಚ ಹಸಿರು ಮರಗಳ ಶ್ವಾಸೋಚ್ಛ್ವಾಸದ, ಸುಗಂಧಿತ ಪರಿಮಳದ ನಡುವೆಯೇ ಇದ್ದಂತೆ ನನಗನಿಸುತ್ತಿತ್ತು. ಪುನಃ ಗುಂಪಿನಲ್ಲಿ, ಮನುಷ್ಯರ ಬಿಸಿ ಬಿಸಿ ನಿಶ್ವಾಸ, ನೈಲಾನು ಕಾಲುಚೀಲ ಧರಿಸಿದ ಕೆಟ್ಟ ಅಸಹ್ಯವಾಸನೆ ನನ್ನ ಮೈ ತಾಕಲಾರಂಭಿಸಿತು. ಜಮುನಾಳನ್ನು ಪಡೆಯಲು, ನಾನು ಏನು ಮಾಡಬೇಕು ಅನ್ನೋದು ತಿಳೀತಾ ಇಲ್ಲವಲ್ಲ. ನಾನು ಒಬ್ಬ ಹದಿನಾರು ವಯಸ್ಸಿನ ಕಿಶೋರಿಯನ್ನು ಬಯಸ್ತಾ ಇದ್ದೇನೆ. ಅದನ್ನು ಪ್ರಪಂಚದ ಜನ ನಂಬೋದಿಲ್ಲ. ಹಿಂದೆ ಮುಂದೆ ಯೋಚಿಸದೆ ನಾನು ಜಮುನಾಳ ಮನೆಗೆ ಫೋನ್ ಮಾಡಿದೆ. ಅಷ್ಟರಲ್ಲೇ ಒಂದು ಚಿಕ್ಕ ತಪ್ಪು ಮಾಡಿಬಿಟ್ಟೆ. ಇನ್ನೇನು ಮಾಡಲಿ ಜಮುನಾಳನ್ನು ಬಿಟ್ಟರೆ, ಬೇರಿನ್ನ್ಯಾರ ಹತ್ತಿರವಾದರೂ ಹೇಳಿದರೆ, ಅವರು ಅದನ್ನು ಮರೆತೇಬಿಡುತ್ತಾರೆ. ಟೆಲಿಫೋನ್ ಒಮ್ಮೆ ರಿಂಗ್ ಮಾಡಿದೊಡನೆಯೇ, ಒಂದು ಗಡಸು ಧ್ವನಿ ತೇಲಿ ಬಂತು, ಎಸ್. ಜಗದೀಶ್‌ರಾಯರ ದನಿ. ಒಂದೆರಡು ಕ್ಷಣ ಸುಮ್ಮನಿದ್ದೆ. ಆತನಿಗೆ ಏನು ಹೇಳಲಿ ಎಂದು ಯೋಚಿಸಿದೆ. ಆತನಿಗೆ ಹೇಳಲೇ.. ಜಮುನಾಳನ್ನು ಸ್ವಲ್ಪ ಕರೆಯಿರಿ, ನಾನು ಅವಳೊಡನೆ ಮಾತ್ರ ಮಾತನಾಡಲು ಬಯಸುತ್ತೇನೆ ಅಂತ. ಆದರೆ ಹಾಗಾಗೋದಿಲ್ಲ. ನಾನು ತಕ್ಷಣ ಬೇರೆ ನಂಬರ್ ಹೇಳಿ, ಇದೇ ನಂಬರೇ ಎಂದು ಕೇಳಿದೆ. ಅದೇ ಗಡಸು ದನಿ ಉತ್ತರಿಸಿತು, ಇಲ್ಲ.

ಮಾರನೇಯ ದಿನ ನಾನು ಸುವಿಮಲನ ಮನೆಗೆ ಹೊರಟು ಬಂದೆ. ಕೆಲವು ದಿನದಿಂದ ಒಂಟಿಯಾಗಿದ್ದು, ಏಕಾಕಿತನ ಬೇಸರ ಬಂದಿತ್ತು. ಸುವಿಮಲ ಸುಮ್ಮನೆ ಮಲಗಿಕೊಂಡು, ಸಿಗರೇಟ್ ಸೇದುತ್ತಿದ್ದ. ತಲೆಯ ಬದಿಯಲ್ಲಿ ಕಾಗದಗಳ ರಾಶಿ, ಏನನ್ನೋ ಬರೆಯುವ ಪ್ರಯತ್ನದಲ್ಲಿದ್ದಾನೆ. ರಸ್ತೆಯ ಪಕ್ಕದ ಚರಂಡಿ ದಾಟಿ, ನಾನು ಕಿಟಕಿಯಿಂದ ಬಗ್ಗಿ ನೋಡಿ ಹೇಳಿದೆ, ಏನಯ್ಯಾ, ಇದೀಯಾ ತಾನೆ? ಒಳ ಹೊಕ್ಕ ಮೇಲೆ ಸುವಿಮಲನೆಂದ, ಏನಮ್ಮ ನಿನ್ನ ವಿಷಯ? ನೀನು, ಶೇಖರ ಇಬ್ಬರೂ ಕಳೆದು ಹೋಗಿದ್ದೀರೋ ಹೇಗೆ?

ನಾನೆಂದೆ, ಎಲ್ಲಿಗೆ ಹೋಗೋದು ? ಶೇಖರನೂ ಹೋಗಿಲ್ಲ.

ಸುವಿಮಲ ಡ್ರಾಯರ್‌ನಿಂದ ಸಿಗರೇಟ್ ಹುಡುಕುತ್ತ ಹೇಳಿದ, ಗೊತ್ತು ಬಿಡೋ ನಿಮ್ಮಿಬ್ಬರ ವಿಷಯ. ನೀನು ಒಂದು ಪುಟ್ಟ ಹುಡುಗಿ ಜೊತೆ ಏನೋ ಕಾರುಭಾರ ನಡೆಸಿದೀಯಂತೆ, ಶೇಖರ ಅದ್ಯಾವುದೋ ಸಾಬರ ಹೆಂಗಸಿನ ಜೊತೆ ಸೇರ್ಕ್ಕೊಂಡಿದಾನಂತೆ.

ಇದನ್ನೆಲ್ಲ ನೀನು ಎಲ್ಲಿಂದ ತಿಳಿದುಕೊಂಡೆ.

ಅವಿನಾಶ ಎಲ್ಲಾ ಹೇಳಿದ್ನಪ್ಪ.

ಆ ಹಾಳಾದವನ ಸುದ್ದಿ ಏನಂತೆ ?

ಈಗವನು ಶೇಖರನ ಕುಣಿತಕ್ಕೆ ತಾಳ ಹಾಕ್ತಾ ಇದ್ದಾನೆ. ಶೇಖರನ ಅವಸ್ಥೆ ಏನೋ ತೀರಾ ಕೆಟ್ಟಿದೆಯಂತೆ, ಅದೇನೋ ಎಲ್.ಎಸ್.ಡಿ. ಟ್ಯಾಬ್‌ಲೆಟ್ ನುಂಗಿದಾನಂತೆ. ಈಗ ಅದರಿಂದ ದಿನಾ ತಲೆ ತಿರುಗಿ, ನಡೆಯೋಕಾಗ್ದೆ ಬೀಳ್ತಾನಂತೆ. ಇಷ್ಟಾದ್ರೂ ಮನೆ ಸೇರಿಲ್ಲವಂತೆ. ಆ ಜಾತಿ ಕುಲವಿಲ್ಲದ ಹೆಂಗಸನ್ನು ಕಟ್ಟಿಕೊಂಡು ಯಾಕೆ ಹೆಣಗಾಡಬೇಕು. ಆ ಹೆಂಗಸು, ಮಗು, ಮಗು, ಅಂತ ಹುಚ್ಚಳಾಗಿ ಬಿಟ್ಟಿದಾಳಂತೆ. ನಿನ್ನೆ ಪಾರಿತೋಷ ಸಿಕ್ಕಿದ್ದ. ಅವರಮ್ಮನಿಗೂ ವಿಷಯ ತಿಳಿದಿದೆ, ಶೇಖರ ತಮಗೆ ಸುಳ್ಳು ಹೇಳಿ ಹೋಗಿದ್ದಾನೆ ಅಂತ. ದಿನಾ ಅತ್ತೂ ಕರೆದೂ ಮಾಡ್ತಾರಂತೆ. ಎಂಥಾ ವಿಪರ್ಯಾಸ ಅಲ್ವಾ ? ಶೇಖರನ ಅಮ್ಮ ಅವರ ಮಗನಿಗಾಗಿ ಅಳ್ತಿದಾರೆ, ಅದೇ ಶೇಖರ ಈ ಕಡೆ, ಇನ್ನೊಬ್ಬ ತಾಯಿಗೆ ಮಗುವನ್ನು ಹುಡುಕಿ ಕೊಡೋದ್ರಲ್ಲಿ ತೊಡಗಿದ್ದಾನೆ. ಇದನ್ನು ಕುರಿತು ನಾಟಕ ಬರೆದರೆ ಹೇಗೆ ? ಆ ಹೆಂಗಸಿನ ಚರಿತ್ರೆಯೂ ತೀರಾ ಆಶ್ಚರ್ಯವಾಗಿದೆ. ನಾನವಳ ಕಥೆ ತಿಳ್ಕೋಬೇಕು. ನಿನಗೆ ಅವಳ ಬಗ್ಗೆ ಪೂರ್ತಿ ವಿಷಯ ಗೊತ್ತಾ ?

ಗೊತ್ತು.

ನಾನು ಕೆಲವು ದಿನಗಳ ಹಿಂದೆ ವೀಣಾಳ ಬಳಿ ಹೋಗಿದ್ದೆ. ವೀಣಾಳ ಅಕ್ಕ ಅದೇ ನೂರ್‌ಜಹಾನ್ ಬೇಗಂ, ಅಪ್ರತಿಮ ಸುಂದರಿ. ಮೈಮೇಲೆ ಪ್ರಜ್ಞೇನೆ ಇಲ್ಲ, ಬಟ್ಟೆ ಬರೆ ಎಲ್ಲ ಅಸ್ತವ್ಯಸ್ತ. ಮೇಲಿಂದ ಮೇಲೆ ಫಿಟ್ಸ್ ಬರ್ತಿದೆ. ಒಮ್ಮೆ ಜೋರಾಗಿ ಅಳೋದು, ಇನ್ನೊಮ್ಮೆ ನಗೋದು ಇವೆಲ್ಲ ನಾಟಕ ತಾನೇ. ಎಷ್ಟಾದ್ರೂ ಸಿನೇಮಾ ಹೆಣ್ಣು.

ಸುವಿಮಲ ಸ್ವಲ್ಪ ನಕ್ಕು ಹೇಳಿದ, ಇಲ್ಲ ಕಣೋ, ಯಾವುದು ನಾಟಕ, ಯಾವುದು ನಾಟಕವಲ್ಲ ಅನ್ನೋದು ಚೆನ್ನಾಗಿ ಅರ್ಥವಾಗುತ್ತೆ. ಇಷ್ಟು ಚೆನ್ನಾಗಿ ಅರ್ಥವಾಗದೆ ಇದ್ದಿದ್ದರೆ ಚೆನ್ನಾಗಿರುತ್ತಿತ್ತು.

ಅವಳ ಗಂಡ ಏನಂತಾನೆ ? ಮಗನ್ನ ಹಿಂತಿರುಗಿ ಕೊಡೋದಿಲ್ವಂತಾ ?

ಇಲ್ಲ. ಅವನು ಬರೇ ಮೋಸಗಾರ. ಬೇರೊಬ್ಬಳನ್ನು ಮದುವೆ ಮಾಡಿಕೊಂಡು ಬಿಟ್ಟಿದ್ದಾನೆ. ಹೊಸ ಹೆಂಡತಿಯನ್ನೂ ಸಿನೇಮಾ ಸೇರಿಸಲು ಪ್ರಯತ್ನ ಪಡ್ತಾ ಇದಾನಂತೆ. ಅವನೇನು ಆ ಹುಡುಗನ್ನ ಹಿಂತಿರುಗಿಸಿ ಕೊಡೋದಿಲ್ಲ. ಒಂದು ವೇಳೆ ನೂರ್‌ಜಹಾನ್ ಅವನು ಹೇಳಿದಷ್ಟು ಹಣ ಕೊಟ್ಟು ಕೊಂಡುಕೊಂಡರೆ ಹುಡುಗನೂ

ಪ್ರಾಕ್ಟಿಕಲ್ ಮುಸ್ಲಿಮ್ ಆಗಿ ಬಿಡುತ್ತಾನೆ. ಅವನು ಅದಕ್ಕೆ ಒಪ್ತಾ ಇಲ್ಲ. ಅವನಿಗೂ ಅಪ್ಪ ಅನ್ನೋ ಮಮತೆ, ಮಗೂನ ನೋಡಬೇಕೂಂತ ಆಸೆ ಇರುತ್ತೆ. ನಿಜವಾಗಿ ಅವನ ಆಸೆ ಏನೂ ಅಂದ್ರೆ ನೂರ್‌ಜಹಾನ್‌ಳನ್ನು ಇಲ್ಲೇ ಹಿಡಿದು ಇಟ್ಟುಕೊಳ್ಳಬೇಕೂಂತ. ಅವಳಿಗೆ ತೊಂದ್ರೆ ಮಾಡ್ಬೇಕು ಅಂತ ಅಲ್ಲ. ಅವಳನ್ನು ಇಲ್ಲಿನ ಸಿನೇಮಾ ಲೈನಿಗೆ ಸೇರಿಸಿ, ದುಡ್ಡು ದೋಚೋ ಪ್ರಯತ್ನ.

ನೂರ್ ಜಹಾನ್ ತನ್ನ ಹೆಸರನ್ನು ಬದಲಾಯಿಸಿಕೊಳ್ಳಲು ಸಾಧ್ಯವಿಲ್ಲವೇ ?

ಅದು ಹೇಗೆ ಸಾಧ್ಯ ? ನೂರ್‌ಜಹಾನ್ ಈಗ ಬಾಂಗ್ಲಾದೇಶದ ಪ್ರಜೆ. ಅವಳನ್ನು ಸಾಧನಾ ಅಂತ ಸ್ವೀಕರಿಸಲು ಸಾಧ್ಯವಿಲ್ಲ. ಅದೇ ತಾನೇ ಬಂದಿರೋದು ಈಗ ತೊಂದರೆ. ಅಪ್ಪ ಅಮ್ಮ ಇಬ್ಬರೂ, ಬೇರೆ ಬೇರೆ ದೇಶಗಳ ನಾಗರಿಕರಾಗಿದ್ದರೆ ಅದೂ ಎರಡೂ ಶತ್ರು ದೇಶಗಳಿಗೆ ಸೇರಿದವರಾಗಿ ಬಿಟ್ಟಿದ್ದರೆ, ಆ ಮಗುವಿನ ಅವಸ್ಥೆ ಏನಾಗಬೇಕು ನೀನೇ ಹೇಳು.

ಇದರಲ್ಲಿ ನೂರ್‌ಜಹಾನ್‌ಳೇ ತ್ಯಾಗ ಮಾಡಬೇಕು. ತಪ್ಪು ಅವಳದೇ. ಅವಳೇ ತಾನೇ ಗಂಡ ಹಾಗೂ ಮಗನ್ನ ಬಿಟ್ಟು ಓಡಿ ಹೋಗಿದ್ದು. ಆಗ ಅವಳಿಗೆ ಈ ಯೋಚನೆ ಇರಲಿಲ್ಲವೇ ? ನನಗೆ ಆ ಹೆಂಗಸನ್ನ ಕಂಡ್ರೆ ಆಗೋದಿಲ್ಲ.

ನೀನೇ ಹೇಳು ತಾರ್ಕಿಕವಾಗಿ ಯೋಚಿಸಿದಾಗ ನೀನು ಹೇಳೋದೇನೋ ಸರಿ. ಆದರೆ ಇದು ತರ್ಕಕ್ಕೆ ಸಂಬಂಧಿಸಿದ್ದಲ್ಲವಲ್ಲ. ಮಗನಿಗಾಗಿ, ನೂರ್‌ಜಹಾನಳೂ ಕೂಡಾ ಬಹಳ ಹಂಬಲಿಸ್ತಾನೇ ಇದ್ದಾಳೆ. ಆ ಹೆಂಗಸಿಗೆ ಒಂದಿಷ್ಟೂ ಜ್ಞಾನವಿಲ್ಲ. ಐಶ್ವರ್ಯ ಸುಖವನ್ನು ಅನುಭವಿಸೋದು ಬಿಟ್ಟು ಬೇರಿನ್ನೇನೂ ಆಕೆಗೆ ಗೊತ್ತಿಲ್ಲ. ಅದಲ್ಲದೆ ಅವಳು ಬಾಂಗ್ಲಾದೇಶದ ಫಿಲ್ಮ್‌ನಲ್ಲಿ ಹೆಸರು ಮಾಡಿದಾಳೇಂತ ಕೇಳ್ದೆ. ಬೇಕಾದಷ್ಟು ದುಡ್ಡು ಮಾಡಿದ್ದಾಳೆ. ಅಂದ ಮೇಲೆ ಕೇವಲ ಮಗುವಿಗಾಗಿ ಯಾಕೆ ಹುಚ್ಚು.

ನಾನು ಸ್ವಲ್ಪ ಸಿಡುಕಿದೆ, ನೀನು ವಿಷಯವನ್ನು ಉತ್ಪ್ರೇಕ್ಷೆ ಮಾಡಿ ನೋಡ್ತೀಯ. ಸುವಿಮಲ ಇದು ಇನ್‌ಸ್ಟಿಂಕ್ಟ್. ಜಂತು ಪ್ರಾಣಿಗಳು ಕೂಡಾ ತಮ್ಮ ಮಕ್ಕಳು ಕಳೆದು ಹೋದರೆ ಚಡಪಡಿಸ್ತವೆ. ಪ್ರಪಂಚದಲ್ಲಿ ಮಿಕ್ಕೆಲ್ಲದ್ದಕ್ಕಿಂತ ಇದರ ದುಃಖವೇ ಹೆಚ್ಚಿನದು.

ನನಗೆ ಇದನ್ನೆಲ್ಲ ಯೋಚಿಸೋದಕ್ಕೆ ಸಾಧ್ಯವಾಗೋದಿಲ್ಲ. ನಾನೀಗ ನನ್ನ ಸ್ವಂತ ವಿಷಯದಲ್ಲೇ ತಲ್ಲೀನನಾಗಿ ಬಿಟ್ಟಿದೀನಿ.

ನಾನು ಕೂಡಾ ನನ್ನ ಸ್ವಂತದ ವಿಷಯದ ಬಗ್ಗೆಯೇ ಆಸಕ್ತನಾಗಿರೋದು. ಆದರೂ ಈ ವಿಷಯದಲ್ಲಿ ಮೆತ್ತಗಾಗದಿರುವಷ್ಟು ಕಟುಕನೇನಲ್ಲ. ಸ್ವಂತ ಸಮಸ್ಯೆಗಳಿದ್ದಾಗಲೇ, ಇತರರ ಸಮಸ್ಯೆ ಕಣ್ಣಿಗೆ ಚೆನ್ನಾಗಿ ಬೀಳೋದು. ಶೇಖರನಂತೂ ಈ ಹೆಂಗಸಿನ ಸಲುವಾಗಿ, ಕೆಲ್ಸಗಿಲ್ಸ ಎಲ್ಲವನ್ನೂ ಮರೆತುಬಿಟ್ಟಿದಾನೆ. ಅವಿನಾಶನಂತೆ ನಿಷ್ಠುರನಾದಂಥ ಹುಡುಗ ಕೂಡಾ ಅಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡ್ತಾ ಇದಾನೆ. ಆ ಹೆಂಗಸಂತೂ ಒಂದೇ ಸಮನೆ ಹೊಡ್ಕೋತಾ ಇದ್ದಾಳೆ. ಮಗು ವಾಪಸು ಸಿಗೋತನಕ ಇಲ್ಲೇ ಇರ್ತೀನಿ, ಬೇಕಾದ್ರೆ ಭಿಕ್ಷೆ ಎತ್ತೋ ಪ್ರಸಂಗ ಬಂದರೂ ಸರಿ ಅಂತಾಳೆ.

ನಾನು ಮೆಲ್ಲನೆ ಎಂದೆ, ಅದಂತೂ ಸಾಧ್ಯವಿಲ್ಲ. ಅವಳು ಹಿಂತಿರುಗಲೇಬೇಕು. ಯಾರ್ಯಾರು ಅಲ್ಲಿಗೆ ಹೋಗಿದ್ದಾರೋ, ಅವರು ಹಿಂತಿರುಗದೆ ವಿಧಿಯಿಲ್ಲ. ವಿಚ್ಛೇದನ ಆಗಿ ಹೋಗಿದೆ. ಹುಡುಗನ್ನ ಕರೆದುಕೊಂಡು ಹೋಗಲೆಂದೇ ನೂರ್‌ಜಹಾನ್ ಹಿಂತಿರುಗಿದ್ದಾಳೆ. ಆದರೆ ಪೂರ್ವ ಬಾಂಗ್ಲಾದ ಮಣ್ಣಿಗಾಗಿ ನನ್ನ ಹಾಗೂ ನಿನ್ನ ಎದೆ ಹೊಡ್ಕೊಳ್ಳೋದಿಲ್ವೆ ? ದುರ್ಗಾಪೂಜೆಯ ಗಡಿಬಿಡಿ ನೆನಪಾಗೋದಿಲ್ವೆ ? ವಟವೃಕ್ಷದಲ್ಲಿನ ತಕ್ಷಕನ ಕೂಗು, ರಾತ್ರಿಯ ವೇಳೆ ಮನೆಯ ಹತ್ತಿರ ನೀರಿನ ಕಲಕಲ ಸದ್ದು. ನಾವಂತೂ ಅಲ್ಲಿಗೆ ಪುನಃ ಹಿಂತಿರುಗೋದಿಲ್ಲ. ನೂರ್‌ಜಹಾನ್‌ಳನ್ನು ಕಂಡರೆ ಮನಸ್ಸಿನಲ್ಲೇ ಹೊಟ್ಟೆಕಿಚ್ಚಾಗುತ್ತೆ. ಜಾತಿ ಕಳೆದುಕೊಂಡರೂ ಅವಳು ಇಲ್ಲಿಗೇ ಹಿಂತಿರುಗಿದ್ದಾಳೆ. ಆದರೆ ಅವಳಿಗೆ ಈ ಕಡೆ ಯಾಕೆ ವ್ಯಾಮೋಹ ? ಅವೆಲ್ಲ ಆಗೋದಿಲ್ಲ. ಪರಿಸ್ಥಿತಿ ಒದಗಿ ಬಂದರೆ, ಅವಳನ್ನು ಓಡಿಸ್ತೀನಿ.....

ನೀನ್ಯಾಕೆ ಅಷ್ಟೊಂದು ನಿಷ್ಠುರವಾಗಿ ಮಾತನಾಡ್ತೀಯ ? ಆಕೆ ಪಾಪ ಅಸಹಾಯಕ ಹೆಣ್ಣು. ಆಕೆಗೆ ಜಾತಿ ಧರ್ಮದ ಬಗ್ಗೆ ಏನು ಗೊತ್ತಿದೆ ? ಆಕೇನ ನೋಡಿದರೆ ಪೂರ್ವ ಬಂಗಾಲದ ಆತ್ಮ ಇದೀಗ ತಪ್ಪು ಮಾಡಿ ಅಳುತ್ತಿದೆಯೋ ಏನೋ ಎಂದೆನಿಸುತ್ತೆ.

ಇರಲಿ ಬಿಡೋ, ನೀನೇನು ಅಷ್ಟೊಂದು ಕವಿಯಾಗೋ ಪ್ರಮೇಯವೇನಿಲ್ಲ.

ನಿನಗೇನೂ ಅನ್ನಿಸೋದಿಲ್ಲ ಬಿಡು. ಎರಡೂ ಬಾಂಗ್ಲಾ ಪುನಃ ಒಂದು ವೇಳೆ ಒಂದಾಗಲು ಸಾಧ್ಯವಾದ್ರೆ ! ನನಗೇನೋ ನಂಬಿಕೆ ಇದೆ, ಒಂದಲ್ಲ, ಒಂದು ದಿನ ಅದು ಸಾಧ್ಯವಾಗುತ್ತೆ ಅಂತ.

ನಿನಗೆ ಆ ರೀತಿ ನಂಬಿಕೆ ಇದ್ದರೆ ಒಳ್ಳೆಯದೇ ಬಿಡು. ನಾವು ಇನ್ನೆಷ್ಟು ದಿನಾ ಅಂತ ಉಳಿದಿರ್ತೇವೆ. ನಮ್ಮ ಜೀವಮಾನದಲ್ಲಂತೂ ಅದನ್ನು ಕಾಣೋದು ಸಾಧ್ಯವಿಲ್ಲ.

ನೀನೊಬ್ಬ ಡ್ಯಾಮ್ ಪೆಸಿಮಿಸ್ಟ್. ಅಲ್ಲಿ ಹೊಸದಾಗಿ ಸ್ವಾಧೀನತೆಯ ಆಂದೋಲನ ಪ್ರಾರಂಭವಾಗಿದೆ. ನಾವಂತೂ ಒಂದಾಗೋಕೆ ಒಪ್ಪಿಕೊಂಡೇ ಇದ್ದೇವೆ. ಅವರೂ ಒಂದು ವೇಳೆ ಒಪ್ಪಿಕೊಂಡರೆ ಆಗ ಯಾರು ಹೊಡ್ಕೋತಾರೆ ಪಶ್ಚಿಮದ ಆ ತುಂಡನ್ನು.

ಇಡೀ ಪ್ರಪಂಚ ದೋಚಿಕೊಳ್ಳುತ್ತೆ.

ಪ್ರಪಂಚದಲ್ಲೆಲ್ಲ ಈಗ ಸ್ಪರ್ಧೆ. ನಮ್ಮ ವಿಷಯ ಯಾರು ಯೋಚಿಸ್ತಾರೆ ? ಅದಲ್ಲದೆ ಪೂರ್ವ ಬಂಗಾಲದ ಆಂದೋಲನದಲ್ಲಿ ನಮ್ಮೊಂದಿಗೆ ಸೇರಲು ಯಾರಿಗೂ ಸ್ವಲ್ಪವೂ ಇಷ್ಟವಿಲ್ಲ.

ಇರಲಿ ಬಿಡೋ, ಇವೆಲ್ಲ ಯೋಚಿಸಲು ಇವತ್ತು ನಂಗೊಂದಿಷ್ಟೂ ಇಷ್ಟವಾಗ್ತಾ ಇಲ್ಲ. ನಡಿ ಹೊರಡೋಣ ?

ಹೊರಟು ಎಲ್ಲಿಗೆ ಹೋಗೋದು ?

ನಿಮ್ಮನೇಲಂತೂ ಚಹ ಕುಡಿಸೋ ಸಿಸ್ಟಂ ಇಲ್ಲ ಆದ್ದರಿಂದ, ಓಣಿಯ ಕೊನೆಯಲ್ಲಿರೋ ಅಂಗಡಿಗೆ ಹೋಗಿ ಕುಡಿಯೋಣ. ಸುವಿಮಲ ಸ್ವಲ್ಪ ನಕ್ಕು ಹೇಳಿದ, ಮನೇನಲ್ಲಿ ನನಗೆ ಒಂದಿಷ್ಟೂ ಪ್ರೆಸ್ಟೀಜ್ ಇಲ್ಲ. ಚಹ ಬೇಕೂಂದ್ರೆ, ಮುಖ ತಿರುಗಿಸ್ತಾರೆ, ನಡಿ ಹೊರ ಹೊರಡೋಣ.

ಸುವಿಮಲ ಪಂಚೆಯನ್ನು ಸರಿಯಾಗಿ ಉಟ್ಟುಕೊಂಡು ಜುಬ್ಬ ಏರಿಸಿಕೊಂಡ ಕನ್ನಡಿಯ ಮುಂದೆ ನಿಂತು ಗಮನವಿಟ್ಟು ಕೂದಲನ್ನು ಬಾಚಿಕೊಂಡ, ಹೊರಡುವ ಮುನ್ನ ಲೆಟರ್ ಬಾಕ್ಸನ್ನು ಒಮ್ಮೆ ಬಗ್ಗಿ ನೋಡಿದ, ಯಾವ ಪತ್ರವೂ ಇರಲಿಲ್ಲ. ಸ್ವಲ್ಪ ದೂರ ನಡೆದು ಹೋದ ಮೇಲೆ ಹೇಳಿದ, ಅದೇನೋ ಇಷ್ಟು ದೂರ ಹೊರಟು ಬಂದಿದೀಯಾ ? ನಾನೆಂದೆ, ನನಗಿವತ್ತು ಮನಸ್ಸು ಸರಿಯಾಗಿರಲಿಲ್ಲ. ಸುವಿಮಲನೆಂದ, ನನಗೂ ಇವತ್ತು ಮನಸ್ಸು ಸರಿಯಾಗಿರಲಿಲ್ಲ. ನೀನು ಒಂದು ವೇಳೆ ಮನೆಗೆ ಬಾರದಿದ್ದರೆ ನಾವಿವತ್ತು ಮನೆಯಿಂದ ಹೊರ ಹೊರಡ್ತಾನೇ ಇರಲಿಲ್ಲ.

ನಾನು ಅವನನ್ನು ಕೇಳಿದೆ, ಮನಸ್ಸು ಕೆಡೋದಕ್ಕೇನಾಯ್ತು ? ಸುವಿಮಲ ಬೆರಳಿನಿಂದ ಮೂಲೆಯ ಮಹಡಿ ಮನೆಯೊಂದನ್ನು ತೋರಿಸಿ ಹೇಳಿದ, ಆ ಮನೇನಲ್ಲಿ ಒಬ್ಬ ಹುಡುಗಿ ಇದ್ದಾಳೆ. ಆ ಹುಡುಗಿಯ ಬಾಡಿದ ಮುಖ ಇಡೀ ದಿನ ಮನಸ್ಸಿಗೆ ಜ್ಞಾಪಕವಾಗ್ತಾ ಇರುತ್ತೆ. ಆ ಹುಡುಗೀನ ನಾನು ಮದುವೆ ಮಾಡ್ಕೋಳ್ಳೋಣ ಅಂತ ಅಂದುಕೊಂಡಿದೀನಿ.

ನಾನು ಆಶ್ಚರ್ಯದಿಂದ ಪ್ರಶ್ನಿಸಿದೆ, ಪುನಃ ಬೇರೆ ಹುಡುಗಿ ಯಾಕೋ ? ಆ ನಿನ್ನ ಹಿಂದಿನ ಹುಡುಗಿ ಏನಾದಳೋ ? ಟೆಲಿಫೋನ್ ಆಪರೇಟರ್ !

ಸುವಿಮಲ ಚಕಿತನಾಗಿ ಪ್ರಶ್ನಿಸಿದ, ಯಾವ ಟೆಲಿಫೋನ್ ಆಪರೇಟರ್ ?

ಆ ಅರುಣನ ಆಫೀಸಿನಾಕೆ. ಅವಳನ್ನು ನೋಡಿ ಒಂದು ಕ್ಷಣ ನಿನ್ನ ಜೀವನವೇ ಬದಲಾಗಿತ್ತು ಮತ್ತು ತರಂಗಗಳೆದ್ದಿದ್ದವು, ನೆನಪು ಮಾಡ್ಕೊಳ್ಳೋ.

ಓ, ಆ ಹುಡುಗೀನಾ ? ಛೆ ! ಅದು ಬರೀ ಮೋಸ. ಅದಕ್ಕೆ ಬರೀ ದುಡ್ಡಿನಾಸೆ. ಅರುಣ ಅಂದುಕೊಂಡಿದ್ದ, ಆಕೆಗೆ ತನಗೆ ಮದುವೆಯಾಗಿದೆ ಅನ್ನೋದು ಗೊತ್ತಿಲ್ಲ ಅಂತ. ಅದಕ್ಕೇ ಅಷ್ಟೊಂದು ವಯ್ಯಾರ ಮಾಡಿದ್ದಳು. ನಾನೊಂದು ದಿನ ಅವಳನ್ನು ಮಾತನಾಡಿಸಲೆಂದು ಹೋಗಿದ್ದೆ. ನನಗವಳು ವಿಳಾಸವನ್ನೇ ಕೊಡಲಿಲ್ಲ.

ನಿನ್ನ ಗುರುತಿಲ್ಲ ಪರಿಚಯವಿಲ್ಲ. ನಿನಗ್ಯಾಕಯ್ಯ ಅವಳು ತನ್ನ ವಿಳಾಸ ಕೊಡ್ತಾಳೆ. ತುಂಬಾ ಹುಡುಗರು ಅವಳೊಂದಿಗೆ ಮಾತನಾಡಲು ಹವಣಿಸಿರಬೇಕು ಅಂತ ಕಾಣುತ್ತೆ.

ಏನಿಲ್ಲ. ಅರುಣ ನನಗವಳನ್ನು ಪರಿಚಯ ಮಾಡಿಸಿದ್ದ. ಅನಂತರ ಒಂದು ದಿನ ನಾನವಳನ್ನು, ಅರುಣನ ಸಾಹೇಬರೊಡನೆ ಗಾಡಿ ಹತ್ತುತ್ತಿರೋದನ್ನು ನೋಡಿದೆ. ನಾನೇನು ಮಾಡಲಿ, ನಾನವಳನ್ನು ರಕ್ಷಿಸುವ ಪ್ರಯತ್ನವನ್ನು ಕೂಡಾ ಮಾಡಿದ್ದೆ.

ಸರಿ ಬಿಡು ಅರ್ಥವಾಯ್ತು. ಈ ಹೊಸ ಹುಡುಗಿ ಸಮಾಚಾರವೇನು ?

ಆ ಹುಡುಗಿ ನೋಡೋಕೆ ಚೆನ್ನಾಗಿದ್ದಾಳೆ, ಶಾಂತ ಸ್ವಭಾವ. ಹೊಳೆವ ಭಾವ ಪೂರ್ಣ ಮುಖದಲ್ಲಿ ಅಗಲವಾದ ಬಟ್ಟಲುಗಣ್ಣು.....

ಅವಳ ರೂಪ ವರ್ಣಿಸೋದೇನೂ ಬೇಕಿಲ್ಲಯ್ಯ. ವಿಷಯ ಏನು ಅನ್ನೋದನ್ನು ಸರಳ ಭಾಷೆಯಲ್ಲಿ ಹೇಳಬಾರದೆ.

ಮೊದಲು ನನಗವಳ ಪರಿಚಯವಿರಲಿಲ್ಲ. ವಠಾರದ ಹುಡುಗಿಯರ ಮೇಲೆ ಯಾರು ತಾನೇ ಕಣ್ಣು ಹಾಯಿಸ್ತಾರೆ ? ಕೆಲವು ದಿನಗಳ ಹಿಂದಷ್ಟೆ ನಾನವಳನ್ನು

ಕಂಡದ್ದು. ಆ ಹುಡುಗಿ ಬಹಳ ಗಂಭೀರ ಗೊತ್ತಾ? ಮೊನ್ನೆ ಆ ಹುಡುಗೀನ ನೋಡೋಕೆ ಒಂದು ಹಿಂಡು ಜನ ಬಂದಿದ್ದರು. ಹುಡುಗಿ ಸ್ವಲ್ಪ ಉಗ್ಗುತ್ತಾಳೆ. ಅವರಪ್ಪ ಅಷ್ಟೊಂದು ವ್ಯವಹಾರಸ್ಥನಲ್ಲ. ಆದಕ್ಕೆ ಮಾತುಕತೆಯಾಡಲು, ನಮ್ಮ ಮನೆಯಿಂದ ಯಾರಾದರೊಬ್ಬರು ಬನ್ನಿ ಅಂತ ಕರೆಯೋದಕ್ಕೆ ಬಂದಿದ್ದಳು ಅಂತ ನಾನೇ ಹೋಗಿದ್ದೆ. ಎಂಥಾ ಕ್ರೂರ ವ್ಯವಹಾರ. ಅದರ ಬಗ್ಗೆ ನಾನೇನು ಹೇಳಲಿ? ನಾಲ್ಕು ಜನ ಧಾಂಡಿಗರು ಬಂದಿದ್ದರು. ಪೂರಿ, ಆಲೂಪಲ್ಲೆ ಹಾಗೂ ಸಿಹಿಯನ್ನು ಚೆನ್ನಾಗಿ ಮುಕ್ಕಿದರು. ಹುಡುಗಿಗೆ ಸ್ವಲ್ಪ ಕೂದಲು ಬಿಚ್ಚಿ ತೋರಿಸಮ್ಮ ಎಂದರು. ಸ್ವಲ್ಪ ನಡೆಸಿದರು. ಹಾಡು, ಅಡಿಗೆ, ಹೊಲಿಗೆ ಬರುತ್ತ ಅಂತ ವಿಚಾರಿಸಿಕೊಂಡರು. ಆನಂತರ ಭೂದೇವ ಮುಖರ್ಜಿಯವರ ಲೇಖನದಿಂದ ಉಕ್ತಲೇಖನ ಬರೆಸಿದರು. ನೀನೇ ಹೇಳು ಬಾಂಗ್ಲಾ ದೇಶದಲ್ಲಿ ಎಷ್ಟು ಜನರಿಂದ ಭೂದೇವ ಮುಖರ್ಜಿಯವರ ಪುಸ್ತಕದ ಉಕ್ತಲೇಖನವನ್ನು ಸರಿಯಾಗಿ ಬರೆಯಲು ಸಾಧ್ಯ? ಅದಲ್ಲದೆ, ಇನ್ನೂ ಸೆಕೆಂಡ್ ಇಯರ್ ಓದ್ತಾ ಇರೋ ಹುಡುಗಿ. ಸಂಕೋಚ, ನಾಚಿಕೆಯಿಂದ ನೀಲಿಯಾಗಿ ಬಿಟ್ಟಿದ್ದಳು. ಆ ಬಾಡಿದ ಮುಖ ನೋಡಿ ನನ್ನೆದೆ ಒಡೆದು ಹೋಯಿತು. ಕೋಳಿ ವ್ಯಾಪಾರದ ತರಹ ಅವರು ಹುಡುಗಿಯ ಹೊಟ್ಟೆ ಹೊಕ್ಕಳು ಕೂಡಾ ನೋಡ್ತಿದ್ದರೋ ಏನೋ. ಆದರೆ ಸಧ್ಯ ನೋಡಲಿಲ್ಲ. ಹುಡುಗಿ ಮುಖಕ್ಕಿಂತ ಮೈ ಬಣ್ಣ ಸ್ವಲ್ಪ ಕಪ್ಪು ಅಂತ ಕಾಣುತ್ತೆ. ಆನಂತರ ವರನ ತಂದೆ, ಹುಡುಗಿಯ ತಂದೆಗೆಂದರು, ಅದೂ ಆ ಹುಡುಗಿಯ ಎದುರೇ, ಹುಡುಗಿ ಏನೂ ಅಂಥಾ ತಿಳಿ ಬಣ್ಣದವಳೇನಲ್ಲ. ಬರೀ ಬಂಗಾರವಲ್ಲ, ಪೂರ್ತಿ ಇಪ್ಪತ್ನಾಲ್ಕು ಕ್ಯಾರಟ್ ಅಪ್ಪಟ ಚಿನ್ನವನ್ನೇ ಕೊಡಬೇಕು. ಹುಡುಗನ ಅಪ್ಪ ಅಂಥ ಭಾರಿ ಏನಲ್ಲ. ಬರೀ ಸಾಧಾರಣ ಸ್ಕೂಲು ಮಾಸ್ತರರು. ಅವರ ಮೂಗು ಕೊಯ್ದು, ಚಿಂದಿ ಮಾಡ್ಬೇಕು, ಚೆನ್ನಾಗಿ ಬಾರಿಸಿ ಉಸಿರೆತ್ತದಂತೆ ಮಾಡಬೇಕೆಂದೆನಿಸಿತು. ಏನೇ ಆಗಲಿ ಆ ಹುಡುಗಿಗಾದ ಅವಮಾನ ನೋಡಿ, ನಾನು ಆ ಹುಡುಗಿಯನ್ನು ಮದುವೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿಬಿಟ್ಟೆ.

ನಿನಗವಳನ್ನು ಕೊಟ್ಟು ಮದುವೆ ಮಾಡಿ ಕೊಡುವವರ್‍ಯಾರು?

ನಮ್ಮ ಜಾತಿ ಏನೋ ಒಂದೇ. ನಾನೊಂದು ಕೆಲಸ ಹುಡುಕಿಕೊಳ್ಳಬೇಕು..

ಇನ್ನು ನೀನು ಕೆಲಸ ಹುಡುಕಿಕೊಳ್ತೀಯ?

ಅವಮಾನ ಮಾಡಬೇಡ್ವೋ. ಎಂ.ಎ.ಡಿಗ್ರಿ ಇದೆ ಅನ್ನೋದನ್ನು ಮರೀಬೇಡ. ಸುಮ್ಮನೆ ಮಾಸ್ತರಿಕೆ, ಮಾಡೋ ನೆವದಲ್ಲಿ ಅನ್ಯಾಯ ಮಾಡೋನಲ್ಲ. ಅಂತಲೇ ಇಷ್ಟು ದಿನ ಕೆಲಸ ಸಿಕ್ಕಿಲ್ಲ. ಇದರಲ್ಲಿ ಅಪಮಾನವೆಲ್ಲಿಯದು? ಹರಿಲಾಲ್ ಬಾಬುಗಳ ಕಂಪೆನಿಯಲ್ಲಿ ಒಂದು ಸೇಲ್ಸ್‌ಮನ್ನಿನ ಕೆಲಸ ಖಾಲಿ ಇದೆ ಅಂತ ಕೇಳಿದೆ. ಈ ಸಲ ಅವರನ್ನು ಕಂಡು ಹೇಳ್ತೀನಿ, ಸುಮ್ಮನೆ ಹೇಳೋದಲ್ಲ ಅವರ ಮನೆಗೆ ಹೋಗಿ ಬೇಡಿಕೊಳ್ತೇನೆ. ಅವರ ಕಾಲು ಹಿಡಿದು ಅವರ ಮಗನ ಅಂಡು ಬೇಕಾದರೂ ತೊಳಿತೀನಿ. ಅವರ ರೋಗಿಷ್ಠ ಹೆಂಡತಿಯ ಸೇವೇನೂ ಮಾಡ್ತೀನಿ. ಇಷ್ಟಾದರೂ ಅವರು ನನಗೆ ಕೆಲಸ ಕೊಡೋದಿಲ್ಲವೇ? ನನ್ನನ್ನು ಏನೂಂತ ತಿಳ್ಕೊಂಡಿದೀಯ.

ನಾನು ನಗುತ್ತ ಕೇಳಿದೆ, ಕೆಲಸ ಸಿಕ್ಕಿದ ತಕ್ಷಣ ಆ ಹುಡುಗೀನ ನೀನು

ಮದುವೆಯಾಗ್ತೀಯ. ನಿನ್ನ ಜೊತೆ ಹುಡುಗಿ ಮಾತನಾಡಿದಳಾ ?

ಓ ಮಾತನಾಡೋ ಅವಶ್ಯಕತೆ ಏನಿಲ್ಲ. ನಾನವಳ ಅಪಮಾನಿತ, ಬಾಡಿದ ಮುಖ ಕಂಡಿದ್ದೇನೆ. ಅದರಿಂದ ಏನು ಗ್ರಹಿಸಿಕೊಳ್ಳಬೇಕೋ ನಾನದನ್ನು ಅರ್ಥ ಮಾಡಿಕೊಂಡಿದ್ದೇನೆ. ನಾನವಳ ಅಪಮಾನವನ್ನು ಅಳಿಸಬೇಕು ಅಂತ ಅಂದುಕೊಂಡಿದೀನಿ.

ಅದೇನೋ ಸರಿ, ಮದುವೆ ಮಾಡಿಕೊಂಡ ನಂತರ ನೀನು ಇದೇ ರೀತಿ ಅಪಮಾನಿತ ಬಾಡಿದ ಮುಖದ, ಅಸಹಾಯಕ ಇನ್ನೊಬ್ಬ ಹುಡುಗಿಯನ್ನು ಕಂಡರೆ ಏನಯ್ಯ ಮಾಡ್ತೀಯಾ ? ಪುನಃ ಅವಳನ್ನು ಮದುವೆ ಮಾಡಿಕೊಂಡು ಕಾಪಾಡೋದಕ್ಕಾಗುತ್ತಾ ?

ಸುವಿಮಲನೆಂದ, ನೀನು ಬಿಡೋ. ಎಲ್ಲದರಲ್ಲೂ ಏನಾದರೊಂದು ಕೊಂಕು ಹುಡುಕ್ತಾನೇ ಇರ್ತೀಯ. ಈ ಕೆಟ್ಟ ಅಭ್ಯಾಸ ನಿನಗೆ ಅಂಟಿಕೊಂಡು ಬಿಟ್ಟಿದೆ......

ನಾನು ಥಟ್ಟನೆ ಸ್ವಲ್ಪ ವಿಚಲಿತಗೊಂಡು ಅವನಿಗೆಂದೆ, ನಾನು ಕೊಂಕು ಹುಡುಕ್ತಾ ಇಲ್ಲ ಕಣೋ. ನನ್ನನ್ನೇ ನಾನು ಇನ್ನೂ ಅರ್ಥ ಮಾಡಿಕೊಳ್ಳೋದಕ್ಕಾಗ್ತಾ ಇಲ್ಲ. ನನ್ನ ಸ್ವಂತ ವಿಷಯಗಳಿಗೆ ನನಗೆ ಪರಿಹಾರ ಕಂಡುಕೊಳ್ಳೋದಕ್ಕಾಗ್ತಾ ಇಲ್ಲ. ನಾನೊಂದು ಯೋಚಿಸಿದರೆ ಬೇರೊಂದು ತರಹ ಆಗುತ್ತೆ.

ಕೆಲವು ದಿನಗಳಿಂದ ನಿನಗೇನಾಯ್ತುಯ್ಯಾ ?

ನಾನು ಸುವಿಮಲನಿಗೆ ಜಮುನಾಳ ವೃತ್ತಾಂತವನ್ನು ಹೇಳಿದೆ. ಹೇಳುವಾಗ ನನ್ನ ಕೈ ಕಂಪಿಸುತ್ತಿತ್ತು. ಮಾತನಾಡುವಾಗ ಬಾಯಿ ಕಟ್ಟಿತ್ತು. ನಾನು ಸ್ವಲ್ಪ ಅಸಹಾಯಕನೆಂದೆನಿಸಿತು. ನನ್ನ ಮಾತು ಕೇಳಿ ಸುವಿಮಲನೆಂದ, ಏನೇ ಹೇಳು, ನೀನು ಪಾರಾದೆ. ಇದೀಗ ಮನುಷ್ಯರ ತರಹ ಕಾಣಿಸ್ತಿದೀಯ.

ನಾನು ನಾಚಿಕೆಯಿಂದ ಕೇಳಿದೆ, ಯಾಕೋ ಹಾಗಂತೀಯ ? ಸುವಿಮಲ ನಗುತ್ತ ಹೇಳಿದ, ನಿಜವಾಗಿ ನನ್ನ ಮಾತನ್ನು ನಂಬು. ಇಷ್ಟು ದಿನ ಒಳ್ಳೆ ಕಾಡುಮೃಗ ಇದ್ದ ಹಾಗಿದ್ದಿ. ಈಗ ಮುಖವಾಡ ಹರಿದು ಮನುಷ್ಯನ ತರಹ ಕಾಣಿಸ್ತಿದೀಯ. ನಾನೆಂದೆ, ಸುಮ್ನೆ ಹಾಸ್ಯ ಮಾಡ್ಬೇಡಯ್ಯ.

ಇಲ್ಲ, ಇದು ಖಂಡಿತವಾಗಿಯೂ ಹಾಸ್ಯವಲ್ಲ. ನೀನು ಎಲ್ಲೋ ಹೋಗಿ ಅಂತೂ ನಿನ್ನ ಮನಸ್ಸನ್ನು ತೆರೆದಿಡುವ ಪ್ರಯತ್ನವನ್ನು ಮಾಡಿದ್ದಿ. ಇದೇ ಬೇಕಾದಷ್ಟಾಯ್ತು ಬಿಡು. ಆ ಹುಡುಗಿ ಯಾರು ? ನನಗೂ ಅವಳನ್ನು ಒಂದು ದಿನ ತೋರಿಸು.

ಹುಡುಗಿಯನ್ನು ನಾನೇ ನೋಡೋಕಾಗ್ತಾ ಇಲ್ಲ ಅಂತಿದೀನಿ. ಏನು ಮಾಡಲಿ ಹೇಳು ನೋಡೋಣ ?

ಹುಡುಗೀನ ತೊಗೊಂಡು ನಾನೇನು ಮಾಡಲಿ ? ನಾನು ಮೊದಲೇ ಎಚ್ಚರಿಕೆ ಕೊಡ್ತಾ ಇದೀನಿ, ನೀನು ಅವಳನ್ನು ಕೈಬಿಟ್ಟು ಹೋಗಿಬಿಡಬೇಡ. ಅವೆಲ್ಲ ಸರಳತೆ ಗಿರಳತೆ ಬರೀ ಬೂಟಾಟಿಕೆಯ ಮಾತು. ನೀನೇ ನೋಡುವಿಯಂತೆ ಹುಡುಗಿ ಏನು ಅಂಥಾ ಪೆದ್ದಲ್ಲ. ಚುರುಕಾಗಿ ಎಲ್ಲಾ ಗೊತ್ತು ಮಾಡಿಕೊಂಡಿರ್ತಾಳೆ. ಇಲ್ಲಾಂದ್ರೆ ಮುಂದಾಗ್ತಾಳೆಯೇ ? ಆದರೆ ಆದರಿಂದ ಏನೂ ಬಂದು ಬಿಡೋದಿಲ್ಲ. ನಿಜ ಹೇಳಬೇಕೂಂದ್ರೇ ಚಿಕ್ಕ ವಯಸ್ಸಿನ ಹುಡುಗಿಯರು ಬಹಳ ಪವಿತ್ರ. ಅವರ ಬಳಿ

ಹೋದರೆ ನಿನ್ನ ಮನಸ್ಸು ಪವಿತ್ರವಾಗುತ್ತೇಂತ ನನ್ನ ಆಸೆ. ಬಹಳ ನೇರವಾದ ವಿಷಯ. ಸರಿ ಹಾಗಾದ್ರೆ, ನೀನು ಹುಡುಗಿ ಜೊತೇನೇ ಇರುವಿಯಂತೆ.

ಯಾವ ರೀತಿ ಇರೋದು ? ಈ ರೀತಿಯ ಚಿಕ್ಕ ಹುಡುಗಿಯೊಬ್ಬಳನ್ನು ನನ್ನ ಹತ್ತಿರ ಪ್ರತಿದಿನ ಅವರಪ್ಪ ಅಮ್ಮ ಕಳಿಸಿ ಕೊಡಲು ಒಪ್ಪಿಕೊಳ್ತಾರಾ ?

ಹುಡುಗೀನ ಮದುವೆ ಮಾಡಿಕೊಂಡು ಬಿಡಬಾರದೆ ?

ಇಷ್ಟು ಚಿಕ್ಕ ಹುಡುಗಿಯನ್ನು ಮದುವೆ ಮಾಡಿಕೊಡ್ತಾರಾ ?

ಬಲವಂತ ಮಾಡೋಕೆ ಹೋದ್ರೆ ಆಗೋದಿಲ್ಲ. ಅಮ್ಮ ಅಪ್ಪ ಒಪ್ಪಿದರೆ ಆಗಬಹುದು. ಅವಳಪ್ಪ ಅಮ್ಮನ್ನು ಒಪ್ಪಿಸಿ ಬಿಡು. ನೀನೇನು ಅಂಥಾ ಕೆಟ್ಟ ಹುಡುಗನೇನಲ್ಲಾ.

ಒಂದು ವೇಳೆ ಆ ರೀತಿಯಾದರೂ, ಆಮೇಲೆ ಒಂದು ವೇಳೆ ನನಗೆ ಅವಳು ಇಷ್ಟವಾಗದಿದ್ದರೆ ? ಆ ಹುಡುಗೀಗೂ ಮುಂದೆ ಭವಿಷ್ಯದಲ್ಲಿ ನನ್ನ ಕಂಡ್ರೆ ಇಷ್ಟವಾಗದೇ ಹೋದರೆ ?

ಮಾತನಾಡುವಾಗ ನಾನು ಸ್ವಲ್ಪ ನಾಚಿಕೊಂಡಿದ್ದೆ ಮತ್ತು ತಡವರಿಸಿದ್ದೆ ಕೂಡಾ. ಸುವಿಮಲ ಎಂದಿನಂತೆ ನನ್ನನ್ನು ಗದರಿಸಿ ಮಾತನಾಡಲಾರಂಭಿಸಿದ. ಅವನು ನನಗೆಂದ, ಮುದುಕರಂತೆ ಭವಿಷ್ಯದ ಬಗೆಗೆ ಯಾಕೋ ಯೋಚಿಸ್ತೀಯಾ ? ಯಾರು ಹತ್ತಿಪ್ಪತ್ತು ವರ್ಷಗಳಲ್ಲಿ ಸಾಯ್ತಾರೋ, ಅವರೇ ಮುಂದಿನ ಭವಿಷ್ಯದ ಬಗ್ಗೆ ತಲೆ ಕೆಡಿಸಿಕೊಳ್ಳೋದು. ಅಪ್ಪ ಅಮ್ಮಂದಿರು, ತಮ್ಮ ಗಂಡು ಮಕ್ಕಳ ಭವಿಷ್ಯದ ಬಗ್ಗೆ ಯಾಕೆ ಅಷ್ಟೊಂದು ಯೋಚಿಸ್ತಾರೆ ಗೊತ್ತಾ ? ತಾವಂತೂ ಅಷ್ಟು ದಿನ ಉಳಿತೇವೋ ಇಲ್ಲವೋ ಅದಕ್ಕೆ. ಗಂಡು ಮಕ್ಕಳ ಮುಂದಿನ ಮೂವತ್ತು ಅಥವಾ ನಲವತ್ತು ವರ್ಷದ ಜೀವನದ ರೂಪರೇಖೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಭವಿಷ್ಯವನ್ನು ನೋಡಿ, ಸುಖ ಪಡೆಯಲಿಚ್ಛಿಸುತ್ತಾರೆ.

ನಮಗಂತೂ ಆ ತೊಂದರೆಯೇ ಇಲ್ಲ. ನಾವು ಇನ್ನೂ ನಲವತ್ತು ವರ್ಷ ಬದುಕುತ್ತೇವೋ ಅಥವಾ ಮೊದಲೇ ಸತ್ತು ಹೋಗ್ತೇವೋ ಏನೋ ? ರೈಲಿಗೆ ಸಿಕ್ಕೋ, ಬಾಂಬ್ ಬಿದ್ದೋ ಸಾಯ್ತೇವೋ ಏನೋ ? ಅದೂ ನಮಗೇ ಸರಿಯಾಗಿ ಗೊತ್ತಿಲ್ಲ. ಒಂದೊಂದು ಸಲ ಹೇಳೋಕಾಗೊಲ್ಲ. ನಲವತ್ತು ವರ್ಷ ಬದುಕಿದರೂ ಬದುಕಬಹುದು. ನಮ್ಮಲ್ಲಿ ಅನೇಕರು ಇಚ್ಛಾಮರಣಿಗಳು. ನಾವು ಭವಿಷ್ಯದ ಬಗ್ಗೆ ಯೋಚಿಸೋದೇನೂ ಬೇಕಿಲ್ಲ.

ಇನ್ನು ಸಾಕು ಮಾಡಯ್ಯ. ನೀನು ತುಂಬಾ ಮಾತನಾಡ್ತೀಯ. ಭವಿಷ್ಯದಲ್ಲಿ ಏನಾಗುತ್ತೋ ಬಿಡುತ್ತೋ ಅದಕ್ಕಾಗಿ ಈಗಿನಿಂದಲೇ ಪ್ರೀತಿ ಮಾಡೋದರಿಂದ ತಪ್ಪಿಸಿಕೊಳ್ಳಬೇಡ. ಈಗ ಪ್ರೀತಿಯಿಂದ ವಂಚನೆ ಮಾಡ್ಕೊಂಡು ಒಂದು ವೇಳೆ ಭವಿಷ್ಯದಲ್ಲೂ ಶಾಂತಿ ಸಿಗದಿದ್ದರೆ, ಅದರಿಂದ ಏನು ತಾನೇ ಲಾಭ ? ಆ ಹುಡುಗೀಗೆ ನಿನ್ನ ಪಡೀಬೇಕು ಅಂತ ಆಸೆ ಇದ್ದರೆ, ನೀನೇ ಅವಳನ್ನು ಕರ್ಕೊಂಡು ಬಾ. ಇದು ಬಾಂಗ್ಲಾದೇಶ, ಸುಮ್ಮ ಸುಮ್ಮನೆ ಒಂದು ಹುಡುಗೀನ ದಿನಾ ಭೇಟಿಯಾಗ್ತೀನಿ ಅಂದ್ರೆ ಅದು ಸಾಧ್ಯವಿಲ್ಲ. ಅವಳನ್ನು ಮದುವೆ ಮಾಡಿಕೊಂಡು ಬಿಡು.

ಅವಳು ನನಗೆ ಸರಿ ಹೋಗ್ತಾಳಾ ?

ಅಯ್ಯೋ, ಈಡಿಯಟ್, ಅದನ್ನ ನನ್ನ ಈ ಹಾಳು ಮುಖದ ಮುಂದೆ ಕೂತು ಪ್ರಶ್ನಿಸ್ತಾ ಇದ್ದೀಯ ಏಕೆ ? ಅದನ್ನು ಅವಳಿಂದಲೇ ತಿಳಿದುಕೊಳ್ಳಬಾರದೇ ? ಇದನ್ನೆಲ್ಲ ಸ್ಪಷ್ಟವಾಗಿ ತಿಳಿದುಕೊಂಡು ಬಿಡೋದೇ ಮೇಲು. ಒಂದು ವೇಳೆ ಒಪ್ಪದಿದ್ದರೆ, ಪೀಡೆ ಕಳೀತು. ಮನಸ್ಸಿನಲ್ಲೇ ಒದ್ದಾಡ್ತಿದ್ರೆ ಏನು ಬಂತು ಲಾಭ ? ನೀನ್ಯಾಕೆ ಈ ರೀತಿ ಎಡವಟ್ಟಾಗಿ ಬಿಟ್ಟೆ ಈ ನಡುವೆ ? ಇರಲಿ ಬಿಡು.

ಈ ನಡುವೆ ಆ ಹುಡುಗೀನ ಕಾಣೋದಕ್ಕೆ ಸಾಧ್ಯವಾಗ್ತಾ ಇಲ್ಲ. ಅವಳ ಮನೆಗೆ ಹೋಗೋದಕ್ಕೆ ನನಗೇನೋ ಒಂದು ರೀತಿಯ ಸಂಕೋಚ.

ಇರಲಿ ಬಿಡು, ಬೇರೆಲ್ಲೂ ನೋಡೋಕಾಗದಿದ್ದ ಮೇಲೆ ವಿಧಿಯಿಲ್ಲದೆ ಮನೆಗೆ ಹೋಗಬೇಕು. ಇವತ್ತೇ ಹೋಗು, ಎದ್ದೇಳು.

ಅರೇ, ಈಗ್ಲೇ ಬೇಡ ಕೂತ್ಕೊ.

ಬೇಡ ನಡಿ ಎದ್ದು ಹೊರಡೋಣ. ಇವತ್ತು ನನ್ನ ಮನಸ್ಸು ಸರಿಯಾಗಿಲ್ಲ. ನಿನ್ನ ವಿಷಯದ ಬಗ್ಗೆ ಇವತ್ತು ಜಾಸ್ತಿ ಯೋಚಿಸೋದಕ್ಕಾಗೋದಿಲ್ಲ. ನಿನ್ನ ಜೊತೆ ಕೂತು ಬಿಟ್ಟರೆ ನಿನ್ನ ವಿಷಯಾನೇ ಯೋಚ್ನೆ ಮಾಡಬೇಕಾಗುತ್ತೆ. ಇನ್ನು ಸಾಕು, ನಾನು ನನ್ನ ಸ್ವಂತ ವಿಷಯದ ಬಗ್ಗೆ ಯೋಚಿಸಬೇಕು.

ಚಹಾದಂಗಡಿಯಿಂದ ಹೊರಡುವ ಮೊದಲು ಒಬ್ಬ ಉದ್ದ ಮುಖದ ವ್ಯಕ್ತಿ ಸುವಿಮಲನಿಗೆ ಕಂಡ. ಸಾದಾ ಕನ್ನಡಕ ಧರಿಸಿದ ಆತನದು, ಒಂದು ರೀತಿಯ ಸದ್ಯಥ ರಸಿಕ ಮುಖ. ಅವನು ಸುವಿಮಲನ ಬೆನ್ನು ತಟ್ಟಿ ಹೇಳಿದ, ನಡೀರಿ ಇನ್ನೂ ಒಂದು ಸಾರಿ ಚಹಾ ಕುಡಿಯುವಿರಂತೆ. ಸುವಿಮಲನೆಂದ, ಸುನೀಲ್ ನಿನಗೆ ಇವರ ಪರಿಚಯವಿಲ್ಲ ಅಂತ ಕಾಣುತ್ತೆ, ಇವರು ಭಾಸ್ಕರ ಚ್ಯಾಟರ್ಜಿ. ನಾನು ಕೈ ಎತ್ತಿ ನಮಸ್ಕಾರ ಮಾಡಿ ಹೇಳಿದೆ, ನಿಮ್ಮ ಹೆಸರನ್ನು ಕೇಳಿದ್ದೇನೆ. ಆತನ ಮುಖದಲ್ಲಿ ಒಂದು ರೀತಿಯ ಅಹಂಕಾರದ ಭಾವ. ಸುವಿಮಲನೆಂದ, ಭಾಸ್ಕರ್ ಬಾಬುಗಳು ಬೆಂಗಾಲಿ ಕವಿತೆಗಳನ್ನು ಅನುವಾದ ಮಾಡಲು ಅಮೇರಿಕೆಗೆ ಹೋಗಿದ್ದರು.

ಭಾಸ್ಕರ ಚ್ಯಾಟರ್ಜಿ ಎಂದ, ಸ್ವಲ್ಪ ಇರಿ, ನಾನು ಸಿಗರೇಟ್ ಕೊಂಡು ಕೊಂಡು ಬರುತ್ತೇನೆ.

ಸ್ವಲ್ಪ ದೂರ ಹೋಗುತ್ತಲೇ, ಸಿಡುಕಿ ನಾನೆಂದೆ, ಮೊನ್ನೆ ಒಬ್ಬ ಹುಡುಗಿ ವಿಷಯ ಕೇಳಿದೆ, ಅವಳು ಕಥಕ್ಕಳಿ ಕಲಿಯಲು ಜೆಕೆಸ್ಲೋವಾಕಿಯಾಗೆ ಹೋಗಿದ್ದಳಂತೆ. ಈ ನಡುವೆ ಇದೇ ಆಗಿ ಹೋಗಿಬಿಟ್ಟಿದೆ, ಕುದುರೆ ಮೊಟ್ಟೆಯ ನ್ಯಾಯದಂತೆ. ಸುವಿಮಲ ನನ್ನ ಕೈ ತಟ್ಟಿ ಹೇಳಿದ, ಸುಮ್ಮನಿರೋ ಕೇಳುತ್ತೆ. ನಡಿ ಪುನಃ ಚಹಾ ಕುಡಿಯೋಣ. ಅವರ ಜೊತೆ ಸ್ವಲ್ಪ ಮಾತನಾಡಿ ನೋಡು, ಅಂಥ ಕಳಪೆ ಏನೂ ಇರೋದಿಲ್ಲ. ಅದಲ್ಲದೆ ಇಂಥ ಜನರ ಸಂಪರ್ಕ ಇಟ್ಟುಕೊಳ್ಳೋದು ಉಚಿತ. ನಾನೆಂದೆ, ಅವರ ಜೊತೆ ಮಾತನಾಡ್ತಾ ಯಾರ ಬಗ್ಗೆ ಯೋಚಿಸ್ತೀಯಾ ? ಅವರ ಬಗ್ಗೇನಾ ?

ನೋಡೋಣ.

ನನಗಿಷ್ಟವಾಗೋದಿಲ್ಲಪ್ಪ, ನಾನಿನ್ನು ಹೊರಡ್ತೀನಿ. ಭಾಸ್ಕರ ಚ್ಯಾಟರ್ಜಿಯ ಕೈಗೆ

ಸುವಿಮಲನನ್ನು ಒಪ್ಪಿಸಿ ನಾನು ಹೊರಟುಬಂದೆ. ಸುವಿಮಲನಿಗೆ, ತನ್ನ ಸ್ವಂತದ ಬಗ್ಗೆ ಯೋಚಿಸಲು ಒಂದಿಷ್ಟು ಪುರುಸೊತ್ತಿಲ್ಲ.

ವರಾಂಡದಲ್ಲಿ ಟೇಬಲ್ ಟೆನ್ನಿಸ್ ಬೋರ್ಡ್ ಇರೋದನ್ನು ನಾನು ಗಮನಿಸಿಯೇ ಇರಲಿಲ್ಲ. ಜಮುನಾ ಮನೆಯಲ್ಲಿ ಸ್ಕರ್ಟ್ ಹಾಕಿಕೊಳ್ತಾಳೆ ಅಂತ ಕಾಣುತ್ತೆ. ಒಂದು ತಿಳಿ ನೀಲಿ ಸ್ಕರ್ಟ್ ತೊಟ್ಟು, ಕೈಯಲ್ಲಿ ಬ್ಯಾಟ್ ಹಿಡಿದು, ಜಮುನಾ ಜಿಂಕೆಯಂತೆ, ಅಲ್ಲ ಜಿಂಕೆಯಂತಲ್ಲ, ಗಾಳಿಯಲ್ಲಿ ಅಲ್ಲಾಡುವ ಟೊಂಗೆಯಂತೆ, ಹಾಗೂ ಅಲ್ಲಾ, ಇಲಿಯಂತೆ? ನಿಜವಾಗಿ ಅವಳ, ಚಂಚಲತೆಗೆ ಮರಿ ಇಲಿಯ ಗಡಿಬಿಡಿಯೇ ಸರಿಯಾದ ಹೋಲಿಕೆ. ಆದರೆ ಹೆಂಗಸರನ್ನು, ರೂಪಸಿಯರನ್ನು ಯಾರೂ ಇಲಿಗೆ ಹೋಲಿಸುವುದಿಲ್ಲ. ಜಮುನಾಳ ಜೊತೆ ಒಬ್ಬ ಇಪ್ಪತ್ತೊಂದರ ಯುವಕ ಆಟವಾಡ್ತಾ ಇದ್ದಾನೆ. ಕ್ರಿಕೆಟ್ ಆಟಗಾರನ ತರಹ-ಚರ್ಯೆ. ಅಚ್ಚ ಬಿಳಿ ಪ್ಯಾಂಟು ಹಾಗೂ ಶರ್ಟು ತೊಟ್ಟಿದ್ದಾನೆ. ನನ್ನನ್ನು ನೋಡಿ ಜಮುನಾ ಆಟವನ್ನು ನಿಲ್ಲಿಸಲಿಲ್ಲ. ಸ್ವಲ್ಪ ಚಕಿತಳಾಗಿ, ಬನ್ನಿ ಸುನೀಲ್‌ದಾ. ತಪನ್‌ದಾ ನನಗೆ ಮೇಲಿಂದ ಮೇಲೆ ಎರಡು ಸಲ ನಿಲ್‌ಗೇಮ್ ಕೊಟ್ಟಿದ್ದಾರೆ. ಈ ಸಲ ನಾನು ಪಾಯಿಂಟ್ ತೊಗೋಬೇಕು.

ನಾನು ಒಂದು ಕ್ಷಣ ಆಟ ನೋಡುತ್ತ ನಿಂತೆ. ಅವರಿಬ್ಬರು ಸುಂದರವಾಗಿ ಕಾಣುತ್ತಿದ್ದರು. ಅವರನ್ನು ನೋಡಿದಾಗ, ನನಗೆ ನಾನು, ತುಂಬಾ ವಯಸ್ಕ ಎಂದೆನಿಸಿತು. ನಾನು ಪ್ರಶ್ನಿಸಿದೆ, ಅಮ್ಮ ಎಲ್ಲಿ?

ಅಮ್ಮನಿಗೆ ಮೈ ಹುಷಾರಿಲ್ಲ. ಅಕ್ಕ ಇದ್ದಾಳೆ.

ಕರೆಯುವ ಮೊದಲೇ ಸರಸ್ವತಿ ಬಂದು ಹಾಜರಾದಳು. ಸದ್ಯ ಸರಸ್ವತಿಯೂ ಪ್ಯಾಂಟು ಹಾಕಿಕೊಂಡಿರಲಿಲ್ಲ. ಯಾವುದೋ ಒಂದು ಕ್ರೀಮನ್ನು ಮುಖಕ್ಕೆ ತಿಕ್ಕಿಕೊಳ್ಳುತ್ತಿದ್ದಳು. ನಗು ಬೀರಿ ಅವಳೆಂದಳು, ಬಂದ್ರಾ, ಹಾಗಾದ್ರೆ ನಿಜ, ಗೊತ್ತಾಯ್ತು.....

ನನಗೇನೋ ಒಂದು ರೀತಿಯ ಭಯವಾಗಲಾರಂಭಿಸಿತು. ಯಾಕೆ ಈ ರೀತಿ ದುರ್ಬಲನಾದೆನೆಂಬುದು ಅರ್ಥವಾಗಲಿಲ್ಲ. ಏನು ವಿಷಯ? ನಾನು ಕ್ಷೀಣ ದನಿಯಲ್ಲೇ ಹೇಳಿದೆ, ಕಕ್ಕಿಗೆ ಮೈ ಚೆನ್ನಾಗಿಲ್ಲ ಅಂತ ಕೇಳಿದೆ....

ಮೈ ಚೆನ್ನಾಗಿಲ್ಲ ಅಂತ ನೋಡೋದಕ್ಕೆ ಬಂದಿರೇನು?

ಖಂಡಿತ ಆ ರೀತಿ ಇಲ್ಲ. ನಡೀರಿ ಸ್ವಲ್ಪ ನೋಡಿಕೊಂಡು ಬರೋಣ.

ಅಮ್ಮ ಈಗ ನಿದ್ದೆ ಮಾಡ್ತಾ ಇದಾಳೆ. ಆಮೇಲೆ ನೋಡುವಿರಂತೆ ನನ್ನ ಕೋಣೆಗೆ ಬನ್ನಿ.

ಅವರಿಬ್ಬರ ಆಟ ನೋಡಿ ಹೋಗೋಣ. ಈ ಗೇಮ್‌ನಲ್ಲಿ ಏನಾಗುತ್ತೇಂತ?

ನಿನಗೆಷ್ಟೇ ಪಾಯಿಂಟ್ ಮುನ್ನಿ? ಈ ಸಲವೂ ತಪನನ ಹತ್ತಿರ ನಿಲ್‌ಗೇಮ್ ತೆಗೆದುಕೊಳ್ತೀಯೋ ಏನೋ. ಬನ್ನಿ ನಾವು ಮೇಲೆ ಹೋಗೋಣ.

ಸರಸ್ವತಿ ಬಂದು ನನ್ನ ಕೈ ಜಗ್ಗಿದಳು. ನಾನು ಜಮುನಾಳ ಕಣ್ಣನ್ನು ದಿಟ್ಟಿಸುವ ಪ್ರಯತ್ನ ಮಾಡಿದೆ. ಜಮುನಾ ಹಾಗೂ ತಪನ್ ಪರಸ್ಪರ ಒಬ್ಬರನ್ನೊಬ್ಬರು ಮುಖ

ನೋಡಿಕೊಂಡರು. ಜಮುನಾ ನನ್ನನ್ನು ನೋಡಿದಳು. ಅವಳ ಕಣ್ಣಲ್ಲಿ ನಾಚಿಕೆಯ ಭಾವವಿತ್ತು. ಯಾತಕ್ಕಾಗಿ ಈ ನಾಚಿಕೆ? ಜಮುನಾ ಮುಖ ಕೆಳಗೆ ಮಾಡಿ, ಪುನಃ ಕೆಳಗೇ ಮುಖ ಮಾಡಿಕೊಂಡಳು. ಈ ಸಲವೂ ನಾಚಿಕೆ. ಅವಳು ಸ್ವಲ್ಪ ನಕ್ಕಳು. ಅವಳ ದೇಹ, ಅದ್ಹೇಗೆ ನಾಚಿಕೆ ಪಡೋದನ್ನು ಕಲಿಯಿತು? ನೀಲಿ ಬ್ಯಾಟಿನ ಮ್ಯೆತಾಗಿ, ಬಿಳಿ ಬಾಲು ಬೆಂಕಿಯ ಹೂಬಾಣದಂತೆ ಚಿಮ್ಮಿ ಹಾರಿತು. ಜಮುನಾಳ ತುಟಿ ಹಾಗೂ ಮೂಗು ಇವುಗಳ ಹತ್ತಿರ – ಕೆಲವೊಮ್ಮೆ ಹೆಂಗಸರಿಗೆ ಮೀಸೆ ಇರುತ್ತೆ ಅಸಹ್ಯವಾಗಿ – ಬರೀ ಬೆವರ ಹನಿ. ಬಿಡಿಸಿಟ್ಟ ಚಿತ್ತಾರದ ಬಣ್ಣದ ಛತ್ರಿಯಂತೆ, ಉಬ್ಬಿನಿಂತಿದೆ, ಅವಳ ಸ್ಕರ್ಟ್. ನನಗೆ ಜಮುನಾಳ ತೊಡೆಯ ಸ್ವಲ್ಪ ಭಾಗ ಕಣ್ಣಿಗೆ ಬಿತ್ತು. ಇಷ್ಟು ದಿನವಾದರೂ, ನಾನು ಜಮುನಾಳ ಶರೀರದ ಬಗ್ಗೆ ಒಂದಿನಿತೂ ಆಸೆಪಟ್ಟಿರಲಿಲ್ಲ. ಈಗ ಥಟ್ಟನೆ ಬಯಕೆ ಭುಗಿಲೆದ್ದಿತು. ಆಟ ನಿಲ್ಲಿಸಿ, ಜಮುನಾಳನ್ನು ಎದೆಗಪ್ಪಿಕೊಳ್ಳಬೇಕೆನಿಸಿತು. ಸದ್ದಿಲ್ಲದೆ, ಮೆಲ್ಲನೆ ಅವಳ ತುಟಿಗಳಿಗೆ ಹೂಮುತ್ತನ್ನಿಡಬೇಕೆಂದು ಬಯಕೆಯಾಯಿತು. ಮೆಲ್ಲನೆ ಅವಳ ತೊಡೆಗಳ ಮೇಲೆ ನನ್ನ ತುಟಿಗಳನ್ನು ಸವರಬೇಕು. ಥರ್ಮಾಮೀಟರಿನ ಮುಚ್ಚಳ ತೆಗೆಯುವಂತೆ ಅವಳ ಎದೆಯ ಮೇಲಿನ ವಸ್ತ್ರ ಸರಿಸಿ, ಅವಳ ಕಡೆ ದಿಟ್ಟಿಸಿ ಹೇಳಬೇಕು, ಜಮುನಾ ನೀನೆಷ್ಟು ಸುಂದರಳಾಗಿದ್ದೀಯ! ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ, ತುಂಬಿದ ಚಹಾದ ಬಟ್ಟಲನ್ನು ತೆಗೆದುಕೊಂಡು ಹೋಗುವಾಗ, ವ್ಯಕ್ತಿ ಎಷ್ಟೊಂದು ಏಕಾಗ್ರಚಿತ್ತನಾಗಿ ಬಿಡುತ್ತಾನೊ, ನಾನು ಜಮುನಾಳನ್ನು ಅದೇ ರೀತಿ ಪ್ರಬಲ ಏಕಾಗ್ರತೆಯಿಂದ ಪ್ರೀತಿಸಬೇಕೆಂದೆನಿಸಿತು. ಸ್ಲೋಮೋಷನ್ ಚಿತ್ರದಲ್ಲಿನಂತೆ, ಜಮುನಾಳನ್ನು ಎದೆಗಪ್ಪಿಕೊಂಡು ಥಟ್ಟನೆ ಕೋಣೆಯಿಂದ ಹೊರ ಹೊರಟು ಬಿಡಬೇಕು. ಇದೇ ಮೊದಲು, ಜಮುನಾಳನ್ನು ಇನ್ನೊಬ್ಬ ಪುರುಷನ ಜೊತೆ ಕಂಡದ್ದು. ಇದೇ ಮೊದಲು, ಜಮುನಾಳ ದೇಹಕ್ಕಾಗಿ ನನ್ನ ಇಡೀ ಶರೀರ ಉನ್ಮತ್ತವಾದುದು. ಅದರ ಬಗ್ಗೆ ಯೋಚಿಸಿಯೇ ನನಗೆ ಕಷ್ಟವಾಯಿತು. ಎದೆಯಲ್ಲಿ ಸ್ವಲ್ಪ ಚಳುಕು ಕಾಣಿಸಿಕೊಂಡಿತು. ಏನೋ, ಅದೇ ಕ್ಷಣದಿಂದಲೇ ನಾನು ಏನನ್ನೋ ಕಳೆದುಕೊಂಡಂತೆ ಭಾಸವಾಯಿತು. . ನಾನೆಷ್ಟು ಅಸಹಾಯಕ ಅನ್ನೋದು ಪ್ರಪಂಚದಲ್ಲಿ ಬೇರಿನ್ಯಾರಿಗಾದರೂ ಗೊತ್ತಿದೆಯೇ? ನಾನು ಬಹಳ ಕಾತುರತೆಯಿಂದ ಮನಸ್ಸಿನಲ್ಲೇ ಅಂದುಕೊಂಡೆ, ಇವತ್ತು ನನ್ನನ್ನು ಬಿಟ್ಟು ಬಿಡು. ನನ್ನ ಮೇಲೆ ನೀನು ದಯೆ ತೋರಿಸು. ನನಗೆ ಸುಮ್ಮನೆ ನಿಂತು ಜಮುನಾಳನ್ನು ನೋಡಲು ಬಿಡು. ನಾನು ಇದಕ್ಕಿಂತ ಹೆಚ್ಚು ಬೇರಿನ್ನೇನೂ ಕೇಳೋದಿಲ್ಲ.

ಸರಸ್ವತಿ ನನ್ನ ಕೈ ಹಿಡಿದು ಜಗ್ಗಿದಳು. ವರಾಂಡದ ಮೂಲೆಗೆ ಬಂದು ನನ್ನ ಕಿವಿಯ ಹತ್ತಿರ ಬಾಗಿ ಹೇಳಿದಳು, ಅವರು ಈಗ ಪ್ರೇಮ ಸಲ್ಲಾಪ ಮಾಡಿಕೊಳ್ಳಬಹುದು. ನೀವ್ಯಾಕೆ ಸುಮ್ಮನೆ ನಿಂತಿದೀರ, ನನ್ನ ಕೋಣೆಗೆ ಬನ್ನಿ.

ನಾನು ಪುನಃ ಜಮುನಾಳ ಕಡೆಯೇ ದಿಟ್ಟಿಸಿದೆ. ಜಮುನಾ ಈ ಕಡೆ ಕಣ್ಣು ಹೊರಳಿಸಲೇ ಇಲ್ಲ. ಜಮುನಾ ಒಮ್ಮೆ ಬಿಳಿ ಬಾಲು ಹಾಗೂ ಒಮ್ಮೆ ತಪನನ ಮುಖವನ್ನೇ ದಿಟ್ಟಿಸುತ್ತಿದ್ದಾಳೆ. ಒಮ್ಮೆಯೂ ನನ್ನನ್ನು ಈ ರೀತಿ ನೋಡಿರಲಿಲ್ಲ.

ನಾನು ಕೇಳಿದೆ, ಜಮುನಾ ನೀನು ಎಷ್ಟು ಹೊತ್ತು ಆಟ ಆಡ್ತೀಯ ? ಜಮುನಾಳೆಂದಳು, ನಾನು ಅವನ ಗೇಮ್ ತೀರಿಸಬೇಕು. ನೀವು ಅಕ್ಕನ ಜೊತೆ –

ಸರಸ್ವತಿ ಪುನಃ ನನ್ನ ಕೈ ಹಿಡಿದೆಳೆದಳು.

ಮೆಟ್ಟಲು ಹತ್ತಿ ಮೇಲೇರುತ್ತಲೇ ಚಿಕ್ಕ ಕೋಣೆ ಸರಸ್ವತಿಯದು. ಅವಳ ಕೋಣೆಯ ಸೀಲಿಂಗ್ ಬಹಳ ತಗ್ಗು, ತನ್ನ ತಲೆಗೆಟಕುತ್ತಿತ್ತು. ಈ ತರದ ಕೋಣೆಗಳಲ್ಲಿ ಫ್ಯಾನು ಹಾಕಿಸೋದು ಬಹಳ ಅಪಾಯ. ಅದಕ್ಕೆ ಮೂಲೆಯಲ್ಲಿ ಟೇಬಲ್ ಫ್ಯಾನ್ ಇತ್ತು. ಕೋಣೆಯೊಳಗೆ ಬೇಸಿನ್ ಹಾಗೂ ನೀರಿನ ನಲ್ಲಿ. ಗೋಡೆಯಲ್ಲಿ ದೊಡ್ಡ ಕನ್ನಡಿ. ಸರಸ್ವತಿ ಎಂದಳು, ಮೊದಲು ಅಜ್ಜ ಈ ಕೋಣೆಯನ್ನು ಉಪಯೋಗಿಸುತ್ತಿದ್ದರು. ಈಗ ಇದು ನನ್ನ ಕೋಣೆ, ಚೆನ್ನಾಗಿಲ್ವೇ ?

ಸರಸ್ವತಿಯ ಮುಖದಲ್ಲಿ ಇನ್ನೂ ಕ್ರೀಮ್ ಇದ್ದೇ ಇತ್ತು. ಕೋಣೆ ಬಹಳ ನಿಶ್ಶಬ್ದವಾಗಿತ್ತು. ಎಲ್ಲೂ ಒಂದಿಷ್ಟು ಸದ್ದಿಲ್ಲ. ಆದರೆ ಕೇವಲ ಗಡಿಯಾರದ ಶಬ್ದ ಕೇಳಿ ಬರುತ್ತಿದೆ. ಆದರೆ ಆ ಶಬ್ದವೂ ಪೆಂಡುಲಂನ ಶಬ್ದದ ತರಹ ಏಕಾಗ್ರತೆಗೆ ಭಂಗ ತರುವಂತಿದೆ. ಕ್ರೀಮ್ ಸವರಿಕೊಳ್ಳುವುದನ್ನು ಮುಗಿಸಿ, ಒಂದು ಬಿಳಿ ಟವಲಿನಿಂದ ಮುಖ ಒರೆಸಿಕೊಳ್ಳತೊಡಗಿದಳು. ಎಷ್ಟು ಜೋರಾಗಿ ಒರೆಸಿಕೊಂಡಳೆಂದರೆ, ಇನ್ನೇನು ಚರ್ಮವೇ ಕಿತ್ತು ಬರುತ್ತೋ ಏನೋ ಅನ್ನುವಂತೆ. ಅನಂತರ ಬೇಸಿನ್ ಬಳಿ ಹೋಗಿ, ಸಾಬೂನಿನಿಂದ ಚೆನ್ನಾಗಿ ಮುಖ ತೊಳೆದುಕೊಂಡಳು. ಸರಸ್ವತಿ ಬೇರೆ ಇನ್ನೊಂದು ಟವೆಲಿನಿಂದ ಪುನಃ ಮುಖವನ್ನು ಒರೆಸಿಕೊಳ್ಳುತ್ತಾ ಹೇಳಿದಳು, ಸಧ್ಯ ಇವತ್ತು ನೀವು ಬಂದಿರಿ. ಇವತ್ತು ನನಗೆ ತೀರಾ ಬೇಜಾರಾಗಿತ್ತು. ದಿನ ಬೆಳಗಾದರೆ ಮನೆಯಲ್ಲೇ ಸಿಕ್ಕಿಹಾಕಿಕೊಂಡು ನನಗೆ ಬೋರಾಗಿದೆ.

ನಾನೆಂದೆ, ಏಕೆ ನೀನು ಮನೆಯಿಂದ ಹೊರ ಹೋಗೋದೇ ಇಲ್ಲವೇ ?

ಅಪ್ಪನ ಕಟ್ಟಾಜ್ಞೆ. ನಾನು ಹೊರ ಹೋಗೋದಕ್ಕಾಗೋದೇ ಇಲ್ಲ.

ನಾನು ಚಕಿತನಾಗಿ ಕೇಳಿದೆ, ಏಕೆ ?

ಅವಳು ಒಂದು ತರಹ, ಹುಬ್ಬು ಕೊಂಕಿಸಿ ಹೇಳಿದಳು, ನಾನು ಮನೆಯಿಂದ ಹೊರ ಹೊರಟರೆ ಏನಾದರೊಂದು ಹಗರಣ ಮಾಡ್ಕೊಂಡು ಬರ್ತೀನಿ.

ಕನ್ನಡಿಯ ಮುಂದೆ ನಿಂತು ತನ್ನ ಕೂದಲನ್ನು ಬಾಚಿಕೊಳ್ಳುತ್ತಿದ್ದಾಳೆ. ಸರಸ್ವತಿಯ ಸಕಲ ಕೆಲಸವೂ ಒಂದೇ – ಎಷ್ಟು ಜೋರಾಗಿ ಬಾಚಿಕೊಳ್ಳುತ್ತಿದ್ದಳೆಂದರೆ, ಕೂದಲೇ ಕಿತ್ತು ಬರುವುದೇನೋ ಎನ್ನುವಂತೆ. ಕೈಗಳೆರಡನ್ನೂ ಅವಳು ಮೇಲೆತ್ತಿದಾಗ, ಅವಳ ಸ್ತನಗಳೆರಡೂ ಕಂಡವು. ಒಂದು ಜೊತೆ ಕಣ್ಣಿಗೇ ಕಾಣಿಸಿತು, ಮತ್ತೊಂದು ಜೊತೆಯನ್ನು ನಾನು ಕನ್ನಡಿಯೊಳಗೆ ಕಂಡೆ. ನನ್ನ ಕಡೆ ತಿರುಗಿದ ಕನ್ನಡಿಯನ್ನು ನೋಡುತ್ತ ಸರಸ್ವತಿ ಮಾತನಾಡುತ್ತಿದ್ದಳು. ನಾನು ನಿಜವಾಗಿಯೂ ಅನ್ಯಮನಸ್ಕನಾಗಿದ್ದೆ. ಏನು ಹಗರಣ ? ಎಂದು ನಾನವಳನ್ನು ಪ್ರಶ್ನಿಸಿದೆ. ಕನ್ನಡಿಯ ಕಡೆ ನೋಡುತ್ತಲೇ ಸರಳ ಭಾವದಿಂದ ನಕ್ಕು ಅವಳೆಂದಳು, ನಿಮಗೊಂದೂ ಗೊತ್ತಿಲ್ಲ ಅಲ್ವಾ ? ನಾನು ನಿಮ್ಮನ್ನೆಲ್ಲ ಬಲ್ಲೆ.

ಹೆಣೆದುಕೊಳ್ಳುವುದು ಮುಗಿದ ನಂತರ ಸರಸ್ವತಿ ಪುನಃ ಒಂದು ಕ್ರೀಮನ್ನು

ಮುಖಕ್ಕೆ ತಿಕ್ಕಿಕೊಳ್ಳುತ್ತಿದ್ದಳು. ನಾನು ಆಶ್ಚರ್ಯದಿಂದ ಕೇಳಿದೆ, ಏನು ವಿಷಯ ಹೇಳು ನೋಡೋಣ. ಒಮ್ಮೆ ಕ್ರೀಮ್ ಹಚ್ಚಿಕೊಂಡು, ಸಾಬೂನಿನಿಂದ ತೊಳೆದುಕೊಂಡು, ಪುನಃ ಕ್ರೀಮ್ ಹಚ್ಚಿಕೊಳ್ತಾ ಇದೀಯ. ಸರಸ್ವತಿ ಎಂದಳು, ನಿಮಗೇನೂ ಗೊತ್ತಿಲ್ಲ. ಇದು ಕ್ರೀಮ್ ಅಲ್ಲ. ಇದು ಫೌಂಡೇಶನ್. ಇದರ ಮೇಲೆ ಪೌಡರ್. ಬೀರುವಿನಿಂದ ಗುಲಾಬಿ ಬಣ್ಣದ ಕ್ರೀಮ್ ಹೊರತೆಗೆದು ಮುಖ, ಗಲ್ಲ ಕುತ್ತಿಗೆ ಕಿವಿಯ ಹಿಂಭಾಗ, ಎದೆ ತುಂಬಾ, ಬ್ಲೌಸಿನ ಒಳಗೆ ಪಫ್ ಹೊಕ್ಕಿಸಿದಳು. ನಂತರ ನನ್ನ ಕಡೆ ಹಿಂದೆ ತಿರುಗಿ ನೋಡಿದಳು. ಆದರೆ ನಾನವಳನ್ನು ಕನ್ನಡಿಯಲ್ಲಿ ನೋಡುತ್ತಿದ್ದೆ. ಅವಳಿಗದು ಗೊತ್ತಿತ್ತು. ಪುನಃ ಬೇರೊಂದು ಟವೆಲನ್ನು ತೆಗೆದುಕೊಂಡು ಮುಖ ಹಾಗೂ ಕುತ್ತಿಗೆಯಿಂದ ಆ ಪೌಡರನ್ನು ಅವಳು ಒರೆಸಿಕೊಂಡಳು, ಮೇಲಿಂದ ಮೇಲೆ, ಆಟ ತೋರಿಸುವಂತೆ. ನಾನೊಬ್ಬ ದರ್ಶಕನಂತೆ ಅಥವಾ ನಾನೊಂದು ಕ್ಯಾಮರಾದಂತೆ ಅಲ್ಲಿ ಅವಳ ಮುಂದೆ ಕುಳಿತಿದ್ದೆ. ನಾನೆಂದೆ, ಏನು ಸಮಾಚಾರ, ಯಾಕಿಷ್ಟು ಅಲಂಕಾರ, ಎಲ್ಲಾದರೂ ಹೊರ ಹೊರಡಬೇಕಾ ? ಸರಸ್ವತಿ ಆಗ ತುಟಿಗಳಿಗೆ ನ್ಯಾಚುರಲ್ ಕಲರ್ ಲಿಪ್‌ಸ್ಟಿಕ್ ಸವರಿಕೊಳ್ಳುತ್ತಿದ್ದಳು. ಹಾಗೆಯೇ ಮಾತನಾಡಿದಳು, ಊಹುಂ. ಆನಂತರ ಲಿಪ್‌ಸ್ಟಿಕ್ ಇಟ್ಟು, ಯೂಡಿಕೊಲೋನ್ ಸೀಸೆ ಕೈಯಲ್ಲಿ ತೆಗೆದುಕೊಂಡು ನನ್ನ ಕಡೆ ತಿರುಗಿ ಹೇಳಿದಳು, ಯಾಕೆ, ಮನೇಲಿದ್ದರೆ, ಅಲಂಕಾರ ಮಾಡಿಕೊಳ್ಳಬಾರದೂಂತ ಏನಾದರೂ ನಿಯಮವಿದೆಯೇ ? ಮನಸ್ಸನ್ನು ಸಂತೋಷಗೊಳಿಸಲು ನನಗೆ ಶೃಂಗಾರ ಮಾಡಿಕೊಳ್ಳಬೇಕೆಂದು ಅನ್ನಿಸುತ್ತೆ.

ಕನ್ನಡಿಯಲ್ಲಿ ನೋಡಿಕೊಂಡಾಗ ನನಗನ್ನಿಸಿತು, ನಾನು ತುಂಬಾ ದೂರ ಕುಳಿತಿದ್ದೇನೆಂದು. ನಾನು ಸರಸ್ವತಿಯನ್ನು ಬಹು ದೂರದಿಂದ ನೋಡುತ್ತಿದ್ದೇನೇನೋ ಅಂತ. ಇದಂತೂ ಖಂಡಿತ, ನನಗಿಲ್ಲಿ ಕುಳಿತಿರೋದು ಒಂದಿಷ್ಟೂ ಇಷ್ಟವಾಗ್ತಾ ಇಲ್ಲಾ. ಸ್ವಲ್ಪ ಆಸೆಯಾದರೂ ಆಗಬಹುದು. ಆದರೆ ಈ ನಡುವೆ ಆಸೆಯಾಗುವಂಥದ್ದೇನಿಲ್ಲ. ನಾನು ಎರಡೂ ಕಾಲುಗಳನ್ನು ಸೇರಿಸಿ ಜೋರಾಗಿ ನೆಲಕ್ಕಪ್ಪಳಿಸಿದೆ. ಎಷ್ಟು ಜೋರಾಗಿ ಎಂದರೆ, ಕಾಲೆರಡೂ ನೋವಾಗಲಾರಂಭಿಸಿದವು. ಸಿಗರೇಟನ್ನು ಹೊತ್ತಿಸಿಕೊಳ್ಳಲು ಕಡ್ಡಿ ಗೀರಿ, ಬಹಳ ಹೊತ್ತು ಹಾಗೇ ಹಿಡಿದುಕೊಂಡಿದ್ದೆ. ಬೆಂಕಿ ನನ್ನನ್ನು ಸುಡಲಾರಂಭಿಸಿದರೂ ಅದನ್ನು ಬಿಸಾಡಲು ಮನಸ್ಸಾಗಲಿಲ್ಲ.

ಅಲಂಕಾರ ಮುಗಿಸಿ, ಸೆಂಟು ಹಚ್ಚಿಕೊಂಡು, ನನ್ನ ತೀರಾ ಸಮೀಪಕ್ಕೆ ಬಂದು ಪಕ್ಕದಲ್ಲೇ ಮಂಚದ ಮೇಲೆ ಕುಳಿತುಕೊಂಡಳು ಸರಸ್ವತಿ. ಅವಳು ಕುಳಿತಾಗ ಮಂಚದ ಸ್ಪ್ರಿಂಗ್ ಕುಂಯ್‌ಗುಟ್ಟಿತು. ಸರಸ್ವತಿ ಎಂದಳು, ಈಗ ಮಾತನಾಡಿ.

ನಾನೆಂದೆ, ಏನು ಮಾತನಾಡಲಿ ?

ನನ್ನ ಕೋಣೆಗೆ ಬಂದು ಕುಳಿತಿರಿ, ಆದರೂ ಮಾತನಾಡೋದಿಲ್ವೇ ? ನನ್ನ ಕೋಣೆ ಎಂಬ ಪದ ನನ್ನ ಕಿವಿಯನ್ನು ಕೊರೆಯಿತು. ತುಂಬಾ ಪರಿಚಿತ ಪದ. ಕುಳಿತಿರಿ ಎನ್ನುವ ಶಬ್ದವೂ ಪರಿಚಿತ. ಕೇವಲ ಮಾತನಾಡೋದಿಲ್ಲವೇ ಅನ್ನೋ ಪದ ಮಾತ್ರ ಅಪರಿಚಿತ. ನನ್ನಿಂದ ಅವಳು ಮಾತು ಕೇಳಲಿಚ್ಛಿಸುತ್ತಾಳೆ. ನಾನು ಅಶಕ್ತ ಭಾವದಿಂದ

ನಕ್ಕು ಪ್ರಶ್ನಿಸಿದೆ, ಏನು ಮಾತನಾಡಲಿ ಹೇಳು ನೋಡೋಣ.

ಏನೋ ಒಂದು ಮಾತನಾಡಿ.

ಒಳ್ಳೆ ಮಾತು ಎಂದರೆ, ಅದನ್ನು ಯೋಚಿಸಬೇಕಾಗುತ್ತೆ. ನೀನೀಗ ತುಂಬಾ ಚೆನ್ನಾಗಿ ಕಾಣ್ತಾ ಇದೀಯ – ಇದನ್ನಂತೂ ಹೇಳೋಕಾಗೋದಿಲ್ಲ. ಇದಂತೂ ಹಳೆಯದಾಗಿಬಿಟ್ಟಿದೆ. ಬೇರೆಯವರಿಂದ ನೀನು ಅನೇಕ ಸಲ ಕೇಳಿರಬಹುದು.

ಒಮ್ಮೊಮ್ಮೆ ಹಳೆಯ ಮಾತುಗಳು ಕೂಡಾ ಕೇಳಲು ಇಂಪಾಗಿರುತ್ತವೆ. ಥೂ! ಹೋಗಿ, ನೀವೊಬ್ಬರು. ಹೋಗ್ಲಿ ನಿಮಗೆ ಕೈ ನೋಡೋದಕ್ಕೆ ಬರುತ್ತಾ? ಬರೋದಾದ್ರೆ ನನ್ನ ಕೈ ಸ್ವಲ್ಪ ನೋಡಿ.

ನಾನು ನಗು ನಗುತ್ತ ಹೇಳಿದೆ, ಅದೂ ಕೂಡಾ ತುಂಬಾ ಹಳೆಯದೇ. ಈ ನಡುವೆ ಅದೂ ನಡೆಯೋದಿಲ್ಲ. ಅದಿರಲಿ, ಚಿಕ್ಕಮ್ಮನಿಗೇನಾಗಿದೆ? ಮೈ ಚೆನ್ನಾಗಿಲ್ಲವೇ?

ಹಾಗೇನಿಲ್ಲ, ಅಮ್ಮನಿಗೆ ಒಮ್ಮೊಮ್ಮೆ ಉಬ್ಬಸ ಬಂದು ಬಿಡುತ್ತೆ. ಒಂದೆರಡು ದಿನ ಮಳೆ ಬೇರೆ ಬಿತ್ತು ನೋಡಿ.

ಅವರ ಮುಖ ನೋಡಿದ್ರೆ, ಅವರಿಗೆ ಉಬ್ಬಸ ಇದೆ ಅನ್ನೋದು ಗೊತ್ತಾಗೋದಿಲ್ಲ.

ಮುಖ ನೋಡಿದ್ರೆ ಎಲ್ಲ ಗೊತ್ತಾಗಿ ಬಿಡುತ್ತಾ? ನಿಮ್ಮ ಮುಖ ನೋಡಿದ್ರೆ ಏನು ಗೊತ್ತಾಗುತ್ತೆ, ನೀವು ತುಂಬಾ ಕೆಟ್ಟವರು ಅಂತಲೇ?

ನಾನು ನಿಜವಾಗಿಯೂ ಆಶ್ಚರ್ಯಭರಿತನಾಗಿ ಸರಸ್ವತಿಯನ್ನು ದಿಟ್ಟಿಸಿ ಕೇಳಿದೆ, ಏನು ವಿಷಯ ಹೇಳು. ನನ್ನ ಬಗ್ಗೆ ನಿನಗ್ಯಾಕೆ ಹಾಗನ್ನಿಸಿತು? ನಾನು ಏನು ಅಂತ ಕೆಟ್ಟ ಕೆಲಸ ಮಾಡಿರೋದು?

ಇರಲಿ ಬಿಡಿ, ಇನ್ನೇನೂ ಸಬೂಬು ಬೇಕಿಲ್ಲ. ಗಂಡಸರ ಬೂಟಾಟಿಕೆ ಎಲ್ಲ ನನಗೆ ಚೆನ್ನಾಗೇ ಗೊತ್ತು. ನನಗದನ್ನು ಕಂಡ್ರೆ ಆಗೋದಿಲ್ಲ. ಕೊಡಿ ನನಗೂ ಒಂದು ಸಿಗರೇಟ್ ಕೊಡಿ.

ಇಲ್ಲ, ನನಗೆ ಹೆಂಗಸರು ಸಿಗರೇಟ್ ಸೇದೋದು ಇಷ್ಟವಾಗೋದಿಲ್ಲ....

ಸರಸ್ವತಿ ಜೋರಾಗಿ ನಕ್ಕುಬಿಟ್ಟಳು. ಅವಳ ನಗು ಹಿ ಹಿ ತರಹದ್ದು. ಆ ರೀತಿಯ ನಗು ನಾನು ಹಿಂದೆಂದೂ ಕೇಳಿರಲಿಲ್ಲ. ಬೇರೆಯವರ ನಗುವಿನ ಶಬ್ದ ಹೋ ಹೋ, ಕೋ ಕೋ ಎಂದಾದರೆ, ಸರಸ್ವತಿಯದು ಸಂಪೂರ್ಣವಾಗಿ ಹಿ ಹಿ. ಮರಕಟುಕ ಪಕ್ಷಿಯ ದನಿಯ ತರಹ, ಕರ್ಕಶ ಹಾಗೂ ಒರಟು. ಸರಸ್ವತಿ ನನ್ನ ಎಷ್ಟು ಸಮೀಪಕ್ಕೆ ಬಂದಿದ್ದಾಳೆಂದರೆ, ಅವಳ ಶ್ವಾಸೋಚ್ಛ್ವಾಸದ ಗಾಳಿ ನನಗನುಭವವಾಗುತ್ತಿತ್ತು. ಇಡೀ ಮನೆ ನಿಶ್ಶಬ್ದ. ರಸ್ತೆಯಲ್ಲೂ ಯಾವೊಂದು ಶಬ್ದ ಕೇಳಿ ಬರುತ್ತಿಲ್ಲ. ಅಷ್ಟೇ ಅಲ್ಲ ಪಿಂಗ್‌ಪಾಂಗ್ ಬಾಲಿನ ಶಬ್ದವೂ ಕೇಳಿ ಬರುತ್ತಿಲ್ಲ. ಜಮುನಾಳೇನು ಈ ಕೋಣೆಗೆ ಬರೋದೇ ಇಲ್ಲವೇ? ಜೋರಾಗಿ ಕಿರುಚಿ, ಜಮುನಾಳನ್ನು ಕರೆಯಬೇಕೆಂದು ಇಚ್ಛೆಯಾಯಿತು. ಬಯಲಿನಲ್ಲಿ ನಿಂತು, ರೈತ ತನ್ನ ಕಳೆದು ಹೋದ ಕರುವಿಗಾಗಿ ಕೂಗುವಂತೆ, ಕೂಗಬೇಕೆಂದೆನಿಸಿತು. ನನಗೊತ್ತು, ಒಂದು ವೇಳೆ ನಾನು ಇಲ್ಲಿಂದ ಎದ್ದು ಓಡಿ ಹೋಗುವ ಪ್ರಯತ್ನ ಮಾಡಿದರೆ, ಖಂಡಿತವಾಗಿಯೂ, ಸರಸ್ವತಿ ನನ್ನ ಮೇಲೆ ಹೆಣ್ಣು ಹುಲಿಯಂತೆ ಎರಗಿ, ನನ್ನ ತುಟಿ ರಕ್ತ ಹೀರಿ ಬಿಡುತ್ತಿದ್ದಳು. ಅವಳ

ಮೃದು ಮುಖದಲ್ಲೂ, ಕುತೂಹಲದ ಕಣ್ಣ ಅಂಚಿನಲ್ಲೂ, ನಾನು ಅದೇ ದೃಷ್ಟಿಯನ್ನು ಕಂಡಿದ್ದೆ. ಆತ್ಮರಕ್ಷಣೆಗಾಗಿಯೋ, ನಾನು ಸರಸ್ವತಿಯ ಅಲಂಕಾರಹೀನ ಕೈಗಳನ್ನೆತ್ತಿಕೊಂಡು ಹೇಳಿದೆ, ನನಗೆ ಕೈ ನೋಡೋದಕ್ಕೆ ಬರೋದಿಲ್ಲ. ಆದರೆ ನನಗೆ ಕೈಹಿಡಿದುಕೊಳ್ಳಲು ತುಂಬಾ ಇಷ್ಟ. ಅನಂತರ ಸುಮ್ಮನೆ ಮೃದುವಾಗಿ ಕೇಳಿದೆ, ಸರಸ್ವತಿ ನೀನು ಯಾರನ್ನಾದ್ರೂ ಪ್ರೀತಿಸ್ತಾ ಇದೀಯ ?

ಅಸಡ್ಡೆಯಿಂದ ಸರಸ್ವತಿ ಎಂದಳು, ಇಲ್ಲ. ಆ ತರದ ವ್ಯಕ್ತಿ ಸಿಕ್ಕಿದಾನಾದ್ರೂ ಎಲ್ಲಿ ?

ಯಾಕೆ, ಇದೀಗ ತಾನೇ ಹೇಳಿದೆ, ನಿನಗೆ ಅನೇಕ ಗೆಳೆಯರು ಇದ್ದಾರೆಂದು.

ಅವರ್‍ಯಾರಿಗೂ ಪ್ರೀತಿಸೋಕೇ ಬರೋದಿಲ್ಲ.

ಅವರಿಗೆ ಬರದಿದ್ದರೆ ಹೋಗ್ಲಿ, ನೀನೇ ಯಾರನ್ನಾದರೂ ಪ್ರೀತಿ ಮಾಡಬಹುದಿತ್ತು. ಎರಡೂ ಕಡೆಯಿಂದಲೂ ಪ್ರೀತಿಸಲು ಸಾಧ್ಯವಾಗುವುದೇ ನಿಜವಾದ ಪ್ರೀತಿ.

ನನಗನಿಸುತ್ತೆ ನಾವೇ ಸ್ವತಃ ಯಾರನ್ನೂ ಪ್ರೀತಿಸೋಕೆ ಸಾಧ್ಯವಿಲ್ಲ ಅಂತ. ಬೇರಿನ್ಯಾರಾದ್ರೂ ಪ್ರೀತಿಸಿದರೆ ನಾನೂ ಆಗ ಪ್ರಯತ್ನಪಟ್ಟು ನೋಡುತ್ತಿದ್ದೆ. ಆದರೆ ಆ ತರಹದವರ್‍ಯಾರೂ ನನಗೆ ಸಿಗಲೇ ಇಲ್ಲ. ಅದಕ್ಕೆ ಈಗಲೂ ಅದರ ಫಲವಾಗಿ ಪ್ರೀತಿಯ ಬಗ್ಗೆ ನನಗೆ ಸರಿಯಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗೇ ಇಲ್ಲ. ಹುಡುಗರು ನನ್ನನ್ನು ಪ್ರೀತಿಸುವ ಮೊದಲೇ....

ನಾನು ಪಿಸುಗುಟ್ಟುವ ರೀತಿಯಲ್ಲಿ ಅಂದೆ, 'ದೇಹ, ದೇಹ, ನಿನ್ನಲ್ಲಿ ಮನಸ್ಸಿಲ್ಲವೆ ಕುಸುಮ ?'

ಸರಸ್ವತಿಗದು ಅರ್ಥವಾಗಲಿಲ್ಲ. ಸರಳವಾಗಿ ಕೇಳಿದಳು, ಇದರ ಅರ್ಥವೇನು ? ನಾನೆಂದೆ, ಏನಿಲ್ಲ. ಅದು ಬರೀ ಕೊಟೇಷನ್.

ಮೈಮುರಿಯುವ ಭಂಗಿಯಲ್ಲಿ ಸರಸ್ವತಿ ಹಾಸಿಗೆಯ ಮೇಲೆ ಅರ್ಧ ಒರಗಿಕೊಂಡಳು. ಅವಳ ಕೊರಳ ಕೆಳಗೆ ಒಂದು ಚಿಕ್ಕ ಕೊಯ್ದು ಗಾಯ ಕಣ್ಣಿಗೆ ಬಿತ್ತು. ಸೂರ್ಯಮುಖಿ ಹೂವಿನ ತರಹ ಎರಡು ವಕ್ಷಸ್ಥಳ ಮೇಲುಬ್ಬಿ ನಿಂತಿದೆ. ಬ್ಲೌಸ್ ಹಾಗೂ ಸೀರೆಯ ನಡುವೆ ಬಿಳುಪಾದ ಹೊಟ್ಟೆ, ಇದೀಗ ಟಿನ್‌ನಿಂದ ಹೊರ ತೆಗೆದ ಬೆಣ್ಣೆಯಂತೆ ಉಜ್ವಲ. ಪ್ರಾಯಶಃ ಅವಳ ಹೊಕ್ಕಳು ಕಾಣಿಸುತ್ತಿದೆ. ಆ ಹುಡುಗಿ ಒಮ್ಮೆಗೇ ಹುಚ್ಚಳಾಗಿ ಬಿಟ್ಟಿದ್ದಾಳೆ. ನನಗವಳ ಬಗ್ಗೆ ಕನಿಕರ ಮೂಡಿತು. ಒಂದು ವೇಳೆ ಅವಳು ಎರಡು ತಿಂಗಳ ಹಿಂದೆ ನನ್ನನ್ನು ಈ ರೀತಿ ಕರೆದಿದ್ದರೆ ಅದಕ್ಕೊಂದು ಬೆಲೆ ಇರುತ್ತಿತ್ತು. ಅಂತೂ ಸರಸ್ವತಿ ಬಚಾವಾಗಿದ್ದಾಳೆ. ಈಗ ನನ್ನಿಂದೇನೂ ಅವಳಿಗೆ ಭಯವಿಲ್ಲ. ನನಗೇ ಅವಳ ಭಯವಿದೆ. ನನ್ನ ಎದೆಯಲ್ಲಿ ಎಷ್ಟು ಕಷ್ಟವಾಗ್ತಿದೆ ಅನ್ನೋದು ಸರಸ್ವತಿಗೆ ಅರ್ಥವಾಗೋದಿಲ್ಲ. ನನ್ನ ಕೈಯಲ್ಲಿ ಸರಸ್ವತಿಯ ಕೈ ಇನ್ನೂ ಹಾಗೇ ಇತ್ತು. ಅದೇ ಕೈಗಳನ್ನು ಮೆಲ್ಲನೆ ತಟ್ಟಿ ನಾನೆಂದೆ, ಸರಸ್ವತಿ ನನ್ನನ್ನು ಕ್ಷಮಿಸಿ ಬಿಡು. ಸರಸ್ವತಿ ಗಡಬಡಿಸಿ ಎದ್ದು ಸರಿಯಾಗಿ ಕುಳಿತು ಆಶ್ಚರ್ಯಗೊಂಡು ಹೇಳಿದಳು, ಅದ್ಯಾಕೆ ನೀವು ಏನು ಮಾಡಿದಿರಿ ಅಂತ ಕ್ಷಮೆ ಕೇಳ್ತಾ ಇದೀರಾ ?

ನಾನೆಂದೆ, ನಿಜವಾಗಿಯೂ ನೀನು ನನ್ನನ್ನು ಕ್ಷಮಿಸಬೇಕು.

ಏನಿದು ಹುಚ್ಚರ ತರಹ ಮಾತನಾಡ್ತಾ ಇದೀರ ? ನೀವು ಕ್ಷಮೆ ಕೇಳೋ ತರಹ

ಏನು ಮಾಡಿದ್ದೀರ ?

ನಾನು ಅಳುವನ್ನು ನುಂಗಿ ಹೇಳಿದೆ, ಸರಸ್ವತಿ ನಾನು ನಿನಗೆ ಏನೊಂದು ತಪ್ಪು ಮಾಡದಿದ್ದರೂ, ಬೇರಿನ್ನೆಲ್ಲಾದರೂ ಏನಾದರೂ ಅನ್ಯಾಯ ಅಥವಾ ತಪ್ಪು ಮಾಡಿದ್ದರೆ ಅಥವಾ ಪಾಪ ಮಾಡಿದ್ದರೆ ಅದಕ್ಕಾಗಿ ನೀನು ನನ್ನನ್ನು ಕ್ಷಮಿಸಿ ಬಿಡ್ತೀಯಾ ?

ನಿಮ್ಮ ತಲೇನಲ್ಲಿ ಏನಿದೆ ? ನೀವೇನು ಹುಚ್ಚರೇ, ಕ್ಷಮೆಯ ಮಾತ್ಯಾಕೆ ಈಗ ?

ನಾನು ಹೇಗೇ ಇರಲಿ, ನನ್ನನ್ನು ಕ್ಷಮಿಸ್ತೀನಿ ಅಂತ ನೀನು ನನಗೆ ಮಾತುಕೊಡು.

ಸರಸ್ವತಿ ಇದೀಗ ಕೋಮಲ ದನಿಯಲ್ಲೆಂದಳು, ಆಶ್ಚರ್ಯದ ಮಾತು. ಸರಿ ನಾನೆಲ್ಲವನ್ನು ಕ್ಷಮಿಸಿದ್ದೇನೆ.

ಹಾಗಾದ್ರೆ ನಾನಿನ್ನು ಬರ್ತೀನಿ.

ಎಲ್ಲಿಗೆ ಹೋಗ್ತೀರಾ ಕೂತ್ಕೊಳ್ಳಿ.

ಇಲ್ಲ, ಇನ್ನು ಹೋಗ್ಬೇಕು.

ಛೇ, ಕೂತ್ಕೊಬಾರ್ದೆ !

ಸರಸ್ವತಿ ನನ್ನ ಕೈಹಿಡಿದೆಳೆದು ಕೂಡಿಸಿಬಿಟ್ಟಳು. ನಂತರ ನನ್ನ ತಲೆ ಕೂದಲಲ್ಲಿ ಕೈಯಾಡಿಸುತ್ತಾ ಎಂದಳು, ಚಿಕ್ಕ ಹುಡುಗನ್ತಂದು.

ನಾನು ಗಂಭೀರನಾಗಿ ಹೇಳಿದೆ, ಸರಸ್ವತಿ ನಾನೀಗ ಖಂಡಿತವಾಗಿಯೂ ಹೋಗಲೇಬೇಕು.

ಹೋಗ್ಬೇಕಾದ್ರೆ ಹೋಗಿ, ನಾನೇನು ನಿಮ್ಮನ್ನು ಬಲವಂತ ಮಾಡಿ ಕೂಡಿಸ್ಕೊಂಡಿದೀನಾ ?

ಹಾಗಾದ್ರೆ ಹೊರಡ್ತೀನಿ.

ನೀವು ಮುನ್ನಿಗೇನು ಮಾಡಿಲ್ಲ ತಾನೇ ?

ನಾನು ತೀರಾ ಆಶ್ಚರ್ಯಗೊಂಡು ಹೇಳಿದೆ, ಏನೂಂತ ಹೇಳ್ತಾ ಇದೀಯ ?

ಸರಸ್ವತಿ ಅದನ್ನು ಕೇಳಿಸಿಕೊಳ್ಳದೆ ಹೇಳಿದಳು, ತಪನನ ಜೊತೆ ಅವಳ ಮದುವೆ ನಿಶ್ಚಯವಾಗಿದೆ.

ಏನಂದೆ, ಇದು ತುಂಬಾ ಅನ್ಯಾಯ, ಛೇ !

ಯಾಕೆ ಸಿಟ್ಬಾಗ್ತೀರಾ ? ಸುಮ್ಮನೆ ಹೇಳಿದೆ. ಮುನ್ನಿ ನೋಡನೋಡುತ್ತಲೇ ನನ್ನ ಪ್ರತಿಸ್ಪರ್ಧಿಯಾಗಿಬಿಟ್ಟಳು.

ಜಮುನಾ ನನಗೆ ತುಂಬಾ ಇಷ್ಟ.

ಅಷ್ಟರವರೆಗೆ ಮಾತ್ರ ಇರಲಿ. ಇನ್ನು ಮುಂದೆ ಬೇಡ.

ನಾನಿನ್ನು ಹೊರಡಲೇಬೇಕು ಬೇರೆ ದಾರೀನೇ ಇಲ್ಲ.

ಸ್ವಲ್ಪ ಕೂತ್ಕೊಳ್ಳಿ. ಏನಂಥಾ ರಾಜಕಾರ್ಯ ಅಂತ ಹೋಗ್ಬೇಕು. ನನಗೆ ಒಂಟಿಯಾಗಿರೋದಕ್ಕೆ ಇಷ್ಟವಾಗೋದಿಲ್ಲ. ಸ್ವಲ್ಪ ಹರಟೆ ಹೊಡೆಯೋಣ.

ನಾನೆಂದೆ, ಒಂದು ಸಲ ಜಮುನಾಳನ್ನು ಕರಿ. ನನಗವಳನ್ನು ನೋಡಬೇಕು ಅಂತ ಅನ್ನಿಸ್ತಾ ಇದೆ.

ಸರಸ್ವತಿ ತಟಸ್ಥಳಾಗಿ ನನ್ನ ಕಡೆ ನೋಡಿ ಹೇಳಿದಳು, ಈಗ ಅವಳು ತಪನನೊಂದಿಗಿದ್ದಾಳೆ. ಅವಳನ್ನು ಕರೆದರೆ ತಪನ ಏನಂದುಕೊಳ್ಳಲಿಕ್ಕಿಲ್ಲ ?

ತಪನನನ್ನೂ ಕರಿ. ನಾವೆಲ್ಲರೂ ಸೇರಿ ಹರಟೆ ಹೊಡೆಯೋಣ.

ನನ್ನ ಆ ಮಾತಿಗೆ ಏನೊಂದು ಮಾಡದೆ ಅವಳೆಂದಳು, ಬೇಡ ನನ್ನ ಜೊತೆ ಮಾತನಾಡಲು ನಿಮಗಿಷ್ಟವಿಲ್ಲ ಅಂತ ಕಾಣುತ್ತೆ.

ಆದರೆ ನಿನ್ನ ಜೊತೆ ಮಾತನಾಡಲು ಬೇಕಾದಷ್ಟು ಜನ ಇದ್ದಾರೆ.

ಇಲ್ಲ, ನನಗ್ಯಾರೂ ಇಲ್ಲ.

ನಾನು ನಿಸ್ತೇಜನಾಗಿ ಕುಳಿತೇ ಇದ್ದೆ. ಸರಸ್ವತಿ ನನ್ನ ತೊಡೆಯ ಪ್ಯಾಂಟಿನ ಮೇಲೆ ಉಗುರಿನಿಂದ ಗೀರಲಾರಂಭಿಸಿದಳು. ನಂತರ ನನ್ನ ಒಂದು ಕೈ ಎತ್ತಿಕೊಂಡು ಎಂದಳು, ತುಂಬಾ ಬಲವಾಗಿದೆ. ಥಟ್ಟನೆ ನನ್ನ ಒಂದು ಬೆರಳನ್ನು ಬಾಯೊಳಗಿಟ್ಟುಕೊಂಡು ಕಚ್ಚಿಬಿಟ್ಟಳು. ನಾನು ಅಲ್ಲಾಡದೆ ಗಮನಿಸುತ್ತಲಿದ್ದೆ. ಸರಸ್ವತಿ ಎಂದಳು, ಏನು ಸುಮ್ಮನೆ ಇದೀರಲ್ಲ. ಪುಟ್ಟ ಹುಡುಗನ ತರಹ. ಎಷ್ಟೋ ಜನರನ್ನು ನೋಡಿದ್ದಾಯ್ತು. ಅವರೆಲ್ಲರೂ ಬರೀ ಪುಟ್ಟ ಹುಡುಗರೇ.

ಸರಸ್ವತಿ ನನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿದಳು. ನಾನು ತಕ್ಷಣ ಅವಳ ತಲೆಯನ್ನು ಎತ್ತಿ ಹೇಳಿದೆ, ಇದೇನಿದು ಹುಡುಗಾಟ ? ಮಾತಿಲ್ಲದೆ ಅವಳು ನನ್ನ ಮುಖವನ್ನೇ ದಿಟ್ಟಿಸಿ ಹೇಳಿದಳು, ಏನಾಯ್ತು ? ನಾನು ಎದ್ದು ನಿಂತು ಹೇಳಿದೆ, ಇಲ್ಲ ಅದೆಲ್ಲಾ ಬೇಡ, ನಾನಿನ್ನು ಹೊರಡುತ್ತೇನೆ.....

ಅದೇ ತರಹ ಆಶ್ಚರ್ಯದ ಭಂಗಿಯಲ್ಲಿಯೇ ಅವಳೆಂದಳು, ಇದರಲ್ಲಿ ಅಸಭ್ಯತೆಯಾದರೂ ಏನಿದೆ ?

ಇಡೀ ದಿನ ನನ್ನ ಮನಸ್ಸು ಮೃದುವಾಗಿತ್ತು. ಆದರೆ ಪುನಃ ತಥ್ ಅದೇ ಭಾವನೆ ಮನಸ್ಸಿಗೆ ಬಂದುಬಿಟ್ಟಿತು. ನಾನು ಸಿಡುಕಿದೆ.

ನನಗದೆಲ್ಲ ಗೊತ್ತು. ನನ್ನಿಂದ ಸಾಧ್ಯವಿಲ್ಲ, ನಾನು ಇನ್ನು ಬರ್ತೀನಿ.

ನೀವೊಬ್ಬ ಹೇಡಿ.

ನಾನು ಹೇಡಿಯಾದರೂ ಚಿಂತೆಯಿಲ್ಲ. ನೀನು ನನ್ನನ್ನು ಕ್ಷಮಿಸ್ತೀನಿ ಅಂತ ಹೇಳಿದ್ದೀಯ.

ನಿಮ್ಮ ಮನಸ್ಸೇ, ಹುಳುಕು, ಅದಕ್ಕೆ ನಿಮಗೆಲ್ಲವೂ ಕೆಟ್ಟದಾಗೇ ಕಾಣುತ್ತೆ.

ನಾನು ಏನೇ ಆಗಿರಲಿ, ನೀನು ನನ್ನನ್ನು ಕ್ಷಮಿಸ್ತೀನಿ ಅಂತ ಹೇಳಿದ್ದೆ.

ನೀವು ತುಂಬಾ ಸಣ್ಣ ಮನುಷ್ಯರು.

ನಾನು ಸರಸ್ವತಿಯನ್ನು ನೇರ ದೃಷ್ಟಿಯಿಂದ ದೃಷ್ಟಿಸುತ್ತಲಿದ್ದೆ. ನನ್ನ ಮನಸ್ಸು ಕೆಟ್ಟು ಹೋಗಿತ್ತು. ಒಂದೆರಡು ಕ್ಷಣದಲ್ಲೇ ನನ್ನ ತಲೆ ಬಿಸಿಯಾಗಿತ್ತು. ನಾನು ಕೆಳಗೆ ಬೀಳುವವನಂತಾಗಿ ಬಿಟ್ಟಿದ್ದೆ. ನನಗನ್ನಿಸಿತು – ಜೋತು ಬಿದ್ದು, ಸರಸ್ವತಿಯನ್ನು ಎರಡೂ ಕೈಗಳಿಂದ ಬರಸೆಳೆದುಕೊಂಡು, ಎದೆಗಪ್ಪಿಕೊಂಡು, ಹಲ್ಲಿನಿಂದ ಅವಳ ತುಟಿಗಳನ್ನು ಕಚ್ಚಿ ಬಿಡಬೇಕು. ಬಾ ನೀನೆಷ್ಟು ದೇಹದ ಆಟವನ್ನು ತೋರಿಸಬಲ್ಲೆ ತೋರಿಸು ಬಾ. ಒಂದು ಕ್ಷಣ ಜೋಲಿ ಹೊಡೆದರೂ, ನಾನು ನನ್ನನ್ನೇ

ಸಾವರಿಸಿಕೊಂಡು, ನೇರವಾಗಿ ನಿಂತು ಶಾಂತ ದನಿಯಲ್ಲಿ ಅವಳಿಗೆಂದೇ, ನಾನು ಸಣ್ಣ ಮನುಷ್ಯನಾಗಿರೋದೇ ಮೇಲು. ದೊಡ್ಡ ಮನುಷ್ಯನಾಗೋದು ನನಗೇನೂ ಅವಶ್ಯಕತೆ ಇಲ್ಲ.

ಥಟ್ಟನೆ ನಾನು ಬಾಗಿಲನ್ನು ತೆರೆದು ಹೊರ ಬಂದೆ. ಸರಸ್ವತಿಯೂ ನನ್ನ ಹಿಂದೆಯೇ ಬಂದಳು. ಒಂದೆರಡು ಮೆಟ್ಟಲುಗಳನ್ನು ಇಳಿದಿದ್ದೆನೋ ಏನೋ, ಅಷ್ಟರಲ್ಲೇ ಜಗದೀಶ್ ರಾಯ್ ಮನೆಯೊಳಗೆ ಬಂದರು. ಮೈಮೇಲೆ ರೇನ್‌ಕೋಟ್, ಗಂಭೀರ ಮುಖ. ನನ್ನ ಕಡೆ ಒಂದು ಕ್ಷಣ ನೋಡಿದರು, ಗುರುತು ಹಿಡಿಯಲಿಲ್ಲ. ಗಡಸು ದನಿಯಲ್ಲಿ ಪ್ರಶ್ನಿಸಿದರು, ಸತಿ, ಡಾಕ್ಟರ್ ಬಂದಿದ್ದರಾ? ಸರಸ್ವತಿ ನನ್ನ ಹಿಂದೆ ನಿಂತುಕೊಂಡೇ ಉತ್ತರಿಸಿದಳು, ಬಂದಿದ್ದರು. ಅಮ್ಮನಿಗೆ ನಿದ್ದೆ ಮಾಡೋಕೆ ಔಷಧಿ ಕೊಟ್ಟು ಹೋಗಿದ್ದಾರೆ.

ಎಲ್ಲಿ, ಪ್ರಿಸ್‌ಕ್ರಿಪ್‌ಷನ್ ತೋರಿಸು ನೋಡೋಣ.

ವರಾಂಡದಲ್ಲಿ ಜಮುನಾಳಿರಲಿಲ್ಲ. ಟೇಬಲಿನ ಎರಡೂ ಕಡೆ ಬ್ಯಾಟ್‌ಗಳು ಮಾತ್ರ ಇದ್ದವು. ಹಗುರವಾದ ಬಿಳಿ ಬಾಲ್ ಗಾಳಿಯಲ್ಲಿ ಅಲ್ಲಾಡುತ್ತಿತ್ತು. ನಾನು ಭಾರವಾದ ದೇಹದಿಂದ ಹಾಗೂ ಮನಸ್ಸಿನಿಂದ ಹೊರಬಂದೆ. ಕೈಗಳೆರಡನ್ನು ಮುಚ್ಚಿ, ತೆರೆದು, ಮಾಡಬೇಕೆಂದು ಇಚ್ಛೆಯಾಯಿತು.

ಏನು ಹುಚ್ಚನಾಗಿ ಬಿಟ್ಟದ್ದೀನಾ ?

ನನ್ನ ಮಾತಿಗೆ ಯಾರೂ ಉತ್ತರಿಸಲಿಲ್ಲ. ನೋಡಿದರೆ ಹುಚ್ಚ ಅನ್ನೋದು ಬಿಟ್ಟು, ಬೇರಿನ್ನೇನೂ ಮನಸ್ಸಿಗನಿಸೋದಿಲ್ಲ. ಇಡೀ ಮನೆ ಅಸ್ತವ್ಯಸ್ತ. ನೂರ್‌ಜಹಾನಳದು ಅದೇ ಉಡುಪು. ನೀಲಿ ಜರಿ ಸೀರೆ. ಆದರೆ ಬ್ಲೌಸ್ ಇರಲಿಲ್ಲ. ಕೇವಲ ಬ್ರೇಸಿಯರ್ ಮಾತ್ರ. ಕೂದಲೆಲ್ಲ ಕೆದರಿದೆ, ಕಣ್ಣೀರಿನಿಂದಾಗಿ ಮುಖದ ತುಂಬೆಲ್ಲ ಕಾಡಿಗೆ ಹರಡಿದೆ. ಅವಳು ಗೋಡೆಗೆ ತಲೆ ಹೊಡೆದುಕೊಳ್ಳುತ್ತಿದ್ದಾಳೆ ಮತ್ತು ಹೃದಯ ವಿದ್ರಾವಕ ದನಿಯಲ್ಲಿ ಕಿರುಚಿಕೊಳ್ಳುತ್ತಿದ್ದಾಳೆ.

ಗುರುತಿಸಲಿಲ್ಲವೇ ? ಗುರುತಿಸಲಿಲ್ಲವೇ ?

ಶೇಖರ ಹಾಗೂ ಅವಿನಾಶ ಮಂಚದ ಮೇಲೆ ಮೌನವಾಗಿ ಕಾಲು ಅಲ್ಲಾಡಿಸುತ್ತಾ ಕುಳಿತಿದ್ದಾರೆ. ಮಂಚದ ಮೇಲೆ ಚಿಂತಾಮಣಿ ಬಾಬು, ಅಬ್ದುಲ್ ಹಲೀಮ್ ಸಮಾಧಾನ ಮಾಡುವಂತೆ, ಗಟ್ಟಿಯಾಗಿ ಹೇಳ್ತಾ ಇದ್ದಾರೆ, ಸಾಧನಾ ಇಲ್ಲಿ ಕೇಳು, ಕೇಳು. ಅವರನ್ನೆಲ್ಲ ನೂರ್‌ಜಹಾನ್, ದೂರ ತಳ್ಳಿಯೇಬಿಟ್ಟಳು. ಈ ಸಲ, ನನ್ನ ಕಣ್ಣಿಗೆ ಬಿತ್ತು – ಮಂಚದ ಹಿಡಿಯನ್ನು ಹಿಡಿದುಕೊಂಡು, ಒಬ್ಬ ಹತ್ತು ಹನ್ನೆರಡು ವರ್ಷದ ಹುಡುಗ ಪೆಚ್ಚು ಮೋರೆ ಮಾಡಿಕೊಂಡು ನಿಂತುಕೊಂಡಿದ್ದಾನೆ.

ನೂರ್‌ಜಹಾನ್ ಎಷ್ಟು ಜೋರಾಗಿ ತಲೆ ಹೊಡೆದುಕೊಳ್ಳುತ್ತಿದ್ದಳೆಂದರೆ, ಡುಂ ಡುಂ ಎಂದು ಶಬ್ದ ಕೇಳಿ ಬರುತ್ತಿತ್ತು. ಮುಖ ತಿರುಗಿಸಿ, ಅಳುತ್ತಲೇ ಕಂಪಿಸುವ ದನಿಯಲ್ಲಿ ಹೇಳಿದಳು, ಜೀತೂ, ಗುರುತಿಸಲಿಕ್ಕಾಗಲಿಲ್ಲವೇನೋ ? ಹುಡುಗ ಏನೊಂದು ಉತ್ತರವನ್ನೂ ಕೊಡಲಿಲ್ಲ. ನೂರ್‌ಜಹಾನ್ ತೀಕ್ಷ್ಣ ಆಕ್ರಂದನ ಮಾಡಿ

ಕಿರುಚಿದಳು, ಜೀತೂ! ಐತಿಹಾಸಿಕ ನಾಟಕದ, ಕರುಣಪಾತ್ರವನ್ನು, ಅಭಿನಯಿಸುವಾಗ, ಖಂಡಿತವಾಗಿಯೂ ಅವಳು ಇದೇ ರೀತಿ ಕಿರುಚಿಕೊಳ್ಳುತ್ತಾಳೆಂದರೆ ಅತಿಶಯೋಕ್ತಿ ಏನಿಲ್ಲ. ಅತಿಶಯವೆನಿಸಿದರೂ ಕರುಳು ಕತ್ತರಿಸುವ ದನಿ. ಕೋಣೆಯಲ್ಲಿನ ಗಾಳಿಯಲ್ಲಿ ತುಂಬಾ ಹೊತ್ತು ಅವಳ ಕಾರುಣ್ಯದ ದನಿ ತೇಲಿ ಬಂತು.

ಚಿಂತಾಮಣಿ ಬಾಬುಗಳು, ಅಸಂತುಷ್ಟ ದನಿಯಲ್ಲಿ ಹೇಳಿದರು, ನಿಧಾನ. ಯಾವುದಕ್ಕೂ ಒಂದು ಸಂಭವ ಅಸಂಭವ ಇದ್ದೇ ಇರುತ್ತೆ. ಅವನು ನಿನ್ನನ್ನು ಹೇಗೆ ತಾನೇ ಗುರುತಿಸ್ತಾನೆ? ಏಳೆಂಟು ವರ್ಷದ ಮೇಲೆ ನೋಡ್ತಾ ಇದ್ದಾನೆ. ಆಗವನ ವಯಸ್ಸು ಎರಡೋ, ಮೂರೋ ಇದ್ದಿರಬೇಕು.

ನಾನಂತೂ ಗುರುತು ಹಿಡಿದಿದ್ದೇನೆ, ನಾನು.....

ಆ ವಿಷಯ ಬೇರೆ, ಇದೀಗ ಇಲ್ಲಿಗೆ ಆ ಹುಡುಗನ್ನ ಕರ್ಕೊಂಡು ಬಂದದ್ದು ಖಂಡಿತವಾಗಿಯೂ ಸರಿಯಲ್ಲ. ಈ ಸನ್ನಿವೇಶದಲ್ಲಿ, ಒಬ್ಬ ಚಿಕ್ಕ ಹುಡುಗನ್ನ ಕರ್ಕೊಂಡು ಬರೋದೂಂದ್ರೆ –

ನೀವು ಸುಮ್ಮನಿರಿ. ಜೀತು ಗುರುತಿಸಲಿಲ್ಲ ಅಂತ ತುಂಬಾ ವ್ಯಥೆಯಾಗ್ತಾ ಇದೆ. ಓ ಜೀತೂ, ನಾನು ಸತ್ತು ಹೋಗಬಾರದೆ?

ಅದ್ಯಾಕೆ ಆ ಹುಡುಗನ್ನ ಇಷ್ಟು ಜೋರಾಗಿ ತಬ್ಬಿ ಹಿಡಿದುಕೊಂಡಿದೀಯ, ಅವನ ಉಸಿರು ಕಟ್ಟಿಹೋಗುತ್ತೆ.

ನೀವು ಸುಮ್ಮನಿರಿ, ಇವರಿಗೆ ನೀವೆಲ್ಲ ಸುಮ್ಮನಿರೋದಕ್ಕೆ ಹೇಳಿ. ಅಯ್ಯೋ! ನನಗೆ ಬಹಳ ವ್ಯಥೆಯಾಗ್ತಾ ಇದೆ. ನನಗೆ ತುಂಬಾ ಕಷ್ಟವಾಗ್ತಾ ಇದೆ.

ಅಬ್ದುಲ್ ಹಲೀಮನೆಂದ, ಸಾಧನಾ, ನೀನು ಒಂದು ಸಲ ಆ ಔಷಧವನ್ನು ಕುಡಿದುಬಿಡು. ಚಿಂತಾಮಣಿ ಬಾಬು ಅಸಡ್ಡೆಯಿಂದ ಹೇಳಿದರು, ಔಷಧದಿಂದ ಇನ್ನೇನಾಗುತ್ತೆ? ನೂರ್‌ಜಹಾನ್ ಜೋರಾಗಿ ಕಿರುಚಿದಳು, ಯಾಕಿಷ್ಟೊಂದು ಮಾತು, ಸುಮ್ಮನಿರಬಾರದೆ? ಓ, ನಾನು ಯಾಕಾದ್ರೂ ಸಾಯೋದಿಲ್ವೋ ಏನೋ?

ಚಿಂತಾಮಣಿ ಬಾಬು ಕೋಪದಿಂದ ಗದರಿದರು, ಇದು ನನ್ನ ಮನೆ. ನನಗದೆಲ್ಲ ಇಷ್ಟವಾಗೋದಿಲ್ಲ. ವೀಣಾ, ವೀಣಾ.

ವೀಣಾ ಒಳಗಿನಿಂದ ಬಂದು ಸುಮ್ಮನೆ ನಿಂತುಕೊಂಡಳು. ವೀಣಾಳೂ ಒಳಗೇ ಅಳುತ್ತಿದ್ದಳು. ಚಿಂತಾಮಣಿ ಬಾಬುಗಳೆಂದರು, ಮೊದಲು ಇವರನ್ನೆಲ್ಲ ಇಲ್ಲಿಂದ ಕಳಿಸಿಬಿಡು. ನನಗೆ ಇದೆಲ್ಲಾ ಇಷ್ಟವಾಗೋದಿಲ್ಲ. ನಾಳೆ ನಾನು ಬಂದಾಗ ಇವರ್ಯಾರೂ ಇಲ್ಲಿರೋದನ್ನು ಇಷ್ಟಪಡೋದಿಲ್ಲ.

ಆಮೇಲೆ ಅವರು ನಮ್ಮ ಕಡೆ ತಿರುಗಿ, ನೀವೆಲ್ಲ ಒಳ್ಳೇ ಮನೆತನದ ಹುಡುಗರು. ನೀವ್ಯಾರೂ ಇದರಲ್ಲಿ ಸಿಕ್ಕಿ ಹಾಕಿಕೊಳ್ಳೋದು ಒಳ್ಳೆಯದಲ್ಲ. ಏನೋ ಒಂದು ಸ್ವಲ್ಪ ಬೇಜಾರು ಕಳೀಲಿ, ಸ್ವಲ್ಪ ಖುಷಿ ಸಿಗಲಿ ಅಂತ ಬಂದರೆ ಅದಿಲ್ಲ. ಇಲ್ಲೂ ಕೂಡ ಬರೀ ತೊಂದರೆ, ಅತ್ತೂ ಕರೆಯೋ ಆಟ. ನಾಳೆ ನಾನು ಇಲ್ಲಿಗೆ ಬಂದಾಗ ಪುನಃ ಈ ರಂಪಾಟವ್ಯಾವುದೂ ಇಲ್ಲಿರಬಾರದು.

ನೂರ್‌ಜಹಾನ್ ಬಿಕ್ಕಳಿಸುತ್ತಲೇ ಹೇಳಿದಳು, ಯಾಕೆ ಇಷ್ಟೊಂದು ಮಾತು? ಅವರನ್ನು ಸುಮ್ಮನಿರೋದಕ್ಕೆ ಹೇಳು.

ನೀನು ಮೊದಲು ಸುಮ್ಮನಾಗು.

ಅಳೋದನ್ನು ನಿಲ್ಲಿಸಿ, ನೂರ್‌ಜಹಾನ್ ಈ ಸಲ ತಲೆ ಎತ್ತಿ ನೋಡಿದಳು. ರಾಣಿಯ ಭಂಗಿಯಲ್ಲಿ ಶಾಂತ ಗಂಭೀರ ದನಿಯಲ್ಲಿ ಎಂದಳು, ಈ ಮನೆಗಾಗಿ ನೀವು ಎಷ್ಟು ಹಣ ಖರ್ಚು ಮಾಡಿದ್ದೀರ? ನಾನೀಗಲೇ ಅಷ್ಟೂ ಹಣವನ್ನು ಪಾವತಿ ಮಾಡಿಬಿಡುತ್ತೇನೆ. ನೀವು ಇಲ್ಲಿಂದ ಹೊರಟು ಹೋಗಿ. ಅಬ್ದುಲ್ ಅವರಿಗೆ ದುಡ್ಡು ಕೊಟ್ಟುಬಿಡು.

ಚಿಂತಾಮಣಿ ಬಾಬುಗಳ ಮುಖ ಅವಮಾನದಿಂದ ಕಪ್ಪಿಟ್ಟಿತು. ತಡವರಿಸುತ್ತ ಅವರೆಂದರು, ಏನು! ನನಗೇ ದುಡ್ಡಿನಾಸೆ ತೋರಿಸ್ತೀಯಾ? ನೀವೆಲ್ಲ ಕೇಳಿಕೊಂಡು ಸುಮ್ಮನಿದೀರಲ್ಲ ಯಾಕೆ ಯಾರೂ ಏನೂ ಮಾತನಾಡ್ತಾನೇ ಇಲ್ಲ?

ನಾವ್ಯಾರೂ ಚಿಂತಾಮಣಿ ಬಾಬುಗಳ ಪ್ರಶ್ನೆಗೆ ಉತ್ತರಿಸುವ ಗೋಜಿಗೆ ಹೋಗಲಿಲ್ಲ. ಎಲೆ-ಅಡಿಕೆ ಡಬ್ಬಿಯನ್ನು ಪಟ್ಟನೆ ಮುಚ್ಚಿ, ಜೇಬಿನಲ್ಲಿಟ್ಟುಕೊಂಡು ಚಿಂತಾಮಣಿ ಬಾಬು ಎದ್ದು ನಿಂತರು. ಆನಂತರ ಏನೊಂದೂ ಮಾತನ್ನಾಡದೆ ಕೋಣೆಯಿಂದ ಹೊರ ಹೊರಟು ಹೋದರು.

ಅಬ್ದುಲ್ ಹಲೀಮನ ಮುಖದಲ್ಲಿ ಸ್ಪಷ್ಟವಾಗಿ ಭಯದ ಚಿಹ್ನೆ ಮೂಡಿತ್ತು. ವೀಣಾಳ ಮುಖದಲ್ಲೂ ಭಯ, ಚಿಕ್ಕ ಹುಡುಗನ ಮುಖದಲ್ಲೂ ಭಯ. ಕೇವಲ ಅವಿನಾಶನೊಬ್ಬನೇ ಧೈರ್ಯವಾಗಿ ಕುಳಿತುಕೊಂಡಿದ್ದಾನೆ. ನೂರ್‌ಜಹಾನ್ ರಗಳೆ ರಂಪಾಟ ಪ್ರಾರಂಭಿಸಿದಾಗ ಹುಚ್ಚು ಹಿಡಿಯುವ ಪೂರ್ತಿ ಸೂಚನೆ ಎದ್ದು ಕಾಣುತ್ತಿತ್ತು. ಬ್ರೇಸಿಯರ್ ತೊಟ್ಟ ಅವಳೆದೆ ಉಯ್ಯಾಲೆ ಆಡುತ್ತಿದೆ. ಉಸಿರಾಟದಲ್ಲೇ ಅವಳಿಗೆ ಏನೋ ತೊಂದರೆ ಉಂಟಾದಂತಿದೆ. ಕಣ್ಣುಗಳೆರಡೂ ಊದಿ ಬಿಟ್ಟಿವೆ ಹಾಗೂ ಕೆಂಪಗಾಗಿ ಬಿಟ್ಟಿವೆ. ಕೈಗಳನ್ನು ಎತ್ತಿದಾಗಲೆಲ್ಲ ಕೈತುಂಬಾ ಹಾಕಿಕೊಂಡ ಆಭರಣ ಝುಲ್ ಝುಲ್ ಶಬ್ದ ಮಾಡುತ್ತಾ ಇವೆ. ಅಬ್ದುಲ್ ಹಲೀಮ್ ಅವಳನ್ನು, ಎರಡೂ ಕೈಗಳಿಂದ ಹಿಡಿದುಕೊಂಡಿದ್ದಾನೆ. ನೂರ್‌ಜಹಾನ್ ದುಃಖದಿಂದ ಚಡಪಡಿಸತೊಡಗಿದಳು. ಪುನಃ ಪುನಃ ಕೈ ಚಾಚಿ ಆ ಹುಡುಗನನ್ನು ಹಿಡಿದುಕೊಳ್ಳುತ್ತಿದ್ದಾಳೆ. ಆ ಹುಡುಗ ಮುಖ, ಕಣ್ಣುಗಳನ್ನು ಒಣಗಿಸಿಕೊಂಡು ಕೋಣೆಯಲ್ಲಿನ ಎಲ್ಲರ ಮುಖವನ್ನು ನೋಡುತ್ತಲಿದ್ದಾನೆ. ಗಟ್ಟಿಯಾಗಿ ಆ ಮಗುವನ್ನು ಅಪ್ಪಿಕೊಂಡು, ಅವನ ಮುಖವನ್ನು ಮೇಲೆತ್ತಲು ಶತ ಪ್ರಯತ್ನ ಮಾಡುತ್ತಿದ್ದಾಳೆ. ನೂರ್‌ಜಹಾನ್‌ಳಿಂದ, ಅಬ್ದುಲ್ ಹಲೀಮನೇ ಮಗುವನ್ನು ಬಿಡಿಸಿಕೊಂಡ. ಎರಡೂ ಕೈಗಳನ್ನು ಗಾಳಿಯಲ್ಲಿ ಬೀಸಿ ಹಿಡಿದುಕೊಳ್ಳುವ ಪ್ರಯತ್ನ ಮಾಡಿ, ನೂರ್‌ಜಹಾನ್ ಧಪ್ ಎಂದು ನೆಲದ ಮೇಲೆ ಬಿದ್ದುಬಿಟ್ಟಳು. ಬೀಳುವಾಗ ಅವಳ ತಲೆ ನೆಲಕ್ಕೆ ಯಾವ ರೀತಿ ಅಪ್ಪಳಿಸಿತೆಂದರೆ ಅದನ್ನು ನೋಡಿ ನಾನು ನಡುಗಿಬಿಟ್ಟೆ. ವೀಣಾ ಹಾಗೂ ಶೇಖರ ಅವಳ ತಲೆಯನ್ನು ತೊಡೆಯ ಮೇಲೆ ಎತ್ತಿ ಮಲಗಿಸಿಕೊಂಡರು, ಅಬ್ದುಲ್ ಹಲೀಮ್ ಉದ್ವಿಗ್ನಗೊಂಡು ಹೇಳಿದ, ಕೆತ್ತಿ

ಹೋಗಿದೆ ಅಂತ ಕಾಣುತ್ತೆ? ರಕ್ತ ಹರಿಯಲಾರಂಭಿಸಿತು.

ಶೇಖರ ಅವನಿಗೆಂದ, ಇಲ್ಲ. ಸರಿಯಾಗಿದೆ. ಈಗ ಏನು ಮಾಡ್ತೀರ?

ಏನಾದರೂ ಔಷಧ.

ಈಗ ಔಷಧ ಕುಡಿಸ್ಲಿಕ್ಕಾಗೋದಿಲ್ಲ. ಹಲ್ಲು ಕಚ್ಚಿಕೊಂಡು ಬಿಟ್ಟಿದಾಳೆ. ಮುಖದ ಮೇಲೆ ಸ್ವಲ್ಪ ನೀರು ಸಿಂಪಡಿಸಿದರೆ ಸರಿಯಾಗುತ್ತೆ. ಚಿಕ್ಕ ಹುಡುಗ, ಒಮ್ಮೆಗೇ ಹೆದರಿಕೊಂಡು ದಿಙ್ಮೂಢನಾಗಿ ನಿಂತು ಬಿಟ್ಟಿದ್ದಾನೆ. ಹುಡುಗ ಸಣಕಲಾದರೂ, ಅವನ ಮುಖ ಸುಂದರವಾಗಿತ್ತು. ತಾಯಿಯ ಪ್ರೇಮದಿಂದ ವಂಚಿತರಾದ ಹುಡುಗರು, ಚಿಕ್ಕ ವಯಸ್ಸಿನಲ್ಲಿಯೇ ಮೊಂಡರಾಗಿಬಿಟ್ಟಿರ್ತಾರೆ. ಆದರೆ ಈ ಹುಡುಗನ ಮುಖದಲ್ಲಿ ಆ ಭಾವವಿಲ್ಲ.

ನಾನು ಅವಿನಾಶನನ್ನು ದಿಟ್ಟಿಸಿ ಹೇಳಿದೆ, ಹುಡುಗ ಇಲ್ಲಿಗ್ಯಾಕೆ ಬಂದ? ಅವಿನಾಶ ನಿರ್ಲಿಪ್ತ ಭಾವದಿಂದ ಹೇಳಿದ, ಕದ್ದುಮುಚ್ಚಿ ಕರೆತರಲಾಗಿದೆ.

ನಾನು ಆತಂಕಗೊಂಡು ಕೇಳಿದೆ, ಕದ್ದು? ಅವಿನಾಶ ಭುಜ ಬಗ್ಗಿಸಿ ಹೇಳಿದ, ಅದಲ್ಲದೆ ಬೇರೆ ಉಪಾಯವೇ ಇರಲಿಲ್ಲ. ಅಜಯ್ ಒಬ್ಬ ಸ್ಕೌಂಡ್ರಲ್. ನೂರ್‌ಜಹಾನ್‌ಳಿಂದ ಹಣ ದೋಚೋಕೆ ನೋಡ್ತಾನೆ. ಅವನು ಅದನ್ನು ಹುಡುಗನಿಗೂ ಕೊಡೋಕೆ ಇಷ್ಟಪಡೋದಿಲ್ಲ. ಮಗುವಿನ ಮೇಲೆ ಅವನಿಗೆ ಹೇಳಿಕೊಳ್ಳೋ ಅಂತ ಅಕ್ಕರೆಯೂ ಏನಿಲ್ಲ. ಆತನ ಮುಖಾ ನೋಡಿದ್ರೆ ಏನೂ ಅನ್ನಿಸೋದೇ ಇಲ್ಲ. ದಯೆ, ದಾಕ್ಷಿಣ್ಯ ಸ್ವಲ್ಪನಾದ್ರೂ ಇದೆಯೋ ಇಲ್ವೋ ನಾಕಾಣೆ. ಈ ಕಡೆ ನೂರ್‌ಜಹಾನ್‌ಳನ್ನು ನೋಡಿದ್ರೆ ಈ ಅವಸ್ಥೆ. ಪ್ರತಿ ದಿನ ನಾಲ್ಕೈದು ಸಲ ಫಿಟ್ಸ್ ಬರುತ್ತಿರುತ್ತದೆ. ಅತ್ತು ಕರೆದು ದೊಡ್ಡ ಹಗರಣವನ್ನೇ ಮಾಡಿಬಿಡ್ತಾಳೆ.

ನಾನೆಂದೆ, ಮಗುವನ್ನು ಕರೆದುಕೊಂಡು ಬಂದವರ್‍ಯಾರು?

ಅವಿನಾಶನೆಂದ, ನಾನೇ. ಅನಂತರ ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ, ನನಗೀಗ ಅನ್ನಿಸ್ತಾ ಇದೆ. ನಾನು ಅವನನ್ನು ಕರೆದುಕೊಂಡು ಬರಬಾರದಿತ್ತೇನೋ ಅಂತ. ಅವನ ಮುಖ ನೋಡಿದ್ರೆ ಮುದ್ದು ಬರುತ್ತೆ, ಮುಖ ನೋಡು ಎಷ್ಟು ಅಸಹಾಯಕ ಎಂದೆನಿಸುತ್ತೆ. ಅವಿನಾಶನ ಬಾಯಿಂದ ಹಿಂದೆಂದೂ, ತಪ್ಪು ಒಪ್ಪಿಕೊಂಡಿದ್ದನ್ನು ನಾನು ಕೇಳಿರಲಿಲ್ಲ. ಆಶ್ಚರ್ಯಪಡುವಂಥದ್ದೇ.

ನಾನು ಮುಖ ತಿರುಗಿಸಿ ಅಕ್ಕರೆಯಿಂದ ಹುಡುಗನ ಭುಜದ ಮೇಲೆ ಕೈ ಇಟ್ಟೆ. ಹುಡುಗ ಭಯದಿಂದ ಮುಖ ನೋಡಿದ. ನಾನೆಂದೆ, ಮಗು ಹೆದರಿಕೊಳ್ಳಬೇಡ. ಈ ಕಡೆ ಬಾ, ಮಂಚದ ಮೇಲೆ ಹತ್ತಿ ಕೂತುಕೋ ಬಾ. ನಿನ್ನ ಹೆಸರೇನು? ಹುಡುಗ ಶುಷ್ಕ ದನಿಯಲ್ಲಿ ಹೇಳಿದ, ಶ್ರೀ ಇಂದ್ರಜಿತ್ ಸೇನ್‌ಗುಪ್ತ, ಅಪ್ಪನ ಹೆಸರು ಶ್ರೀ ಅಜಯ್ ಸೇನ್‌ಗುಪ್ತ.

ನೀನು ಯಾವ ಕ್ಲಾಸ್‌ನಲ್ಲಿ ಓದ್ತಾ ಇದೀಯ?

ಏಳನೇ ತರಗತಿಯಲ್ಲಿ.

ನಿಮ್ಮಮ್ಮನ್ನ ನೀನು ಗುರುತು ಹಿಡೀಲಿಲ್ಲವಾ?

ಇವಳು ನಮ್ಮಮ್ಮ ಅಲ್ಲ. ಅಮ್ಮ ಮನೆಯಲ್ಲಿದ್ದಾಳೆ.

ಮನೇಯಲ್ಲಿರೋದು ನಿನ್ನ ಮಲತಾಯಿ. ಸರಿ, ಮಲತಾಯಿ ಅಲ್ಲ ನಿಮ್ಮಮ್ಮನೇ. ನಿನ್ನ ಆ ಅಮ್ಮ ನಿನ್ನನ್ನು ಪ್ರೀತಿಸ್ತಾಳಾ ?

ಹೌದು.

ನಿಮ್ಮಪ್ಪ ನಿನ್ನ ಪ್ರೀತಿಸ್ತಾರಾ ?

ಹೌದು.

ಸರಿ ಇವರು ನಿಮ್ಮಮ್ಮ ಅಂತಿದಾರಲ್ಲ ಅವರನ್ನು ಕಂಡ್ರೆ ನಿನಗೆ ಇಷ್ಟ ಇಲ್ವಾ ?

ಇಲ್ಲ. ನಾನು ಮನೆಗೆ ಹೋಗ್ತೀನಿ.

ಹೌದಾ! ಮನೆಗೆ ಹೋಗಬೇಕೆ? ಹೆದರ್ಕೋಬೇಡ ನಿನಗೊಂದು ಮಾತು ಹೇಳಲಾ ? ನೀನೀಗ ದೊಡ್ಡವನಾಗಿದ್ದೀಯ. ನೀನೇ ಯೋಚನೆ ಮಾಡಿ ನೋಡು, ನಿನಗಂತೂ ಮನೇನಲ್ಲಿ ಒಬ್ಬ ಅಮ್ಮ ಇದ್ದಾಳೆ. ಮತ್ತೆ ಇವರು ? ಇವರು ನಿನಗೆ ಇನ್ನೊಬ್ಬ ಅಮ್ಮ. ನೀನು ತುಂಬಾ ದಿನದಿಂದ ಅವರನ್ನು ನೋಡಿಲ್ಲ ಅಲ್ವಾ, ಅದಕ್ಕೆ ನಿನಗೆ ಗುರುತು ಹಿಡಿಯೋದಕ್ಕಾಗಿಲ್ಲ. ನಿನ್ನ ಈ ಅಮ್ಮ ಇರೋದು ಢಾಕಾದಲ್ಲಿ. ಅದು ತುಂಬಾ ದೂರ. ಅಲ್ಲಿ ದೊಡ್ಡ ಮನೆ ಇದೆ. ತಿನ್ನಲು ಒಳ್ಳೊಳ್ಳೆ ಊಟ, ಒಳ್ಳೆ ಬಟ್ಟೆಬರೆ, ಎಲ್ಲ ಸಿಗುತ್ತೆ. ಅಲ್ಲಿಗೆ ಹೋದ್ರೆ, ನಿನ್ನ ಈ ಅಮ್ಮ ಬಹಳ ಚೆನ್ನಾಗಿ ನೋಡಿಕೊಳ್ತಾಳೆ.

ನೀನು ಅಲ್ಲಿಗೆ ಹೋಗ್ತೀಯಾ ?

ಇಲ್ಲ, ನಾನು ಮನೆಗೆ ಹೋಗ್ತೀನಿ.

ಮನೆಗೆ ನಿನ್ನನ್ನು ಬಿಟ್ಟು ಬರ್ತೀನೆ. ನನ್ನ ಕಂಡರೆ ನಿನಗೆ ಹೆದರಿಕೇನಾ ? ಏನೂ ಹೆದರಿಕೊಳ್ಳಬೇಡ. ಈ ಅಮ್ಮನ ಹತ್ತಿರ ಇರೋದಕ್ಕೆ ನಿನಗೆ ಸ್ವಲ್ಪಾನೂ ಇಷ್ಟವಿಲ್ಲವಾ ? ನೋಡು ನಿನಗಾಗಿ ಅವರೆಷ್ಟು ಗೋಳಾಡ್ತಾ ಇದ್ದಾರೆ.

ಹುಡುಗ ಸುಮ್ಮನೆ ಇದ್ದ. ಅವನ ಮೈ ಸವರಿ ನಾನೆಂದೆ, ಏನು ಮಾಡ್ತೀಯ ? ನಿನಗೆ ಅವಳ ಬಗ್ಗೆ ಎಲ್ಲ ಮರೆತೇ ಹೋಗಿದೆ. ಅವಳ ಬಗ್ಗೆ ನಿನಗೆ ಒಂದಿಷ್ಟೂ ಜ್ಞಾಪಕವಿಲ್ಲವೇ ?

ಹುಡುಗ, ಅಳುವ ಸ್ವರ ಮಾಡಿ ಹೇಳಿದ, ನನ್ನನ್ನು ಮನೆಗೆ ಬಿಟ್ಟುಬನ್ನಿ.

ನಾನೆಂದೆ, ಹೋಗೋಣ. ಈಗ್ಲೇ ಹೋಗೋಣ, ನಿನಗೆ ಹಸಿವಾಗ್ತಾ ಇದೆಯಾ ?

ಇಲ್ಲ.

ನಾನು ಮುಖ ತಿರುಗಿಸಿ, ನನ್ನಿಂದ ಹುಡುಗನಿಗೆ ತಿಳಿ ಹೇಳಲು ಸಾಧ್ಯವಾಗದ್ದನ್ನು ಇಂಗ್ಲಿಷಿನಲ್ಲಿ ಅವಿನಾಶನಿಗೆ ಹೇಳಿದೆ. ಈಗ ದೊಡ್ಡ ತೊಂದ್ರೆ ಏನಪ್ಪಾ ಅಂದ್ರೆ ನೂರ್‌ಜಹಾನ್‌ಳ ಮುಖದಲ್ಲಿ, ಮಮತೆಯ ಯಾವೊಂದು ಭಾವನೆಯೂ ಇಲ್ಲ. ಆದ್ದರಿಂದ ಅವನಿಗವಳನ್ನು ಗುರುತಿಸಲು ಸಾಧ್ಯವಾಗ್ತಾ ಇಲ್ಲ. ನೀನೇ ನೋಡು, ಯಾರಾದ್ರೂ ಅಮ್ಮ ಅಂತ ಅಂದುಕೊಳ್ಳೊಕ್ಕಾಗುತ್ತ ? ಆ ರೀತಿ ಅನಿಸೋದೇ ಇಲ್ಲ. ಈ ದೇಹ ಇರೋದು ಕೇವಲ ಪುರುಷರಿಗಾಗಿ ಮಾತ್ರ, ಯಾವುದೇ ಮಗುವಿಗಾಗಿ ಅಲ್ಲಾ.

ಅವಿನಾಶನೆಂದ, ಏನೇ ಆಗ್ಲಿ, ಮಗುವಿನ ಬಗ್ಗೆ ಯೋಚನೆ ಮಾಡಬೇಕು.

ಮಗುವಿಗೆ ಅವಳನ್ನು ಅಮ್ಮ ಅಂತ ಸ್ವೀಕರಿಸಲು ಸಾಧ್ಯವಾಗ್ತಾ ಇಲ್ಲ. ಅದಲ್ಲದೆ, ಮಲತಾಯಿ ಬಗ್ಗೆ ನಮ್ಮ ಅಭಿಪ್ರಾಯ ಏನೇ ಇರಲಿ, ಅವನನ್ನು ಮಲತಾಯಿ ತುಂಬಾ ಪ್ರೀತಿಸ್ತಾಳೆ ಅಂತ ಕಾಣುತ್ತೆ. ಮಗುವಿನ ಮುಖ ನೋಡಿದ್ರೆ ಗೊತ್ತಾಗುತ್ತೆ ಅವನೆಂದೂ ಪ್ರೀತಿಯಿಂದ ವಂಚಿತನಾಗಿಲ್ಲ ಅಂತ.

ಕೆಳಗಿನಿಂದ ಶೇಖರನೆಂದ, ಕೆಲವು ದಿನ ಅವನು ನೂರ್‌ಜಹಾನ್‌ಳೊಂದಿಗಿದ್ದರೆ, ಅವನು ಅವಳನ್ನು ಗುರುತಿಸಬಹುದು. ಅಮ್ಮನನ್ನು ಮಗು ಗುರುತಿಸಲು ಸಾಧ್ಯ. ಇಪ್ಪತ್ತು – ಇಪ್ಪತ್ತೈದು ವರ್ಷಗಳ ನಂತರವೂ ಕೂಡಾ ನೋಡಿದರೂ ಗುರುತಿಸಬಹುದು.

ಅವಿನಾಶ ರೇಗಿದ, ಸುಮ್ಮನೆ ಸುಳ್ಳು ಹೇಳಬೇಡ, ಅವೆಲ್ಲ ಬರೀ ಕಾದಂಬರಿ, ನಾಟಕಗಳ ಕಥೆ. ಎಲ್ಲ ಬರೀ ಬೊಗಳೆ. ಹುಡುಗನ ಮನಸ್ಸಿನಲ್ಲಿ ಪ್ರೀತಿಯ ಅಭಾವವೇ ಇಲ್ಲದಿದ್ದಾಗ, ಅದು ಬೇಕೆನಿಸೋದಾದ್ರೂ ಹೇಗೆ? ಅದು ಸಾಧ್ಯವೂ ಇಲ್ಲ. ಅದಲ್ಲದೆ, ಕದ್ದುಮುಚ್ಚಿ ಒಬ್ಬ ಹುಡುಗನನ್ನು ಮುಚ್ಚಿಡೋದು ಸರಿಯಲ್ಲ. ಬರೀ ರಗಳೆ. ನೂರ್‌ಜಹಾನ್‌ಳಿಗೆ ಪುನಃ ಪ್ರಜ್ಞೆ ಬಂದಿತು. ವೀಣಾ ಚಮಚದಿಂದ ಔಷಧಿ ಕುಡಿಸಿದಳು. ನೂರ್‌ಜಹಾನ್ ಹುಚ್ಚಳಂತೆ ಕಣ್ಣರಳಿಸಿ ಏದುಸಿರು ಬಿಡಲಾರಂಭಿಸಿದಳು.

ಅಬ್ದುಲ್ ಹಲೀಮ್ ನನ್ನ ಬಳಿ ಬಂದು ಹೇಳಿದ, ಈಗ ಏನು ಮಾಡೋದು ಹೇಳಿ?

ಅಬ್ದುಲ್ ಹಲೀಮನನ್ನು ಕಂಡು ನನಗೆ ಮರುಕ ಉಂಟಾಯಿತು. ನಿಜವಾಗಿಯೂ ಆತನ ಮುಖದಲ್ಲಿ ಅಸಹಾಯಕತೆ ಎದ್ದು ಕಾಣುತ್ತಿತ್ತು. ವಿದೇಶದ ನೆಲದಲ್ಲಿರೋದ್ರಿಂದಲೇ ಅವನಿಗೆ ಕಾಲಲ್ಲಿ ಬಲವಿಲ್ಲ. ಈ ನಾಟಕೀಯ ಘಟನೆಯಲ್ಲಿ ಅವನಿಗೆ, ತನ್ನ ಪಾತ್ರದ ಬಗ್ಗೆ ಇನ್ನೂ ಖಚಿತವಾಗಿ ತಿಳಿದುಕೊಳ್ಳಲು ಸಾಧ್ಯವಾಗಿಲ್ಲ. ಸ್ನೇಹಿತನಂತೆ, ಅವನ ಹೆಗಲ ಮೇಲೆ ಕೈಚಾಚಬೇಕು ಎಂದು ನನಗನ್ನಿಸಿತು.

ಅವಿನಾಶ ಹುಬ್ಬು ಕೊಂಕಿಸಿ ಹೇಳಿದ, ನೀವು ಅವಳನ್ನು ಕಲಕತ್ತೆಗೆ ಕರೆದುಕೊಂಡು ಬಂದದ್ದಾದರೂ ಏಕೆ? ಬೇಸರದಿಂದ ಹಲೀಮನೆಂದ, ಬೇರೆ ದಾರಿಯೇ ಇರಲಿಲ್ಲ. ಎಷ್ಟು ಕಷ್ಟಪಟ್ಟು ಕರೆದುಕೊಂಡು ಬರಬೇಕಾಯ್ತು ಅನ್ನೋದನ್ನು ನಿಮ್ಮಿಂದ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದು ವೇಳೆ ಕರ್ಕೊಂಡು ಬರದೇ ಇದ್ದಿದ್ದರೆ ಸಾಧನಾ ಅಲ್ಲೇ ಸತ್ತು ಹೋಗ್ತಾ ಇದ್ದಳು.

ಸರಿ ಹಾಗಾದ್ರೆ, ಇಲ್ಲೂ ನೋಡಿದ್ರಲ್ಲ, ಏನೂ ಸರಿಯಾಗ್ತಾ ಇಲ್ಲ. ಸದ್ಯ ಹುಡುಗನ್ನ ಕಣ್ಣಿಂದ ನೋಡೋಕಾದ್ರೂ ಆಯ್ತಲ್ಲ. ಅಷ್ಟೇ ಸಾಕು, ಇನ್ನು ಹಿಂತಿರುಗಿ ಹೋಗಲಿ.

ಆದರೆ ಅವಳು ಹಿಂತಿರುಗೋಕೆ ಒಪ್ತಾ ಇಲ್ಲ. ಹುಡುಗನ್ನ ಪಡೆಯದೆ ಇದ್ರೆ ಅವಳು ತಾನು ಇಲ್ಲೇ ಇದ್ದುಬಿಡ್ತೇನೆ ಅಂತ ಹೇಳ್ತಾ ಇದ್ದಾಳೆ.

ನಾನೆಂದೆ, ಆದಂತೂ ಸಾಧ್ಯವಿಲ್ಲ. ಅವಳು ಹಿಂತಿರುಗಲೇಬೇಕು. ಅವಳು ಇಲ್ಲಿರೋದು ಸಾಧ್ಯವಿಲ್ಲ.

ಅವಿನಾಶ ಆಶ್ಚರ್ಯದಿಂದ ಪ್ರಶ್ನಿಸಿದ, ಯಾಕೆ ?

ನಾನೆಂದೆ, ನನಗಿದು ಸರಿಯಾಗಿ ಗೊತ್ತಿಲ್ಲ. ಆದರೆ ನನ್ನ ಮನಸ್ಸಿಗನಿಸುತ್ತೆ, ಸಾಧನಾಳು ಇಲ್ಲಿರೋದು ಸರಿಯಲ್ಲ. ಒಮ್ಮೆ ಅವಳು ಇಲ್ಲಿಂದ ಓಡಿ ಹೋಗಿಬಿಟ್ಟಿದ್ದಾಳೆ. ಇನ್ನು ಅವಳು ಹಿಂತಿರುಗೋದು ಅಸಂಭವ.

ಸುಖ, ಐಶ್ವರ್ಯ ಹಾಗೂ ಭೋಗದ ಆಸೆಯಿಂದ ಒಮ್ಮೆ ಎಲ್ಲವನ್ನೂ ಬಿಟ್ಟು ಅವಳು ಓಡಿ ಹೋಗಿದ್ದಳು. ಅದನ್ನೆಲ್ಲ ಅವಳು ಪಡೆದಿದ್ದಾಳೆ. ಈಗ ಪುನಃ ಮಗುವಿನ ಮಮತೆಗಾಗಿಯೂ ಆಸೆಪಡ್ತಿದಾಳೆ. ಒಂದೇ ಜೀವನದಲ್ಲಿ ಎಲ್ಲವನ್ನೂ ಪಡೆಯೋದಕ್ಕಾಗೋದಿಲ್ಲ. ಯಾವುದಕ್ಕೂ ಒಂದು ಇತಿ ಮಿತಿ ಅಂತ ಇರುತ್ತೆ.

ಅಬ್ದುಲ್ ಹಲೀಮ್ ಥಟ್ಟನೆ ನನಗೆಂದ, ನೀವು ನನ್ನನ್ನು ದ್ವೇಷಿಸಬೇಡಿ. ಆ ದಿನವೂ ನನ್ನ ಮನಸ್ಸಿಗನ್ನಿಸಿತ್ತು.

ನಾನು ಯಾವುದೇ ಹೆಂಗಸಿನ ಮೂರನೇ ಗಂಡನಾದವನನ್ನು ಯಾವನೇ ಆಗಿದ್ದರೂ ದ್ವೇಷಿಸ್ತೇನೆ. ಅದೊಂದೇ ಅಲ್ಲ ಮುಂಬೈನ ಯಾವನೋ ದಡ್ಡ ನನ್ಮಗನಾಗಿದ್ದರೂ ಅದೇ ರೀತಿ ದ್ವೇಷಿಸ್ತೇನೆ. ನೀವೀಗ ಅವಳನ್ನು ಇಲ್ಲಿಂದ ಕರೆದುಕೊಂಡು ಹೋಗೋದೇ ಮೇಲು.

ನೀವು ನನ್ನನ್ನು ನಂಬ್ತಾ ಇಲ್ಲ. ಖಂಡಿತವಾಗಿಯೂ ನಾನು ಅವಳನ್ನು ಪ್ರೀತಿಸ್ತಿದೀನಿ. ಅವಳು ಹೊರಡಲು ಒಪ್ತಾ ಇಲ್ಲ. ಅವಳನ್ನು ಬಿಟ್ಟು ನಾನೊಬ್ಬನೆ ಹೋಗೋಕೂ ಆಗೋದಿಲ್ಲ. ಈಗ ಅವಳನ್ನು ಈ ಅವಸ್ಥೆಯಲ್ಲಿ ನೋಡಿ, ನನಗೆ ಇನ್ನು... ನನ್ನನ್ನು ನಂಬಿ. ನಾನು ನಿಜವಾಗಿಯೂ ಅವಳನ್ನು ಪ್ರೀತಿಸ್ತೇನೆ.

ನೂರ್‌ಜಹಾನ್ ನಿಧಾನವಾಗಿ, ಮೆಲ್ಲನೆ ಹೇಳಿದಳು, ಅವನು ಹೊರಟು ಹೋಗಿದ್ದಾನೆ... ಜೀತು... ಓ ನಾನ್ಯಾಕೆ ಸಾಯೋದಿಲ್ಲ ?

ಶೇಖರನ ಎದೆಯಲ್ಲಿ ಮುಖ ಹುದುಗಿಸಿ ಅವಳು ಏದುಸಿರು ಬಿಡತೊಡಗಿದಳು. ಶೇಖರ ನಿಧಾನವಾಗಿ ಹೇಳಿದ, ವೀಣಾ ಅವಳನ್ನು ಸ್ವಲ್ಪ ಹಿಡ್ಕೊ. ಪುನಃ ನನ್ನ ತಲೆ ಸುತ್ತುತ್ತಾ ಇದೆ.

ನಾನು ಹುಡುಗನ ಭುಜದ ಮೇಲೆ ಕೈ ಇಟ್ಟು ಹೇಳಿದೆ, ಇಂದ್ರಜಿತ್, ನೀನು ಒಳ್ಳೇ ಹುಡುಗ ಅಲ್ವಾ ? ಒಂದು ಸಲ ನೀನು ಅವಳ ಬಳಿಗೆ ಹೋಗಪ್ಪಾ. ಸುಮ್ಮನೆ ಮನಸ್ಸಿನಲ್ಲಿ ಅಂದುಕೋ, ನಿನಗೇನು ಆಗಬೇಕಾಗಿಲ್ಲ ಅಂತ. ಆದರೂ ಒಮ್ಮೆ ಅವಳ ಹತ್ತಿರ ಹೋಗಿ ಕೂತ್ಕೋ.

ಕಣ್ಣಿನಿಂದಲೇ ಶೇಖರನಿಗೆ, ನೂರ್‌ಜಹಾನ್‌ಳ ಸೀರೆ ಸರಿಪಡಿಸಲು ತಿಳಿಸಿದೆ, ಅಸ್ತವ್ಯಸ್ತವಾದ ಬಟ್ಟೆ ಅವಳ ತೊಡೆಯವರೆಗೂ ಸರಿದುಬಂದಿತ್ತು. ಚಿಕ್ಕ ಮಕ್ಕಳು ಈ ದೃಶ್ಯವನ್ನು ನೋಡಬಾರದು. ಹುಡುಗ ಹೆದರಿಕೆಯಿಂದ, ಏನೊಂದೂ ಮಾತನಾಡದೆ ಸುಮ್ಮನೆ ಕುಳಿತುಕೊಂಡಿದ್ದ. ಅವಿನಾಶನೆಂದ, ನಡೀ ನಮ್ಮೊಡನೆ ಸ್ವಲ್ಪ ಕುಳಿತುಕೊಳ್ಳುವಿಯಂತೆ.....

ಕೈಹಿಡಿದು, ಹುಡುಗನನ್ನು ಮಂಚದ ಮೇಲೆ ಕೂಡಿಸುತ್ತಲೇ, ನೂರ್‌ಜಹಾನ್, ಅವನ ಮೇಲೆ ಹಾರಿದಳು. ಬಹಳ ಉದ್ವೇಗದಿಂದ ಮಾತನಾಡತೊಡಗಿದಳು, ಜೀತು,

ಜೀತು ಓ, ಅವರೇ ನಿಮ್ಮಪ್ಪ ಕಣೋ. ನಿನ್ನನ್ನು ಹೊಡೆಯೋದಿಲ್ಲ. ನೀನು ನಮ್ಮ ಜೊತೆ ಬರ್ತೀಯಾ ಮರಿ. ನೀನು ಬಂಗಾರ ಅಲ್ವಾ ? ನಿನಗಾಗಿ ನಾನು, ಎಷ್ಟೊಂದು ದೊಡ್ಡ ಮನೆ ಕಟ್ಟಿಸಿದೀನಿ, ಗೊತ್ತಾ? ಓ ತುಂಬಾ ಎದೆ ನೋವಾಗ್ತಾ ಇದೆ. ಇನ್ನು ತುಂಬಾ ದಿನ ನಾನು ಉಳಿಯೋದಿಲ್ಲ. ನೀನು ನಮ್ಮೊಡನೆ ನಮ್ಮ ಹತ್ತಿರವೇ ಇರುವಿಯಂತೆ.

ಹುಡುಗ ಸ್ವಲ್ಪ ಹೊತ್ತಿನ ಮೇಲೆ ಜೋರಾಗಿ ಅಳಲಾರಂಭಿಸಿದ. ಅವನು ಅಳತೊಡಗಿದೊಡನೆ, ಇಡೀ ಕೋಣೆ ನಿಶ್ಶಬ್ದವಾಗಿ ಬಿಟ್ಟಿತು. ಆ ಕ್ಷಣದಲ್ಲಿ ಒಮ್ಮೆಗೇ, ಕೋಣೆಯಲ್ಲಿನ ಎಲ್ಲರಿಗೂ, ಹಾಗಾದ್ರೆ ಹುಡುಗ ಅವರಮ್ಮನ್ನ ಗುರುತಿಸಿದನೇ ? ಎನಿಸಿತು. ತಾಯಿಯ ಗರ್ಭದಿಂದ ಹೊರ ಬಂದ ಶಿಶು ಯಾವ ರೀತಿ ಅಳುತ್ತೋ ಅದೇ ರೀತಿ ಎರಡನೇಯ ಸಲ ತಾಯಿಯನ್ನು ಪಡೆದ ಮಗು ಅಳಲು ಪ್ರಾರಂಭಿಸಿದ್ದ. ನಮ್ಮೆಲ್ಲರ ಕಣ್ಣುಗಳು ಕಣ್ಣೀರಿಂದ ಮಂಜಾದವು.

ಹುಡುಗ ಅವಿನಾಶನನ್ನು ಗಟ್ಟಿಯಾಗಿ ತಬ್ಬಿಕೊಂಡು ಬಿಕ್ಕುತ್ತ ಹೇಳಿದ, ನನ್ನನ್ನು ಮನೆಗೆ ಕರೆದುಕೊಂಡು ಹೋಗಿ ನಾನಿನ್ನು ಇಲ್ಲಿರೋದಿಲ್ಲ.

ಅವಿನಾಶನೆಂದ, ಇನ್ನು ಅತ್ತು ಕರೆದು ರಂಪಾಟ, ರಗಳೆ ಇವುಗಳನ್ನು ನೋಡೋದಕ್ಕಾಗೋದಿಲ್ಲ. ಮಗು ನಿಜವಾಗಿಯೂ ನಿನಗೆ ಇಲ್ಲಿರೋಕೆ ಇಷ್ಟವಿಲ್ಲ ಅಲ್ವಾ ?

ಇಲ್ಲ.

ಸರಿ ಹಾಗಾದ್ರೆ, ನಾನು ನಿನ್ನನ್ನು ಮನೆಗೆ ಬಿಟ್ಟು ಬರ್ತೇನೆ. ಮೊಣಕಾಲೂರಿ ಕುಳಿತುಕೊಂಡಿದ್ದ ನೂರ್‌ಜಹಾನ್ ಹುಡುಗನ ಸೊಂಟ ಬಿಗಿಯಾಗಿ ಹಿಡಿದು ಹೇಳಿದಳು, ಬೇಡ, ಬೇಡ, ಬೇಡ. ನೀನು ಹೊರಟುಹೋಗ್ಬೇಡ.

ಅವಿನಾಶ ಮೆಲು ದನಿಯಲ್ಲಿ ಹೇಳಿದ, ನೂರ್‌ಜಹಾನ್, ನೀನು ಅವನನ್ನು ಕಣ್ಣಿಂದ ಕಂಡಿದ್ದಾಯ್ತು. ಅದೇ ಬೇಕಾದಷ್ಟಾಯ್ತು. ಈ ಸಲ ಬಿಟ್ಟು ಬಿಡು, ಅವನು ಇಲ್ಲಿರೋದಿಲ್ಲ.

ಬೇಡ, ಬೇಡ, ಬೇಡ. ನನ್ನಿಂದ ಸಹಿಸೋದಕ್ಕಾಗೋದಿಲ್ಲ.

ಅವಿನಾಶ ಜೋರಾಗಿ, ನೂರ್‌ಜಹಾನಳ ಕೈಬಿಡಿಸಿ ಹೇಳಿದ, ಬಾ, ಮಗು. ಶೇಖರ ಸರಸರನೆ ಎದ್ದು ಬಂದು ಹೇಳಿದ, ಈಗಲೇ ಬೇಡ. ಇನ್ನು ಸ್ವಲ್ಪ ಹೊತ್ತು ಇರಲಿ.

ಅವಿನಾಶನೆಂದ, ಇದೇನು ಮಾಡ್ತಾ ಇದೀಯ ? ಅವನನ್ನೀಗ ಇಲ್ಲಿ ಇಟ್ಟುಕೊಂಡರೂ ಏನೂ ಪ್ರಯೋಜನವಿಲ್ಲ. ಘಂಟೆ ಮೂರಾಗ್ತಾ ಬಂದಿದೆ. ಹುಡುಗ ಒಂದು ಚೂರೂ ಬಾಯಿಗೆ ಹಾಕಿಕೊಂಡಿಲ್ಲ. ಮೇಲಿಂದ ಮೇಲೆ ಮನೆಗೆ ಹೋಗ್ತೀನಿ ಅಂತ ಅಳ್ತಾ ಇದ್ದಾನೆ. ನೂರ್‌ಜಹಾನ್ ಅವರಮ್ಮ ಅಲ್ವಂತೆ. ಮನೇಲೆ ಬೇರೊಬ್ಬ ಅಮ್ಮ ಇದ್ದಾಳಂತೆ, ಹೇಳ್ತಾನೇ ಇದ್ದಾನೆ.

ನಾನು ಹೇಳ್ತಾ ಇದೀನಿ. ಅವನು ಇಲ್ಲೇ ಇರಲಿ. ನಿನಗೆ ನೂರ್‌ಜಹಾನಳ ಅವಸ್ಥೆ ಏನಾಗಿದೆ ಅಂತ ಕಾಣ್ತಾ ಇಲ್ವಾ ? ಅವಿನಾಶನೆಂದ, ನೂರ್‌ಜಹಾನಳ ಈ ಅವಸ್ಥೆಗೆ ಅವಳ ಮಗನ ಅವಶ್ಯಕತೆ ಇಲ್ಲ. ಅವಳಿಗೆ ಚಿಕಿತ್ಸೆಯ ಅವಶ್ಯಕತೆ ಇದೆ.

ಹುಡುಗ ಅವಿನಾಶನನ್ನ ಗಟ್ಟಿಯಾಗಿ ಅಪ್ಪಿಕೊಂಡು ಬಿಟ್ಟಿದ್ದ. ಶೇಖರ ಅವನನ್ನು ಬಿಡಿಸಿಕೊಳ್ಳಲು ಹೋದ. ಅವಿನಾಶ ಗಡಸು ಮುಖದಿಂದ ಹೇಳಿದ, ಶೇಖರ ನೀನೇನಾದ್ರೂ ಹುಚ್ಚಾಟ ಮಾಡಿದ್ರೆ. ನಿನಗೂ ಹೊಡೀತೀನಿ, ಹೇಳಿದ್ದೀನಿ. ಹುಡುಗನ್ನ ಕರ್‍ಕೊಂಡು ಬಂದಿರೋದು ನಾನು. ನಾನೇ ಅವನನ್ನು ಹಿಂತಿರುಗಿ ಬಿಟ್ಟು ಬರ್ತೇನೆ, ದಾರಿ ಬಿಡು. ಆದರೂ ಶೇಖರ ಹಾಗೂ ನೂರ್‌ಜಹಾನ್ ಇಬ್ಬರೂ ಹುಡುಗನನ್ನು ಎಳೆದುಕೊಳ್ಳುವ ಪ್ರಯತ್ನ ಮಾಡಿದರು. ಜೋರಾಗಿ ಅವರನ್ನು ದೂರ ತಳ್ಳಿ ಅವಿನಾಶನೆಂದ, ಸುನೀಲ್ ನೀನೇ ಅವರನ್ನು ತಡೆದು ಅಡ್ಡ ಹಾಕು. ನಾನು ಬೇಗ ಹೋಗಿ ನೂರ್‌ಜಹಾನ್ ಹಾಗೂ ಶೇಖರನನ್ನು ತಡೆಯಲು ನಿಂತು, ಹಲೀಮನ, ಕಡೆ ನೋಡಿ ಶಾಂತಭಾವದಿಂದ ಹೇಳಿದೆ, ನೀವು ಇದರ ನಡುವೆ ಬರಬೇಡಿ. ಅಬ್ದುಲ್ ಹಲೀಮ್, ಗೋಡೆಯ ಹತ್ತಿರ ಸರಿದು ನಿಂತು ಹೇಳಿದ, ಇಲ್ಲ ನಾನೇನೂ ಮಾಡೋದಿಲ್ಲ. ನೂರ್ ಜಹಾನ್ ಆಗಲೂ ಕಿರುಚಿದಳು, ಅಬ್ದುಲ್ ಅವರನ್ನು ಹಿಡ್ಕೊ ನನಗೆ ಜೀತೂ ಬೇಕೇ ಬೇಕು.....

ಸ್ವಲ್ಪ ಹೊತ್ತು ದೊಡ್ಡ ರಂಪಾಟವೇ ನಡೆಯಿತು. ನೂರ್‌ಜಹಾನ್ ಹುಡುಗನ ಕೈ ಎಷ್ಟೊಂದು ಬಿಗಿಯಾಗಿ ಹಿಡಿದುಕೊಂಡಿದ್ದಳೆಂದರೆ ಇನ್ನೇನು ಕೈಯೇ ಉಳುಕಿ ಬಿಡುತ್ತೋ ಏನೋ ಹಾಗೆ. ನಾನು ಥಟ್ಟನೆ ನೂರ್‌ಜಹಾನಳನ್ನು ಹಿಡಿದುಕೊಂಡೆ. ಅವಿನಾಶ ಹುಡುಗನನ್ನು ಹೆಗಲ ಮೇಲೆ ಎತ್ತಿಕೊಂಡ. ಹುಡುಗನನ್ನೆತ್ತಿಕೊಂಡು ಬಾಗಿಲು ತೆರೆದು ಕೋಣೆಯಿಂದ ಹೊರಟು ಹೋದ. ನೂರ್‌ಜಹಾನ್ ಬಾಗಿಲವರೆಗೂ ಹೋಗಿ ತಡೆಯಲು ಪ್ರಯತ್ನಿಸಿದಳು. ಅವಿನಾಶನಿಂದ ಹೊಡೆತ ತಿಂದು, ತಿರುಗಿ ಬೇಗ ಹೋಗಿ ಮಂಚದ ಹಿಡಿ ಹಿಡಿದುಕೊಂಡು ತನ್ನನ್ನೆ ಸಂಭಾಳಿಸಿಕೊಂಡಳು. ಶೇಖರ ಅಲ್ಲೇ ನಿಂತಿದ್ದ.

ನಾನು ಹಿಂತಿರುಗಿ ಬಂದು, ಕುರ್ಚಿಯಲ್ಲಿ ಕುಳಿತು ಅಬ್ದುಲ್ ಹಲೀಮ್‌ಗೆ ಹೇಳಿದೆ, ನಿಮ್ಮ ಹತ್ತಿರ ಸಿಗರೇಟ್ ಇದೆಯೇ ? ನನ್ನ ಹತ್ರ ಮುಗಿದು ಹೋಗಿದೆ.

ಸುಮ್ಮನೆ ಕುಳಿತು ಸಿಗರೇಟ್ ಸೇದಲಾರಂಭಿಸಿದೆ. ವೀಣಾ ಹೋಗಿ ನೆಲದ ಮೇಲೆ ಮುದುಡಿ ಮಲಗಿದ್ದ ನೂರ್‌ಜಹಾನ್‌ಳ ಬಳಿ ಹೋಗಿ ಕುಳಿತುಕೊಂಡಳು. ಪುನಃ ಫಿಟ್ಸ್ ಬಂದಿದೆ ಅಂತ ಕಾಣುತ್ತೆ. ವೀಣಾನ ಬಾಯಿಂದ ಇಂದು ಏನೊಂದೂ ಮಾತಿಲ್ಲ. ಈ ಬಿಲ್ಡಿಂಗ್‌ನ ಪ್ರತಿಯೊಂದು ಫ್ಲ್ಯಾಟ್ ಕೂಡಾ ಆರೆ ಗೃಹಸ್ಥರದ್ದು. ಕೂಗೋದು ಕಿರುಚೋದು ಇದ್ದೇ ಇರುತ್ತೆ. ಅದಕ್ಕೇ ಬೇರೆಯವರ್‍ಯಾರೂ ಬಂದು ಇಣುಕಿ ನೋಡೋದೇ ಇಲ್ಲ.

ಶೇಖರನನ್ನು ನೋಡಿದ್ರೆ ಅಯ್ಯೋ ಎಂದೆನಿಸುತ್ತಿತ್ತು. ಕಣ್ಣುಗಳೆರಡೂ ಬತ್ತಿ ಒಳ ಹೋಗಿವೆ. ತಲೆಕೂದಲು ಹಣ್ಣಾಗಿ ಹೋಗಿದೆ. ನನಗನಿಸುತ್ತೆ, ಅವನಲ್ಲಿ ಏನೋ ಒಂದು ಛೇಂಜ್ ಬಂದಿದೆ. ಇವತ್ತು ಇವನನ್ನು ಇಲ್ಲಿಂದ ಕರೆದುಕೊಂಡು ಹೋಗ್ಬೇಕು ಅಂತ ನಾನು ಮನಸ್ಸಿನಲ್ಲೇ ನಿರ್ಧರಿಸಿಕೊಂಡೆ. ಅವರಮ್ಮನಿಗೆ ಮಾತು ಬೇರೆ ಕೊಟ್ಟಿದೀನಿ. ನನಗಂತೂ ಬೇರಿನ್ನೆಲ್ಲೂ ಹೋಗಲಾಗಲಿಲ್ಲ. ಥಟ್ಟನೆ ಜಮುನಾಳ ಬಗ್ಗೆ ನೆನಪಾಗಿ ಎದೆಯಲ್ಲಿ ವ್ಯಥೆಯಾಗಲಾರಂಭಿಸಿತು. ಜಮುನಾಳ ಮನೆಯಿಂದ

ಹಿಂತಿರುಗಿದ ನಂತರ, ಎರಡು ದಿನ ಎಲ್ಲೂ ಹೋಗಿರಲಿಲ್ಲ. ಸಂಜೆ ಹೊತ್ತು ಸುಮ್ಮನೆ ಮನೆಗೆ ಬಂದು ಮಲಗಿರುತ್ತಿದ್ದೆ. ನಾನು ಏನೆಂದುಕೊಂಡರೂ, ಪ್ರತಿಯೊಂದರಲ್ಲೂ ತಪ್ಪೇ ಆಗುತ್ತೆ. ಜಮುನಾಳನ್ನು ಪಡೆದು ನಾನು ಬದುಕಿದ್ದೆ. ಹೀಗೆ ಬದುಕುಳಿಯುವುದರಲ್ಲಿ ನಡುವೆ ಏನಾದರೂ ತಪ್ಪಿದೆಯೆ? ಆದ್ರೂ ಯಾಕೆ ತಪ್ಪಾಯ್ತು? ಜಮುನಾಳನ್ನು ನಾನು ಏನು ಮಾಡಿದರೂ ಪಡೆಯಲಾಗಲಿಲ್ಲ. ಮತ್ತೊಮ್ಮೆ ಎರಡು ಸಲ ಫೋನ್ ಮಾಡುವ ಪ್ರಯತ್ನ ಪಟ್ಟಿದ್ದೆ. ಎರಡೂ ಸಲ ಸರಸ್ವತಿಯೇ ಫೋನ್ ಎತ್ತಿದ್ದಳು. ನಾನು ಬೇಸರದಿಂದ ಫೋನ್ ಕೆಳಗಿಟ್ಟುಬಿಟ್ಟಿದ್ದೆ. ಆಗ ನನಗರ್ಥವಾಗಿತ್ತು, ನಾನು ಜಮುನಾಳನ್ನು ಪಡೆಯೋದಕ್ಕಾಗೋದಿಲ್ಲ ಅಂತ. ಆದರೆ ಸಂಜೆ ಒಂಟಿಯಾಗಿ, ಮನೆಯಲ್ಲಿ ಮಲಗಿಕೊಂಡಿರೋದೂ ನನಗೆ ಅಭ್ಯಾಸವಿಲ್ಲ. ದೀರ್ಘ ನಿಶ್ವಾಸವನ್ನು ಬಿಟ್ಟು ನಾನೆಂದೆ, ನಡಿ ಶೇಖರ್, ಇವತ್ತು ಮನೆಗೆ ಹೋಗೋಣ.

ಅವಿನಾಶ ಹೊರಟು ಹೋದ ಮೇಲೆ ಹತ್ತು ನಿಮಿಷವೂ ಕಳೆದಿರಲಿಲ್ಲ. ಇಡೀ ಕೋಣೆಯಲ್ಲಿ ದೊಡ್ಡ ಹೆಜ್ಜೆಯ ಶಬ್ದ ಕೇಳಿ ಬಂತು. ಮಹಡಿಯ ಮೇಲೆ ಏನೋ ಗಲಾಟೆ. ವೀಣಾಳ ಕೋಣೆಯ ಬಾಗಿಲನ್ನು ದೂಡಬೇಕಾಗೂ ಇರಲಿಲ್ಲ. ಬಾಗಿಲು ತೆರೆದೇ ಇತ್ತು. ಪೊಲೀಸರು ಒಳ ನುಗ್ಗಿದರು.

ಪೊಲೀಸರ ಜೊತೆ ಬಂದಿದ್ದ ಸಣಕಲ ವ್ಯಕ್ತಿ, ನೂರ್‌ಜಹಾನ್‌ಳನ್ನು ನೋಡಿದೊಡನೆ, ಉತ್ತೇಜಿತನಾಗಿ ಹೇಳಿದ, ಅವಳೇ, ಅವಳೇ ನೋಡಿ ಆ ಸೂಳೆ.

ನೂರ್‌ಜಹಾನ್ ಮಾತಿಲ್ಲದೆ, ಆ ವ್ಯಕ್ತಿಯ ಕಡೆಗೆ ದಿಟ್ಟಿಸಿ ನೋಡಿದಳು. ಅವಳ ಆ ನೋಟ ನೋಡಿದರೆ ಗೊತ್ತಾಗುತ್ತೆ ಅವನ ಹೆಸರು ಅಜಯ. ಕೋಣೆಯೊಳಗೆ, ರಿವಾಲ್ವರ್ ಸಮೇತ ಒಂದಿಬ್ಬರು ಪೊಲೀಸರು. ಹೊರಗಡೆ ಇನ್ನೂ ಕೆಲವು ಪೊಲೀಸರು. ಅವರುಗಳಲ್ಲಿ ನಾನು ಒಬ್ಬನನ್ನು ಗುರುತಿಸಿದೆ. ಅದೇ ದೊಡ್ಡ ಮೀಸೆಯವ. ಸರಸ್ವತಿ ಅವನನ್ನೇ ಸಾನ್ಯಾಲ್‌ದಾ ಎಂದು ಕರೆದಿದ್ದಳು. ಒಂದು ದಿನ ನಾನೂ ಅವನ ಜೀಪ್ ಹತ್ತಿ ಕುಳಿತಿದ್ದೆ. ನಾನು ನಗುಮುಖ ಮಾಡಿ ಅವನ ಕಡೆ ನೋಡಿದೆ. ಆದರೆ ಅವನು ನನ್ನನ್ನು ಗುರುತು ಹಿಡಿದ ಚಿಹ್ನೆ ಏನೂ ಕಂಡು ಬರಲಿಲ್ಲ. ಕರ್ಕಶ ದನಿಯಲ್ಲಿ ಎಲ್ಲರನ್ನೂ ಉದ್ದೇಶಿಸಿ ಹೇಳಿದ, ಹುಡುಗ ಎಲ್ಲಿ?

ಯಾರೂ ಏನೂ ಉತ್ತರಿಸಲಿಲ್ಲ. ಕೇವಲ ನೂರ್‌ಜಹಾನ್ ಹುಚ್ಚಿಯಂತೆ ಕಿಲಕಿಲನೆ ನಕ್ಕು ಹೇಳಿದಳು, ಹುಡುಗ ಇಲ್ಲ, ಅವನಂತೂ ಇಲ್ಲವೇ ಇಲ್ಲ. ಯಾವ ಹುಡುಗನೂ ಇಲ್ಲ. ಯಾರಿಗೂ ಅವನು ಸಿಗೋದೂ ಇಲ್ಲ.

ವೀಣಾಳೆಂದಳು, ಯಾರ ಮಾತು ಹೇಳ್ತಾ ಇದೀರ? ನಮಗೆ ಯಾವ ಮಕ್ಕಳು ಮರೀನೂ ಇಲ್ಲ. ಒಬ್ಬ ಇನ್ಸ್‌ಪೆಕ್ಟರ್ ಅವಳನ್ನು ಗದರಿಸಿದ. ಜೊತೆಗೇ ಅವನೆಂದ, ಜೀತೂ, ಜೀತೂ ಹೊರಗೆ ಬಾರಪ್ಪಾ. ಯಾವೊಂದು ಸುಳಿವೂ ಇಲ್ಲ. ಇನ್ಸ್‌ಪೆಕ್ಟರ್ ಸಾನ್ಯಾಲ್ ಥಟ್ಟನೆ ಅಬ್ದುಲ್ ಹಲೀಮನ ಶರ್ಟಿನ ಕಾಲರ್ ಹಿಡಿದು ಹೇಳಿದ, ಹುಡುಗನ್ನು ಎಲ್ಲಿ ಬಚ್ಚಿಟ್ಟಿದ್ದೀಯೋ? ಹೊರಗೆ ಕರ್ಕೊಂಡು ಬಾ.

ಅಸಡ್ಡೆಯಿಂದ ಇನ್ಸ್‌ಪೆಕ್ಟರರ ಕೈಹಿಡಿದು, ದೃಢವಾದ ದನಿಯಲ್ಲಿ ಅಬ್ದುಲ್

ಹಲೀಮನೆಂದ, ಮೈ ಮೇಲೆ ಕೈ ಮಾಡಬೇಡಿ. ಬೇಕಾದ್ರೆ ಠಾಣೆಗೆ ಕರ್‍ಕೊಂಡು ಹೋಗಿ. ಏನು ಹೇಳೋದಿದೆಯೋ ಅಲ್ಲೇ ಹೇಳ್ತೀನಿ. ನಾನು ಮತ್ತು ಶೇಖರ ಅಬ್ದುಲ್ ಹಲೀಮನ ಹತ್ತಿರ ಹೋಗಿ ನಿಂತುಕೊಂಡೆವು. ಶೇಖರ ಗಡಸು ದನಿಯಲ್ಲಿ ಸಿಡುಕಿ ಹೇಳಿದ, ಮರ್ಯಾದೆಯಿಂದ ಮಾತನಾಡಿ.

ಅಡಿಗೆ ಮನೆಯಿಂದ ಹಿಡಿದು ವೀಣಾಳ ಇಡೀ ಫ್ಲ್ಯಾಟ್ ಹಾಗೂ ಇತರ ಸ್ಥಳವನ್ನು ಹುಡುಕಾಡಿ ನೋಡಲಾಯಿತು. ಅನಂತರ ಇನ್ಸ್‌ಪೆಕ್ಟರ್, ಪುನಃ ಕೋಣೆಯ ಒಳಗೆ ಬಂದು, ಎಲ್ಲರನ್ನು ಉದ್ದೇಶಿಸಿ ಹೇಳಿದ, ಐದು ನಿಮಿಷದಲ್ಲಿ ತಯಾರಾಗಿ ಬಿಡಿ. ನೀವೆಲ್ಲರೂ ಠಾಣೆಗೆ ನನ್ನ ಜೊತೆ ಬರಬೇಕಾಗುತ್ತೆ.

ಜಾಲರಿ ಹಾಕಿದ ಕಪ್ಪು ವ್ಯಾನ್ ಹತ್ತಿಸಿ, ನಮ್ಮನ್ನೆಲ್ಲ ಜೋಡಾಬಗಾನ್ ಠಾಣೆಗೆ ಕರೆತರಲಾಯಿತು. ತುಂಬಾ ನಿಧಾನವಾಗಿ ಮಳೆ ಹನಿ ಬೀಳ್ತಾ ಇತ್ತು. ಶೇಖರ ವೀಣಾಳ ಭುಜದ ಮೇಲೆ ಭಾರ ಹಾಕಿ ಗಾಡಿಯಿಂದಿಳಿದ. ಈಗ ಅವನದು ಗುರುತಿಸಲಾಗದಂಥಾ ಅವಸ್ಥೆ. ದೊಡ್ಡ ಸಾಹೇಬರ ಮುಂದೆ, ಮರದ ಬೆಂಚಿನ ಮೇಲೆ ನಮ್ಮನ್ನೆಲ್ಲ ಕೂಡಿಸಲಾಯಿತು. ದೊಡ್ಡ ಸಾಹೇಬರು ಗಂಭೀರವಾಗಿ ಹೇಳಿದರು, ನಿಮ್ಮ ನಿಮ್ಮಲ್ಲಿ ಯಾರೂ ಏನೂ ಮಾತನಾಡಬೇಡಿ.

ಆದ್ರೂ ಶೇಖರ ಸರಳವಾಗಿ ಪ್ರಶ್ನಿಸಿದ, ನಮ್ಮ ವಿರುದ್ಧ ಏನು ದೂರು ಕೊಡಲಾಗಿದೆ ಅನ್ನೋದನ್ನಾದರೂ ದಯಮಾಡಿ ತಿಳಿಸ್ತೀರಾ ?

ದೊಡ್ಡ ಸಾಹೇಬರು ಕಣ್ಣೆತ್ತಿ, ಕೇವಲ ಶೇಖರನೊಬ್ಬನನ್ನೇ ದಿಟ್ಟಿಸಿದರು. ಆದರೆ, ಏನೂ ಉತ್ತರಿಸಲಿಲ್ಲ. ಪುನಃ ಫೈಲು ಹಾಗೂ ಡೈರಿ ಪುಸ್ತಕದಲ್ಲೇ ಮಗ್ನರಾದರು. ನಾವು ಸುಮ್ಮನೆ ಕುಳಿತೇ ಇದ್ದೆವು. ಸಿಗರೇಟ್ ಸೇದುವುದು ಉಚಿತವೋ ಅಲ್ಲವೋ ಎನ್ನುವುದು ತಿಳಿಯದೆ, ನಾನು ಸಿಗರೇಟ್ ಹತ್ತಿಸಲಿಲ್ಲ.

ತುಂಬಾ ಜನರ ಗಡಿಬಿಡಿಯ ಓಡಾಟ. ಅಷ್ಟೇ ಏನು, ಪೋಲೀಸರ ನಡುವೆಯೂ ಹಾಸ್ಯಮಯ ಮಾತುಕತೆ ಪ್ರಾರಂಭವಾಯಿತು. ವಿಚಾರಣೆಯ ನಂತರ, ಜೈಲಿಗೆ ಹಾಕಲ್ಪಟ್ಟ, ಒಬ್ಬ ಕೈದಿ ದಿನಾ ರಾಮನಾಮ ಹಾಡಿ ಎಲ್ಲರನ್ನು ದಿನಾ ಬೆಳಿಗ್ಗೆ ಎಚ್ಚರಗೊಳಿಸುತ್ತಿದ್ದ. ಇದನ್ನು ಕುರಿತು, ಇಬ್ಬರು ಪೇದೆಗಳು ತಮ್ಮ ತಮ್ಮಲ್ಲೇ ನಗತೊಡಗಿದರು. ಅವರ ಮಾತು ಕೇಳಿ ನಮಗೂ ನಗು ಬಂತು. ಪೋಲೀಸರ ಮಾತಿಗೆ ಅಪರಾಧಿಗಳು ನಗುವುದು ಉಚಿತವಲ್ಲ ಎಂದು ಭಾವಿಸಿ ನಾನು ನಗುವನ್ನು ನುಂಗಿಬಿಟ್ಟೆ. ಒಬ್ಬ ಪೇದೆ ನಮ್ಮನ್ನು ಕುರಿತು ಹೇಳಿದ, ಸಾರ್, ಇವರಿಗೆ ರಾತ್ರಿ ಊಟದ ವ್ಯವಸ್ಥೆ ಏನಾದರೂ ಮಾಡಬೇಕೇ ? ದೊಡ್ಡ ಸಾಹೇಬರು, ನಮ್ಮ ಕಡೆ ಚಕಿತರಾಗಿ ನೋಡಿ ಹೇಳಿದರು, ಹೌದು. ಒಂದು ಔತಣವನ್ನೇ ಕೊಟ್ಟು ಬಿಡು. ಆನಂತರ ಪುನಃ ಹೇಳಿದರು, ಇನ್ನೂ ಲಾಲ್‌ಬಾಜಾರ್‌ನಿಂದ ಡೈರೆಕ್ಷನ್ ಸಿಕ್ಕಿಲ್ಲ.

ಎರಡು–ಮೂರು ಟೆಲಿಫೋನ್‌ಗಳ ಎರಡು–ಮೂರು ರೀತಿಯ ಶಬ್ದ ಕೇಳಿ ತೂಕಡಿಕೆ ಬಂದ ಹಾಗಿತ್ತು. ಸ್ವಲ್ಪ ಹೊತ್ತಿನ ಮೇಲೆ, ಪುನಃ ಗಾಡಿ ಹತ್ತಿಸಿ, ಲಾಲ್‌ಬಾಜಾರ್‌ಗೆ ನಮ್ಮನ್ನೆಲ್ಲ ಕರೆತರಲಾಯಿತು. ಗೇಟಿನಿಂದ ಗಾಡಿ

ಒಳಹೋಗುತ್ತಿರುವಂತೆಯೇ ನಿಂತಿತು. ಇದರ ಮೊದಲು, ಒಂದೆರಡು ಠಾಣೆಗಳಿಗೆ ನಾನು ಹೋಗಿದ್ದುಂಟು. ಆದರೆ ಲಾಲ್‌ಬಾಜಾರಿಗೆ ಎಂದೂ ಬಂದಿರಲಿಲ್ಲ. ನನ್ನ ಭಾವನೆ ಏನಿತ್ತೆಂದರೆ, ಗೇಟಿನೊಳಗಿನಿಂದ ಒಳ ಹೊಕ್ಕರೆ, ಜೈಲಿರೋದು ಬಹಳ ದೂರದಲ್ಲಿ ಅಂತ. ಆದರೆ ಆ ತರಹ ಕಾಣಿಸ್ತಾ ಇಲ್ಲ. ಹತ್ತಿರವೇ ಒಂದು ಮನೆಯ ಮಹಡಿಯ ಮೇಲೆ, ಒಂದು ಸಾಧಾರಣವಾದ ಕೋಣೆಯೊಳಗೆ ನಮ್ಮನ್ನು ಕೂಡಿಸಲಾಯಿತು. ಕೋಣೆಯ ಬಾಗಿಲು, ಕಬ್ಬಿಣದ ಸರಳುಗಳಿಂದ ಮಾಡಲ್ಪಟ್ಟಿದ್ದವು. ಅಲ್ಲಿ ತುಂಬಾ ಹೊತ್ತು ಕುಳಿತಿದ್ದೆವು. ಸಮಯ ಕಳೆದಂತೆ, ಜೇಬಿನಲ್ಲಿದ್ದ ಸಿಗರೇಟೆಲ್ಲಾ ಖಾಲಿಯಾಗಿದ್ದವು.

ಮೊದಲು, ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಕುಳಿತಿದ್ದೆವು. ಸ್ವಲ್ಪ ಹೊತ್ತಿನ ನಂತರ, ಶೇಖರನೆಂದ, ಬೆಳಗಾಗ್ತಾ ಬಂತು. ಮೈಗೂ ಸ್ವಲ್ಪ ಹಾಯ್ ಅನಿಸ್ತಾ ಇದೆ. ಈ ಕೋಣೆಯಲ್ಲಿ ಒಳ್ಳೇ ಗಾಳಿ ಬೆಳಕಿದೆ. ಅವನೆಂದ, ನಮಗೇನು ಜೈಲು ಗೀಲು ಆಗುತ್ತೇನೋ ಸುನೀಲ ? ನಾನೆಂದೆ, ಯಾರಿಗ್ಗೊತ್ತಪ್ಪ ?

ಜೈಲು ಆಯ್ತೆಂದ್ರೆ, ಕೆಲಸ ಕಳ್ಕೋಬೇಕಾಗುತ್ತೆ. ಒಂದು ದಿನ ಜೈಲಾದ್ರೂ ಕೆಲಸ ಕಳ್ಕೋತೀವಿ ಅಂತ ಕೇಳಿದ್ದೀನಿ. ನಿನಗೇನು ಭಯ ಇಲ್ಲ ಬಿಡು, ನಿಮ್ಮ ಭಾವನವರದೇ ಆಫೀಸು.

ನಾನು ನಕ್ಕೆ. ನಂತರ ಹೇಳಿದೆ, ಒಂದು ವೇಳೆ ಜೈಲು ಆದ್ರೂ, ಯಾರಿಗಾಗುತ್ತೆ ? ವೀಣಾಳಿಗಾಗುತ್ತೋ ಏನೋ ?

ಯಾಕೆ ವೀಣಾಳಿಗ್ಯಾಕೆ ? ಅವಳದೇನು ತಪ್ಪು ?

ಅವಳದೇನೂ ತಪ್ಪಿಲ್ಲ ಅನ್ನೋದು ಗೊತ್ತೇ ಇದೆ. ಯಾರೋ ಮಾಡೋ ತಪ್ಪಿಗೆ, ಇನ್ಯಾರೋ ಶಿಕ್ಷೆ ಅನುಭವಿಸ್ತಾರೆ. ಇದೇ ತಾನೇ ಈ ಪ್ರಪಂಚದ ನಿಯಮ. ಅದೇನೇ ಇರಲಿ, ವೀಣಾಳಿಗೆ ಸಜೆ ಕಡಿಮೆ ಮಾಡಿಸೋಕೆ ಯಾರಿಂದಲೂ ಸಾಧ್ಯವಾಗೋದಿಲ್ಲವೇ ?

ವೀಣಾ ಬೇಕೆಂದೇ ನಗಲಿಲ್ಲ. ಶೇಖರ, ಅಬ್ದುಲ್ ಹಲೀಮನನ್ನು ನೋಡಿ ಹೇಳಿದ, ನಿಮ್ಮಿಂದಲೇ, ಇಷ್ಟು ದೂರ ಬಂದು ರಗಳೆಗೆ ಸಿಕ್ಕಿ ಹಾಕ್ಕೊಳೋ ತರಹ ಆಯ್ತು. ಹಾಯಂತ ಇದ್ರಿ ಢಾಕಾದಲ್ಲಿ.

ಅಬ್ದುಲ್ ಹಲೀಮನ ಮುಖ, ಕಣ್ಣು, ಕಿವಿ, ಎಲ್ಲವೂ ಒಳ್ಳೆ ಬೆಕ್ಕಿನ ತರಹ. ಆದರೂ ಪ್ರಯತ್ನಪೂರ್ವಕವಾಗಿ ನಕ್ಕು ಅವನೆಂದ, ಅದ್ಯಾಕೆ ಹಾಗಂತೀರ, ನನ್ನ ಹೆಂಡತಿ ವಿಷಯದಲ್ಲಿ ನನಗೆ ಅಧಿಕಾರವಿಲ್ಲವೇ ? ನೀವುಗಳೇ ಸುಮ್ಮನಿರದೆ, ನಿಮ್ಮನ್ನೇ ನೀವು ಸಿಕ್ಕಿಹಾಕಿಸಿಕೊಂಡಿದ್ದೀರ. ಈಗ ಏನು ತಾಪತ್ರಯವಾಗಿಬಿಟ್ಟಿದೆ ನೋಡಿ.

ಶೇಖರ ಉದಾಸೀನ ಭಾವದಿಂದ ಹೇಳಿದ, ನಮಗೇನು ಕಾದಿದೆಯೋ ಏನೋ ? ಜೈಲಿನಲ್ಲಿ ಕಳೆಯೋದೇನು ಕಷ್ಟ ಅಲ್ಲ, ಅಲ್ವೇನೋ ಸುನೀಲ ?

ನಾನೆಂದೆ, ನೀನೇನೋ ಹೇಳ್ತಾ ಇದೀಯ. ನನಗ್ಯಾಕೋ ಭಯವಾಗ್ತಾ ಇದೆ. ಅದನ್ನ ನಾವು ಎದುರಿಸಲೇಬೇಕು. ಸ್ವಲ್ಪ ಮಾನ, ಮರ್ಯಾದೆಯ ಪ್ರಶ್ನೆ.

ನೂರ್‌ಜಹಾನ್‌ಗೆ ಥಟ್ಟನೆ ನಿದ್ರೆ ಆವರಿಸ್ತಾ ಇದೆ. ಅಬ್ದುಲ್ ಹಲೀಮರ ಮೈಗೊರಗಿ ಕುಳಿತಿದ್ದಾಳೆ. ಅಬ್ದುಲ್ ಹಲೀಮ್‌ಗೆ ಅವಳು ಕಿವಿಯಲ್ಲೇನೋ ಪಿಸುಗುಟ್ಟಿ ಹೇಳಿದಳು. ಅನುಮಾನಿಸಿ ಅಬ್ದುಲ್ ಕೂಡಲೆ ಶೇಖರನನ್ನು ಕರೆದು ಅವನ ಕಿವಿಯಲ್ಲಿ ಪಿಸುಗುಟ್ಟಿದ. ಶೇಖರ ಬಾಗಿಲ ಹತ್ತಿರದ ಪಹರೇದಾರನನ್ನು ಕರೆದು ಪಿಸ್ ಪಿಸ್ ಎಂದು ಅವನ ಕಿವಿಯಲ್ಲಿ ಉಸುರಿದ. ಅವನೆಂದ, ಈಗ ಸುಮ್ಮನೆ ಇರೋದಕ್ಕೆ ಹೇಳಿ. ಇಲ್ಲೆಲ್ಲ ಹೆಂಗಸರ ಬಾತ್‌ರೂಮ್ ಇಲ್ಲ.

ಕೇಳಿ ನನ್ನ ಮನಸ್ಸಿಗನ್ನಿಸಿತು, ಹೆಂಗಸರ ಹಾಗೂ ಗಂಡಸರ ಬಾತ್‌ರೂಮ್ ಅಂತ ಪ್ರತ್ಯೇಕವಾಗೇನೋ ಬರ್ದಿರ್ತಾರೆ. ಆದರೆ ಒಳಗೇನು ಬೇರೆ ಪ್ರತ್ಯೇಕತೆ ಇರುತ್ತದೆಯೋ ? ಯಾರಿಗ್ಗೊತ್ತು, ನಾನೆಂದೂ ಹೆಂಗಸರ ಬಾತ್‌ರೂಮ್ ಒಳಗೆ ಹೇಗಿರುತ್ತೆ ಅನ್ನೋದನ್ನ ನೋಡಿರಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಕಾರಿಡಾರ್‌ನಲ್ಲಿ ಬೂಟಿನ ಶಬ್ದ ಕೇಳಿ ಬಂತು, ಏನೋ ಬಹಳ ದೂರದಿಂದ ಒಬ್ಬಾತ ನಡೆದು ಬರುತ್ತಿರುವಂತೆ. ಆನಂತರ ಒಬ್ಬ ಪೇದೆ ನಮ್ಮ ಕೋಣೆಯೆದುರು ಬಂದು ನಿಂತುಕೊಂಡ. ಬಾಗಿಲನ್ನು ತೆಗೆದು ಅವನೆಂದ, ಸುನೀಲ್ ಗಂಗೋಲಿ ಯಾರು ನನ್ನ ಸಂಗಡ ಬರ್ಬೇಕು. ನಾನು ವಿಸ್ಮಿತನಾಗಿ ಬಿಟ್ಟೆ. ಪ್ರಥಮವಾಗಿಯೇ ನನಗೆ ಕರೆಯೇ ? ಯಾಕೆ ? ಅವರೆಲ್ಲ ವಿಸ್ಮಿತರಾಗಿ ನನ್ನ ಕಡೆಯೇ ನೋಡಿದರು. ಶೇಖರ ಕೇಳಿದ, ಏನೋ ಸಮಾಚಾರ ? ನಾನು, ಹೋಗಿಯೇ ನೋಡಬೇಕು ಎಂದು ಹೇಳಿ, ಹೊರಗೆ ಬಂದೆ. ಆತ ಗಟ್ಟಿಯಾಗಿ ನನ್ನ ಒಂದು ಕೈ ಹಿಡಿದುಕೊಂಡು ನಡೆಯತೊಡಗಿದ. ನಾನೆಂದೆ, ಕೈ ಬಿಡು, ಹಾಗೇ ಹೋಗೋಣ. ಆತ ಒಮ್ಮೆ ನನ್ನ ನೋಡಿದ, ಆದರೆ ಕೈ ಹಿಡಿದೇ ನಡೆಯತೊಡಗಿದ. ಮೆಟ್ಟಿಲು ಹತ್ತಿ, ಒಂದಾದ ನಂತರ ಇನ್ನೊಂದು ಕೋಣೆಗಳನ್ನು ಹಾದು ಒಂದು ಸ್ಥಳದಲ್ಲಿ ಬಂದು ನಿಂತೆವು. ಕೋಣೆಯೊಳಗಿನ ವ್ಯಕ್ತಿಯನ್ನು ನೋಡಿ ಚಕಿತನಾಗದೆ ಇರಲಿಲ್ಲ. ಈ ವಿಷಯ ನನ್ನ ಮನಸ್ಸಿಗೆ ಮೊದಲೇ ಹೊಳೆದಿತ್ತು, ಆದರೆ ನಾನು ಅದರ ಬಗ್ಗೆ ಒಮ್ಮೆಯೂ ಯೋಚಿಸಿರಲಿಲ್ಲ. ಜಮುನಾಳ ಅಪ್ಪ, ಜಗದೀಶ್‌ರಾಯ್. ನನಗೆ ಒಂದು ಕುರ್ಚಿಯನ್ನು ತೋರಿಸಿ ಸನ್ನೆ ಮಾಡಿ, ಕೂತ್ಕೋ ಎಂದರು.

ಆನಂತರ ಯಾವ ಮಾತೂ ಇಲ್ಲ. ಇಂಡೆಕ್ಸ್ ಹಾಕಿದ, ಒಂದು ದೊಡ್ಡ ಫೈಲನ್ನು ತೆಗೆದುಕೊಂಡು ಪುಟ ತಿರುಗಿಸಲಾರಂಭಿಸಿದರು. ಮೇಜಿನ ಹತ್ತಿರವೇ ಇನ್ನೊಬ್ಬಾತ ಅದೇನನ್ನೋ ಬರೆಯುತ್ತಿದ್ದಾನೆ. ಪೇದೆ ನನ್ನ ಹಿಂದೆಯೇ ನಿಶ್ಶಬ್ದವಾಗಿ ನಿಂತುಕೊಂಡಿದ್ದಾನೆ. ಗೋಡೆಯ ಮೇಲಿನ ಗಡಿಯಾರ ಮಾತ್ರ ಟಿಕ್ ಟಿಕ್ ಎಂದು ಸದ್ದು ಮಾಡುತ್ತಿದೆ. ಸುಮ್ಮನೆ ಕುಳಿತಿರಲು ಮುಜುಗರವೆನಿಸತೊಡಗಿತು. ಒಂದೆರಡು ಸಲ ಮೈ ಮುರಿದೆ. ಯಾರೂ ಗಮನಿಸಿದಂತೆ ಕಾಣಲಿಲ್ಲ. ಜಗದೀಶ್‌ರಾಯ್ ಮುಖವನ್ನೆತ್ತದೆಯೇ ಪೇದೆಗೆ ಹೇಳಿದರು, ಫಾರಿನರ್ಸ್ ಎಂಟ್ರಿ ಫೈಲ್ ತೆಗೆದುಕೊಂಡು ಬಾ. ಪೇದೆ ಹೊರ ಹೋಗಿ ಸ್ವಲ್ಪ ಹೊತ್ತಿನ ನಂತರ ಫೈಲ್ ಹಿಡಿದುಕೊಂಡು ಒಳ ಬಂದ. ಫೈಲನ್ನು ಅವನು ಮೇಜಿನ ಮೇಲಿಡುತ್ತಲೇ ಅದೇ ತರಹ, ಮುಖವನ್ನೆತ್ತದೆಯೇ ಅವರೆಂದರು, ಹೊರಗೆ ಹೋಗಿ ನಿಂತುಕೋ.

ರಾತ್ರಿ ಸುಮಾರು ಹನ್ನೊಂದೂವರೆಯ ಸಮಯ. ಇವತ್ತು ರಾತ್ರಿ ಮನೆಗೆ ಹಿಂತಿರುಗಲು ಸಾಧ್ಯವಾಗುತ್ತೋ ಇಲ್ಲವೋ ಯಾರಿಗೆ ಗೊತ್ತು. ಸ್ವಲ್ಪ ಚಡಪಡಿಕೆ ತೋರಿ, ಸಂಕೋಚವನ್ನು ದೂರ ಮಾಡಿ, ಪ್ರಶ್ನಿಸಿದೆ, ಚಿಕ್ಕಪ್ಪ, ನಾನು ಇಲ್ಲಿಂದ ಫೋನ್ ಮಾಡಬಹುದೇ ? ಮನೆಗೆ ಸ್ವಲ್ಪ ವಿಷಯ ತಿಳಿಸಬೇಕಾಗಿತ್ತು.

ಜಗದೀಶ್‌ರಾಯ್ ಶಾಂತ ಕಣ್ಣುಗಳಿಂದ ನನ್ನನ್ನೇ ದಿಟ್ಟಿಸಿದರು. ಏನೂ ಉತ್ತರಿಸಲಿಲ್ಲ. ಮೇಜಿನ ಅನ್ಯ ವ್ಯಕ್ತಿ ಕೂಡ ಒಮ್ಮೆ ವಿಸ್ಮಿತನಾಗಿ ದಿಟ್ಟಿಸಿ, ಪುನಃ ಬರೆಯಲಾರಂಭಿಸಿದ. ಪ್ರಶ್ನೆ ಕೇಳಿದರೆ ಬರೀ ಕಣ್ಣಿನ ಕಡೆ ನೋಡೋದು, ಏನೂ ಉತ್ತರವಿಲ್ಲ. ಈ ಪೊಲೀಸರ ಸ್ವಭಾವವನ್ನು ನಾನು ಬಹಳ ಕಂಡಿದ್ದೇನೆ. ಟೆಲಿಫೋನ್ ಮಾಡುವ ಸಾಹಸ ಮಾಡಲಾಗಲಿಲ್ಲ. ಪುನಃ ಕುಳಿತು ಗೋಡೆಯ ಮೇಲಿನ ಗಡಿಯಾರದ ಶಬ್ದವನ್ನು ಆಲಿಸಲಾರಂಭಿಸಿದೆ.

ಸ್ವಲ್ಪ ಹೊತ್ತಿನ ನಂತರ ಇನ್ನೊಬ್ಬಾತ ಮಾತನಾಡಿದ, ಆಗ್ಹೋಯ್ತು ಸಾರ್. ಜಗದೀಶ್‌ರಾಯ್ ಅವನ ಕೈಯಿಂದ ಫೈಲ್ ತೆಗೆದುಕೊಂಡು ಗಮನವಿಟ್ಟು ಓದಲಾರಂಭಿಸಿದರು. ನನ್ನನ್ನು ಬೇಕೆಂದೇ ನರ್ವಸ್ ಹಾಗೂ ಉತ್ಕಂಠಿತನನ್ನಾಗಿ ಮಾಡುವ ಪ್ರಯತ್ನ ನಡೆದಿದೆ ಎನ್ನುವುದು ನನಗರ್ಥವಾಯಿತು. ಈಗ ಮಹಾ ಅಂತ ಘಟನೆ ನಡೆದಿರೋದಾದ್ರೂ ಏನು ? ಅದಕ್ಕಾಗಿ ಯಾಕಿಷ್ಟೊಂದು ಉದ್ವೇಗ ? ಇವರುಗಳ ಗಾಂಭೀರ್ಯ ಹಾಗೂ ಕ್ರಮಬದ್ಧ ಶಿಸ್ತನ್ನು ನೋಡಿದರೆ, ಇವರ ಮೇಲೇ ಪ್ರಪಂಚ ಅವಲಂಬಿತವಾಗಿದೆಯೋ ಏನೋ ಎನ್ನುವಂತಿತ್ತು.

ಸರಿ ಹಾಗಾದ್ರೆ ನೀವಿನ್ನು ಹೊರಡಿ, ಜಗದೀಶ್ ರಾಯ್ ಆತನಿಗೆಂದರು. ಆತ ಎದ್ದು ಕಾಗದಪತ್ರಗಳನ್ನೆತ್ತಿಕೊಂಡು, ಪೆನ್ನನ್ನು ಜೇಬಿಗೆ ಸಿಕ್ಕಿಸಿಕೊಂಡು ಹೊರ ಹೊರಡಲನುವಾದಾಗ, ಪುನಃ ಜಗದೀಶ್‌ರಾಯ್‌ರೆಂದರು, ಮಿಸ್ಟರ್ ಸೇನ್ ನೀವು ನನ್ನ ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಹೋಗಿ.

ಈಗ ಕೋಣೆಯಲ್ಲಿ ನಾವಿಬ್ಬರೇ ಎದುರುಬದಿರು ಕುಳಿತಿದ್ದವು. ನನ್ನೆದೆ ಢವಗುಟ್ಟಲಾರಂಭಿಸಿತು. ಆದರೆ ಜಗದೀಶ್‌ರಾಯ್‌ರ ಮುಖದಲ್ಲಿ ಒಂದು ವಿಲಕ್ಷಣ ವ್ಯಕ್ತಿತ್ವ ಎದ್ದು ಕಾಣುತ್ತಿದೆ. ರಸ್ತೆಯಲ್ಲಿ ಅವರನ್ನು ಕಂಡಾಗ ಏನೂ ಅನ್ನಿಸೋದಿಲ್ಲ. ಆದರೆ ಅವರು ಮೇಜಿನ ಎದುರು ಕುಳಿತಿದ್ದಾಗ ಮನಸ್ಸಿಗೇನೋ ಒಂದು ರೀತಿ ಭಯವಾಗುತ್ತೆ.

ಅವರು ಏನೊಂದೂ ಮಾತನಾಡದೆ, ಸುಮ್ಮನೆ ಕುರ್ಚಿ ಬಿಟ್ಟೆದ್ದು ಕೋಣೆಯಲ್ಲಿ ಠಳಾಯಿಸಲಾರಂಭಿಸಿದರು. ಸ್ವಲ್ಪ ಹೊತ್ತು ಠಳಾಯಿಸಿದ ಮೇಲೆ, ನನ್ನ ಬಳಿ ಬಂದು ನಿಂತುಕೊಂಡರು. ನಾನು ಮುಖ ಎತ್ತಿ ಅವರ ಮುಖವನ್ನು ನೋಡಿದೆ. ಅವರ ಮುಖ ಧುಮುಗುಟ್ಟುತ್ತಿದೆ. ಮೋಡ ಕವಿದಾಗ ಗುಡುಗುವ ರೀತಿ ಗಡಸು ದನಿಯಲ್ಲಿ ಪ್ರಶ್ನಿಸಿದರು, ಅಲ್ಲಿ ನೀನೇನು ಮಾಡ್ತಿದ್ದಿ ?

ಗಂಟಲಿನ ದನಿ ಏನೋ ಸ್ವಲ್ಪ ಭಯ ಹುಟ್ಟಿಸುವಂಥದ್ದೆ. ನಾನೆಂದೆ, ನಾನು ನಿಮಗೆ ನಿಜವನ್ನೇ ಹೇಳ್ತೇನೆ, ಮೊದಲಿನಿಂದಲೂ –

ನಿನ್ನಿಂದ ನಾನು ಯಾವ ಘಟನೆಯ ಬಗ್ಗೆಯೂ ಕೇಳೋದಕ್ಕೆ ಇಷ್ಟಪಡೋದಿಲ್ಲ.

ನೀನು ಅಲ್ಲಿ ಏನು ಮಾಡ್ತಾ ಇದ್ದೆ ?

ಎಲ್ಲಾ ಹೇಳದೆ ನಿಮಗೆ ಹೇಗೆ ಅರ್ಥವಾಗುತ್ತೆ ? ಅಂದೆ ನಾನು.

ನನ್ನ ಮಾತಿಗೆ ಮೊದಲು ಉತ್ತರ ಹೇಳು, ಆ ಹಾಳು ಸ್ಥಳಕ್ಕೆ ನೀನು ಹೋಗಿದ್ದಾದರೂ ಏಕೆ ?

ಆದರೂ ನಾನು ದುರ್ಬಲ ಭಾವದಿಂದ ಮಾತನಾಡಲು ಪ್ರಯತ್ನಿಸಿದೆ, ಇಲ್ಲ, ನೀವು ವಿಷಯವನ್ನು ಕೇಳಿ, ಅಂದ್ರೆ ನಾನು....

ಅವರು ಪುನಃ ಗದರಿದರು. ಒಂದೇ ಮಾತಿನಲ್ಲಿ ಉತ್ತರ ಹೇಳು, ಅಸಹ್ಯವಾದ ಸ್ಥಳದಲ್ಲಿ ನೀನು ಇದ್ದುದಾದರೂ ಏಕೆ ?

ಬಹಳ ದಿನದಿಂದ, ಯಾರಿಂದಲೂ ಗದರಿಸಿಕೊಳ್ಳುವ ಪ್ರಮೇಯ ಒದಗಿರಲಿಲ್ಲ. ಅದಲ್ಲದೆ ಅದು ನನಗೆ ಸ್ವಲ್ಪ ಅಲರ್ಜಿ ಕೂಡಾ. ಯಾರಾದರೂ ಗದರಿದರೆ ನನಗೆ ನಖಶಿಖಾಂತ ಕೋಪ ಉಕ್ಕುತ್ತೆ. ನಾನು ಸ್ವಲ್ಪ ದೃಢವಾಗೇ ಹೇಳಿದೆ, ಯಾವೊಂದು ಸ್ಥಳವೂ ಅಸಹ್ಯವಾದುದೇನಲ್ಲ.

ಹಲ್ಲು ಕಡಿಯುತ್ತಾ ಜಗದೀಶ್‌ರಾಯ್, ರ್‍ಯಾಸ್ಕಲ್, ನಿನ್ನನ್ನು ನಾನು ಜೈಲಿನೊಳಗೆ ಹಾಕಿಸಿಬಿಡ್ತೀನಿ ಎಂದು ನನ್ನ ಕಪಾಳಕ್ಕೆ ಜೋರಾಗಿ ಬಾರಿಸಿದರು. ಇಡೀ ಕೆನ್ನೆ ಊದಿಕೊಂಡು ನನ್ನ ಮುಖ ವಕ್ರವಾಯ್ತು. ನಾನು ಕುರ್ಚಿ ಬಿಟ್ಟೆದ್ದು ನಿಂತು ಹೇಳಿದೆ, ಇದೇನು ನಾನು ಯಾವ ತಪ್ಪು ಮಾಡದೇನೇ ನೀವು ನನ್ನನ್ನು ಹೊಡೀತಿದೀರಲ್ಲ ಯಾಕೆ ?

ತಪ್ಪಿಲ್ಲವೇ ? ಓ ! ಈಗಲೂ ನಿನ್ನ ಬಾಯಿಂದ ಗಬ್ಬುವಾಸನೆ ಹೊಡೀತಿದೆ. ಎಲ್ಲ ಗುಣಗಳೂ ಇವೆ ಅನ್ನೋದನ್ನು ನೋಡ್ತಾನೇ ಇದೀನಲ್ಲ.

ಅವರ ಮಾತು ಕೇಳಿ ನನಗೆ ನಗು ಬಂತು. ಕಳೆದ ಏಳು ದಿನಗಳಿಂದ, ನಾನು ಒಂದು ಹನಿಯನ್ನೂ ಕುಡಿದಿರಲಿಲ್ಲ. ಆದರೂ ನನ್ನ ಬಾಯಿಂದ ಅವರಿಗೆ ಗಬ್ಬು ವಾಸನೆ ಬಂದಿತ್ತು. ಇದನ್ನೇ ವಿಧಿ ಅನ್ನೋದು. ಅವರ ಏಟಿನಿಂದಾಗಿ, ನನ್ನ ಮುಖ ಇನ್ನೂ ಉರಿಯುತ್ತಿತ್ತು. ಆದರೂ ನಾನು ವಿನೀತ ಭಾವದಿಂದಲೇ ಮಾತನಾಡಿದೆ, ಚಿಕ್ಕಪ್ಪ, ನೀವು ನನ್ನನ್ನು ತಪ್ಪು ತಿಳಿದುಕೊಂಡಿದ್ದೀರ......

ಡರ್ಟಿ ಸ್ಕೌಂಡ್ರಲ್, ನೀನು ಸುಮ್ಮನೆ ಒಳಗೆ ಹೊಕ್ಕಿದ್ದೆ ! ಏಷ್ಟಯ್ಯ ಧೈರ್ಯ ? ಮೇಜಿನ ಮೇಲಿನಿಂದ ಒಂದು ಕಪ್ಪು ರೂಲರ್ ತೆಗೆದು ನನಗೆ ಹೊಡೆಯಲೆಂದು ಬಂದರು. ನಾನು ಈ ಘಟನೆಯಿಂದಾಗಿ ದಿಙ್ಮೂಢನಾಗಿಬಿಟ್ಟಿದ್ದೆ. ಆತ್ಮರಕ್ಷಣೆಗಾಗಿ ಸರಿದು ನಿಲ್ಲಲೂ ಅವಕಾಶವಾಗಲಿಲ್ಲ. ಅವರು ನನ್ನ ಕುತ್ತಿಗೆ ಪಟ್ಟಿಯನ್ನು ಹಿಡಿದುಕೊಂಡು ಜೋರಾಗಿ ಹೊಡೆಯಲಾರಂಭಿಸಿದರು.

ಯಾತನೆ, ಸಿಟ್ಟು, ನನ್ನ ದೇಹವನ್ನು ಹಣ್ಣು ಮಾಡಿತ್ತು.ನಾನು ಕೈಯಿಂದ ಅವರ ರೂಲರನ್ನು ಗಟ್ಟಿಯಾಗಿ ಹಿಡಿದುಕೊಂಡು ಕಸಿದುಕೊಳ್ಳುವ ಪ್ರಯತ್ನ ಮಾಡಿದೆ. ಆದರೆ ಸಾಧ್ಯವಾಗಲಿಲ್ಲ. ನಾನು ಮೇಜಿನ ಹತ್ತಿರ ಹೋಗಿ, ಥಟ್ಟನೆ ಒಂದು ದಪ್ಪನೆಯ ಪೇಪರ್ ವೆಯಿಟ್ ಕೈಗೆತ್ತಿಕೊಂಡೆ. ನಂತರ ಪ್ರತಿಯೊಂದು ಶಬ್ದವನ್ನೂ ಸ್ಪಷ್ಟವಾಗಿ ಉಚ್ಚರಿಸಿ ಹೇಳಿದೆ, ಖೂನಿ ಮಾಡಿ ಬಿಡ್ತೀನಿ. ಇನ್ನೊಂದು ಸಲ, ನೀವೇನಾದ್ರೂ

ಹೊಡೆಯೋದಕ್ಕೆ ಬಂದರೆ, ಕೊಲೆ ಮಾಡಿಬಿಡ್ತೀನಿ. ನನ್ನ ಬಗ್ಗೆ ನಿಮಗೆ ಗೊತ್ತಿಲ್ಲಾಂತ ಕಾಣುತ್ತೆ. ನಾನು ಪೂರ್ವ ಬಂಗಾಲಿ, ಕೊಲೆ ಮಾಡಿ ಫಾಸಿ ಶಿಕ್ಷೆ ಅನುಭವಿಸೋದಕ್ಕೂ ಹೇಸೋನಲ್ಲ.

ಇಬ್ಬರೂ, ಒಬ್ಬರು ಮತ್ತೊಬ್ಬರನ್ನು ದಿಟ್ಟಿಸುತ್ತಲೇ ಇದ್ದೆವು. ಜಗದೀಶರಾಯ್ ಮುಖದಲ್ಲಿ ಸಿಟ್ಟಲ್ಲದೆ, ದುಃಖದ ಚಿಹ್ನೆಯೂ ಕಾಣಿಸಿತು. ನಾನು ಹಿಂಸಾ ಭಾವನೆಯಿಂದ, ಅವರ ಕಡೆ ನೋಡುತ್ತಲೇ ಇದ್ದೆ. ಇನ್ನೊಂದು ಹೆಜ್ಜೆ ಮುಂದೆ ಬಂದಿದ್ದರೆ ನಾನು ಆ ಪೇಪರ್ ವೆಯಿಟನ್ನು ಅವರ ಹಣೆಯ ಮೇಲೆ, ಎತ್ತಿ ಬಿಸಾಕಿ ಬಿಡುತ್ತಿದ್ದೆ. ಗುರಿ ಒಂದಿಷ್ಟೂ ತಪ್ಪುತ್ತಿರಲಿಲ್ಲ. ಸ್ವಲ್ಪ ತಡವರಿಸಿ ಜಗದೀಶ್ ರಾಯ್‌ರೆಂದರು, ನೀನು ನನ್ನ ಸಂಸಾರವನ್ನು ನಾಶ ಮಾಡಲೆಂದು ಬಂದಿದ್ದೆ. ನಿನಗೆ ಎಷ್ಟೋ ಧೈರ್ಯ ? ನೀನು ಆತ್ಮೀಯನಂತೆ ಮನೆ ಒಳಗೂ ನುಗ್ಗಿದ್ದೆ......

ನಾನೇನು ನಿಮಗೆ ನಷ್ಟ ಮಾಡಿರೋದು ? ನಾನು ಕೇವಲ ನನ್ನನ್ನು ಕಾಪಾಡಿಕೊಳ್ಳಬಯಸಿದ್ದೆ. ಅವರ ಹಣೆಯಲ್ಲಿ ಎರಡು ಗುಬುಟುಗಳು ಎದ್ದಿದ್ದವು. ಮುಖದಲ್ಲಿ ಒಂದು ರೀತಿಯ ವಿಲಕ್ಷಣ ಕೋಪ ಹಾಗೂ ಹತಾಶ ಭಾವನೆ ಆವರಿಸಿತ್ತು, ಯಾವುದೋ ವಿಪತ್ತಿಗೆ ಸಿಕ್ಕಿ ಹಾಕಿಕೊಂಡವರಂತೆ. ನನಗೊಮ್ಮೆ ಜಮುನಾಳ ತಾಯಿಗೇನಾದರೂ ಅಸೌಖ್ಯ ಉಲ್ಬಣಗೊಂಡಿದೆಯೋ ಏನೋ ಎಂದೆನಿಸಿತು. ಹಾಗಿದ್ದರೆ ಅನಾವಶ್ಯಕವಾಗಿ ಇಷ್ಟು ರಾತ್ರಿಯಾದರೂ, ಠಾಣೆಯಲ್ಲೇ ಇರುತ್ತಿದ್ದರೇ ? ನನ್ನ ದೇಹವಿಡೀ ಉರಿಯುತ್ತಿತ್ತು.

ನೀನು, ನನ್ನ ಮಗಳಿಗೆ ಅಪಮಾನ ಮಾಡಲೆಂದು ಹೋಗಿದ್ದೆ ಕುಲಘಾತಕ. ನಿನ್ನ ಬಗ್ಗೆ ಎಷ್ಟೋ ಆಸೆ ಇಟ್ಟುಕೊಂಡಿದ್ದೆ. ನೀನು ನೋಡಿದರೆ ದೊಡ್ಡ ಗೂಂಡಾ. ವೇಶ್ಯೆ ಹಾಗೂ ಗೂಢಚಾರಿಗಳ ಜೊತೆ ಸೇರಿ ಭ್ರಷ್ಟನಾಗಿ ಕುಳಿತಿದ್ದೀಯ. ನನ್ನ ಮಗಳ ದಡ್ಡತನದ ಪ್ರಯೋಜನವನ್ನು ಉಪಯೋಗಿಸಿಕೊಂಡು......

ನಿಮ್ಮ ಮಗಳಿಗೆ ಏನು ಮಾಡಿದ್ದೀನಿ ?

ನೀನು ಜಮುನಾಳ ಸರ್ವನಾಶ ಮಾಡಲು ಹೊರಟಿದ್ದಿ.

ಸುಳ್ಳು.

ಅಷ್ಟು ಚಿಕ್ಕ, ಹೂವಿನ ತರಹದ ಹುಡುಗೀನ, ನೀನು – ನೀನೊಬ್ಬ ದೊಡ್ಡ ಮೋಸಗಾರ, ನಿನ್ನ.....

ಸುಳ್ಳು, ಸುಳ್ಳು. ನಾನು ಕಿರುಚಲಾರಂಭಿಸಿದೆ. ನನ್ನ ಉಸಿರು ಕಟ್ಟಲಾರಂಭಿಸಿತು. ಆದರೂ ಪ್ರಾಣ ರಕ್ಷಣೆಗಾಗಿ ಒಮ್ಮೆ ಎದ್ದು ನಿಲ್ಲುವುದು ಉಚಿತವೆನ್ನಿಸಿತು. ಜೀವನದಲ್ಲಿ ಕೊನೇದಾಗಿ, ಇಡೀ ಶರೀರ ಬಳಸಿ ಪ್ರತಿವಾದವನ್ನು ಮಾಡುವುದೊಳಿತೆನಿಸಿತು. ನಾನು ಚೀತ್ಕರಿಸಲಾರಂಭಿಸಿದೆ.

ಸರಸ್ವತಿ ಹೇಳಿದ್ದೇನಾದರೂ ಒಂದು ವೇಳೆ ನಿಜವಾಗಿದ್ದರೆ, ನಿನ್ನನ್ನು ಜೀವ ಸಮೇತ ಸುಟ್ಟು ಹಾಕಿಬಿಡ್ತೀನಿ.

ಸರಸ್ವತಿ ಎಂಬ ಹೆಸರನ್ನು ಕೇಳಿ ನಾನು ದಿಙ್ಮೂಢನಾದೆ. ನಾನು ಸರಸ್ವತಿಯ ಬಗ್ಗೆ ಮರೆತೇ ಬಿಟ್ಟಿದ್ದೆ. ಪುನಃ ಆ ಹೆಸರನ್ನು ಕೇಳಿ, ನನ್ನ ದೇಹ ತಣ್ಣಗಾಗಿ ಬಿಟ್ಟಿತು.

ನಾನು ಹತಾಶನಾಗಿ ಪೇಪರ್ ವೆಯಿಟನ್ನಿಟ್ಟು ಹೇಳಿದೆ, ಸರಸ್ವತಿ ಛೇ, ನೀನು ನನ್ನನ್ನು ಸುಟ್ಟುಬಿಟ್ಟೆ. ಇನ್ನು ನನ್ನಿಂದ ಸಾಧ್ಯವಿಲ್ಲ.

ವಿಷಯ ತಿಳಿದು ಭಾವನವರು ರಾತ್ರಿಯೇ ನನ್ನನ್ನು ಜಾಮೀನಿನ ಮೇಲೆ ಬಿಡಿಸಿಕೊಂಡು ಕರೆದುಕೊಂಡು ಹೋದರು. ಶೇಖರನಿಗೂ ಜಾಮೀನಿನ ವ್ಯವಸ್ಥೆಯಾಯಿತು. ಕೊನೇವರೆಗೂ ನಮ್ಮ ಸುದ್ದಿ ಬರಲೇ ಇಲ್ಲ. ಅವಿನಾಶನ ಯುಕ್ತಿ ಹಾಗೂ ಕಪಟದಿಂದಾಗಿ, ಸಹಜವಾಗಿಯೇ ಮುಚ್ಚಿ ಹೋಯಿತು. ಅವಿನಾಶ, ಅಜಯ ಹಾಗೂ ಚಿಕ್ಕ ಹುಡುಗನನ್ನು ತನ್ನ ಬುಟ್ಟಿಗೆ ಹಾಕಿಕೊಂಡು ಬಿಟ್ಟಿದ್ದ. ಆ ಚಿಕ್ಕ ಹುಡುಗ ಇಂದ್ರಜಿತ್ ಅವಿನಾಶನ ದೊಡ್ಡ ಭಕ್ತನಾಗಿ ಬಿಟ್ಟಿದ್ದ. ಅವನಿಂದ ಪೊಲೀಸರಿಗೆ ಏನನ್ನೂ ತಿಳಿಯಲಾಗಲಿಲ್ಲ. ಅವನು ಪದೇ ಪದೇ ಹೇಳ್ತಾ ಇದ್ದದ್ದು ಒಂದೇ ಮಾತು – ತಾನು ಅವಿನಾಶನ ಜೊತೆ ಸಂಜೆ ತಿರುಗಾಡಲು ಹೋಗುತ್ತಿದ್ದೆ ಹಾಗೂ ಆಗಲೂ ಅವಿನಾಶ ತನ್ನನ್ನು ತಿರುಗಾಡಲು ಕರೆದುಕೊಂಡು ಹೋಗಿದ್ದ ಅಂತಲೇ. ಹೀಗಾಗಿ ಹುಡುಗನನ್ನು ಕದ್ದ ಯಾವುದೇ ಕೇಸ್ ದಾಖಲಾಗಲು ಸಾಧ್ಯವಾಗಲೇ ಇಲ್ಲ.

ಅಬ್ದುಲ್ ಹಲೀಮ್ ಹಾಗೂ ನೂರ್‌ಜಹಾನ್, ಇಬ್ಬರಿಗೂ ಪಾಕಿಸ್ತಾನದ ಪಾಸ್‌ಪೋರ್ಟ್ ಇತ್ತು. ಆದರೆ ವೀಸಾದ ಬಗ್ಗೆ ಸ್ವಲ್ಪ ತೊಡಕಿತ್ತು. ಆದ್ದರಿಂದ ಕೆಲವು ದಿನ ಪೊಲೀಸರು ಅವರನ್ನು ಒಳಗೆ ಹಾಕಿದ್ದರು. ಅದೇ ಅವಸ್ಥೆಯಲ್ಲಿ ನೂರ್‌ಜಹಾನ್ ಒಮ್ಮೆ ಆತ್ಮಹತ್ಯೆಯ ಪ್ರಯತ್ನವನ್ನೂ ಮಾಡಿದ್ದಳು. ಆದರೆ ಅದು ಸಾಧ್ಯವಾಗಲಿಲ್ಲ. ವೀಣಾ ಆ ಮನೆಯನ್ನು ಬಿಟ್ಟು ಎಲ್ಲೋ ಹೊರಟು ಹೋಗಿದ್ದಳು.

ತುಂಬಾ ದಿನಗಳ ನಂತರ ಅರುಣನ ಮಗನ ಅನ್ನಪ್ರಾಶನದ ಔತಣಕ್ಕೆ ಊಟ ಮಾಡಲು ಹೋಗಿ ಎಲ್ಲ ಸ್ನೇಹಿತರುಗಳು ಒಟ್ಟಾಗಿ ಸೇರಿದ್ದೆವು. ನನ್ನದೆಯಲ್ಲಿ ವ್ಯಥೆ ಸತ್ತುಹೋಗಿತ್ತು. ಶೇಖರನ ಆರೋಗ್ಯ ಸುಧಾರಿಸಿತ್ತು. ಸುವಿಮಲ ತಾನು ಒಂದು ಕಾದಂಬರಿ ಬರೆದು ಪ್ರಕಾಶಕರನ್ನು ಹುಡುಕಲು ಸಾಧ್ಯವಾಯಿತೆಂದು ಬಹಳ ಖುಷಿಯಾಗಿದ್ದ. ನಾವುಗಳೆಲ್ಲ ಚೆನ್ನಾಗಿ ಶೇವ್ ಮಾಡಿಕೊಂಡು, ಸ್ವಚ್ಛ ಉಡುಪು ತೊಟ್ಟು ಉಜ್ವಲ ಮೂರ್ತಿಗಳಂತಿದ್ದೆವು, ಪ್ರಪಂಚದಲ್ಲಿ ಎಲ್ಲೂ ಯಾವೊಂದೂ ದುಃಖದ ಲೇಶಮಾತ್ರವೂ ಇಲ್ಲ ಎನ್ನುವಂತೆ. ಈ ಮಧ್ಯೆ ಒಮ್ಮೆ ಭಾವನವರೊಂದಿಗೆ ಜಗಳವಾಡುವ ಸಂದರ್ಭ ಒದಗಿ ಬಂದಿತ್ತು ಹಾಗೂ ಅವರು ನನ್ನನ್ನು ಕೆಲಸದಿಂದ ಬಿಡಿಸಿ ಬಿಡುತ್ತೇನೆ ಎಂದು ಬೆದರಿಕೆ ಹಾಕಿದ್ದರು. ಆದರೆ ನಾನು ದೊಡ್ಡಕ್ಕನನ್ನು ಸಮಜಾಯಿಸಿ, ಒಂದು ತಿಂಗಳ ಕಾಲಾವಕಾಶ ಪಡೆದುಕೊಂಡಿದ್ದೆ. ಆ ಒಂದು ತಿಂಗಳು, ಬಹಳ ಗಮನವಿಟ್ಟು ಆಫೀಸಿನ ಕೆಲಸ ಮಾಡಿದೆ. ಅದರಿಂದಾಗಿ ಭಾವನವರ ಮನಸ್ಸು ಕರಗದೆ ಇರಲಿಲ್ಲ. ಈ ಮಧ್ಯೆ ತಾಪಸ ಕೆಲಸ ಕಳೆದುಕೊಂಡು, ನನ್ನ ಹತ್ತಿರ ಹಣ ಕೇಳಲು ಬಂದಿದ್ದ. ಕೆಲಸ ಕಳೆದುಕೊಳ್ಳುವ ಬೀಭತ್ಸ ರೂಪವನ್ನು ಅರಿತು ನಾನು ನನ್ನ ಕೆಲಸ ಕಳೆದುಕೊಳ್ಳಲು ರಾಜಿಯಾಗಲಿಲ್ಲ.

ಪ್ರಪಂಚದಲ್ಲೀಗ ಎಲ್ಲೂ, ಯಾವೊಂದೂ ದುಃಖವಿಲ್ಲ. ಶಾಮಿಯಾನಾ

ಹಾಕಲ್ಪಟ್ಟ ಛತ್ತಿನ ಮೇಲೆ ಔತಣದ ಊಟ ಮಾಡಲು ಕುಳಿತ ನಾವು, ಗಲಾಟೆ ಗದ್ದಲ ಮಾಡಿಕೊಂಡು ಕಟ್‌ಲೆಟ್ ಹಾಗೂ ಸೋಹನ್‌ಪಾಪಡಿಗಾಗಿ ರಂಪ ಎಬ್ಬಿಸಿದ್ದೆವು. ಗುಂಪಿನಲ್ಲಿ ಮನೀಷಳನ್ನು ಕಂಡೆ. ಮನೀಷಳನ್ನು ನೋಡಿ, ನನ್ನ ಕಣ್ಣಿನ ರೆಪ್ಪೆ ಕೂಡಾ ಅಲುಗಾಡಲಿಲ್ಲ. ಬೇಕೆಂದೇ ನನ್ನ ಮೈಮೇಲೆ ಪನ್ನೀರೆರೆಚ ಬಂದಳು. ನಾನೂ ಕೂಡಾ ಬೇಕೆಂದೇ ಅವಳ ಹೂದಾನಿಯಿಂದ, ಒಂದು ಹೂವನ್ನೆತ್ತಿಕೊಂಡು ಮೈಮೇಲೆ ಸಿಂಪಡಿಸಿಕೊಂಡೆ. ನನಗೆ ಗೊತ್ತು ಮನೀಷಳನ್ನು ನಾನು ಒಂಟಿಯಾಗಿ ಕಾಣೋದು ಸಾಧ್ಯವಿಲ್ಲ ಅಂತ. ತುಂಬಾ ಜನ ಸೇರಿದ್ದರೆಂದು ನಾನು, ನನ್ನ ಸ್ನೇಹಿತರು ಅರುಣನ ಮನೆಯಿಂದ ಸ್ವಲ್ಪ ಮೊದಲೇ ಹೊರ ಬಂದುಬಿಟ್ಟೆವು. ರಸ್ತೆಯ ತಿರುವಿನಲ್ಲಿ ನಿಂತು ಬೀಡಾ ಹಾಕಿಕೊಂಡು ಸಿಗರೇಟ್ ಸೇದುತ್ತ ಹರಟೆ ಹೊಡೆಯಲಾರಂಭಿಸಿದೆವು. ನಾನು ಸುವಿಮಲನೊಂದಿಗೆ ಅವನ ಬರವಣಿಗೆಯ ಬಗ್ಗೆ ವಿಚಾರಿಸಿದೆ. ಒಂದಿಬ್ಬರು ಭಿಕ್ಷುಕ ಹೆಂಗಸರು ಭಿಕ್ಷೆಗಾಗಿ ಒಂದೇ ಸಮನೆ ಪೀಡಿಸುತ್ತಿದ್ದರು. ಸುವಿಮಲ ಥಟ್ಟನೆ ಜೇಬಿನಿಂದ ಚಿಲ್ಲರೆ ಹಣ ತೆಗೆದು ಆ ಭಿಕ್ಷುಕ ಹೆಂಗಸರಿಗೆ ಕೊಟ್ಟುಬಿಟ್ಟ. ಅವಿನಾಶ ಅದನ್ನು ನೋಡಿ ಅವನ ಹತ್ತಿರ ಬಂದು ಹೇಳಿದ, ಏನೋ ಮರಿ ಸಮಾಚಾರ? ಒಮ್ಮೆಗೇ ಕುಬೇರನಾಗಿ ಬಿಟ್ಟಂತಿದೆ.

ಸುವಿಮಲ ನಗುತ್ತ ಹೇಳಿದ, ನೋಡೋ, ನಾನೇ ನಿಜವಾಗಿಯೂ ಒಬ್ಬ ಭಿಕ್ಷುಕ. ನನ್ನ ಹತ್ತಿರಾನೂ ಯಾರಾದ್ರೂ ಭಿಕ್ಷೆ ಕೇಳೋದಕ್ಕೆ ಬಂದರೆ, ಭಿಕ್ಷೆ ಕೊಡೋದಕ್ಕೆ ನನಗೆ ತುಂಬಾ ಇಷ್ಟವಾಗುತ್ತೆ. ಸಾಧಾರಣವಾಗಿ ಭಿಕ್ಷುಕರು ನನ್ನ ಹತ್ತಿರ ಭಿಕ್ಷೆ ಬೇಡೋದೇ ಇಲ್ಲ. ಅವರೇ ನನ್ನನ್ನು ಗುರುತಿಸಿ ಬಿಡ್ತಾರೆ. ಅದಲ್ಲದೆ ಇವತ್ತಿನ ಗುಡ್ ಟರ್ನ್ ಬೇರೆ ಇನ್ನೂ ಬಾಕಿ ಇತ್ತಲ್ಲ.

ಭಿಕ್ಷೆ ಕೊಡೋದೇನು, ಒಳ್ಳೆ ಕೆಲಸಾನಾ? ಎಂದ ಅವಿನಾಶ.

ನನಗೇನೂ ತ್ರಪ್ಪು ಕಾಣಲಿಲ್ಲ.

ನನಗಂತೂ ಮೈ ಉರಿದು ಹೋಗುತ್ತೆ. ಆ ದಿನ ರಾತ್ರಿ ಪಾರ್ಕ್ ಸರ್ಕಲ್‌ನಿಂದ ಬರ್ತಿದ್ದೆ... ಪಾರ್ಕಿನ ಹತ್ತಿರ ಭೂತ ಕಂಡೆ, ಒಂದು ಜೀವಂತ ಭೂತ. ಒಬ್ಬ ಕಪ್ಪನೆಯ, ಅರೆ ಮುದುಕ ಭಿಕ್ಷುಕ, ಜೊತೆಗೆ ಹುಚ್ಚ ಬೇರೆ. ನಡೆಯೋಕೂ ಶಕ್ತಿ ಇಲ್ಲ. ತೀರಾ ದಣಿದು, ತೆವಳಿಕೊಂಡೇ ಬರುತ್ತಿದ್ದಾನೆ. ನನಗೇನನ್ನಿಸಿತು ಗೊತ್ತಾ? ಅವನು ಬದುಕಿಯೂ ಏನು ತಾನೇ ಲಾಭ? ದಿನಾ ಸ್ವಲ್ಪ ಸ್ವಲ್ಪವಾಗಿ ಸಾಯೋದು? ನನ್ನ ಕೈಯಲ್ಲಿ ಎರಡು ಚಿತ್ರಗಳ ಬ್ಲಾಕ್‌ಗಳಿದ್ದವು. ತುಂಬಾ ಭಾರವಾದ ಬ್ಲಾಕ್‌ಗಳು. ನನಗೆ ಅವನ್ನು ಎತ್ತಿ ಅವನ ತಲೆ ಮೇಲೆ ಬಿಸಾಕಬೇಕು, ಅದರಿಂದಲೇ ಅವನು ಸತ್ತು ಹೋಗಬೇಕು ಅಂತ ಇಚ್ಛೆಯಾಯಿತು. ಆದರೆ ಸಿಕ್ಕಿ ಹಾಕಿಕೊಂಡರೆ, ನರಹತ್ಯೆಯ ಜುಲ್ಮಾನೆಯ ಮೇಲೆ ಗಲ್ಲು ಶಿಕ್ಷೆಯಾಗುತ್ತೋ ಏನೋ ಎಂದು ಹೆದರಿದೆ. ಯೋಚಿಸಿ ನೋಡು ಮರ್ಸಿ ಕಿಲಿಂಗ್ ಪ್ರಾರಂಭಿಸೋದೇ ಒಳ್ಳೆಯದು. ಅವನನ್ನು ಸಾಯಿಸಿದರೆ ಆದರಿಂದ ಅವನಿಗೆ ಉಪಕಾರ ತಾನೇ ಆಗೋದು? ಎಂದ ಅವಿನಾಶ.

ಅವನಿಗೇನೋ ಉಪಕಾರ ಮಾಡಿದಂತೆ, ಆದರೆ ಅದರಿಂದ ನಿನಗೇ ದೊಡ್ಡ

ವಿಪತ್ತು ಎದುರಾಗುತ್ತಿತ್ತು. ನಿನ್ನಿಂದ ಜೀವಮಾನವಿಡೀ ಅವನನ್ನು ಮರೆಯೋಕಾಗ್ತಾ ಇರಲಿಲ್ಲ.

ನನಗೆ ಅಂಥ ಪೊಳ್ಳು ಸೆಂಟಿಮೆಂಟ್ ಇಲ್ಲ. ರಸ್ತೆ ತುಂಬಾ ಅಡ್ಡಾದಿಡ್ಡಿ ಭಿಕ್ಷುಕರನ್ನು ಕಂಡರೆ ನನಗೆಷ್ಟು ಸಿಟ್ಟು ಬರುತ್ತಂದ್ರೆ ಈ ತರಹ ಬದುಕಿಯೂ ತಾನೇ ಏನು ಪ್ರಯೋಜನ ? ನನ್ನಿಂದ ಸಾಧ್ಯವಾಗೋದಾದ್ರೆ ನಾನು ಕಲ್ಕತ್ತೆಯ ಎಲ್ಲಾ ಭಿಕ್ಷುಕ ಹೆಂಗಸರನ್ನು ಕರ್‍ಕೊಂಡು ಬಂದು ಲೂಪ್‌ಹಾಕಿಸಿ ಬಿಡುತ್ತಿದ್ದೆ. ಆ ಹುಡುಗನನ್ನು ನೋಡು, ಅವನು ಕೊನೇವರೆಗೂ ಭಿಕ್ಷುಕನಾಗಿಯೇ ಉಳಿಯುತ್ತಾನೆ. ಅವರ ಜನ್ಮದ ಸಾರ್ಥಕತೆಯಾದರೂ ಏನು ?

ಆ ರೀತಿ ನಿಷ್ಠುರವಾಗಿ ಯಾಕೋ ಮಾತನ್ನಾಡ್ತೀಯ ? ಹೊಸ ಭಿಕ್ಷುಕರನ್ನು ತಡೆಗಟ್ಟೋದೇನೋ ಒಳ್ಳೆ ಕೆಲಸವೇ. ಆದರೆ ಹುಟ್ಟಿದವರು ಬದುಕೋದು ಬೇಡವೇ ?

ನಾನೆಂದೆ, ಖಂಡಿತವಾಗಿಯೂ ಅವಿನಾಶ. ಒಮ್ಮೊಮ್ಮೆ ಒಂದೇ ಸಲ ದಯಾ ದಾಕ್ಷಿಣ್ಯ ಬಂದು ಬಿಡುತ್ತೆ. ಭಿಕ್ಷುಕರೇ ಆಗಿರಲಿ ಮತ್ತಿನ್ಯಾರೇ ಇರಲಿ, ಆ ಚಿಕ್ಕ ಹುಡುಗೀನ ನೋಡು – ಮುಖದಲ್ಲಿ ಎಂಥಾ ಸರಳ ಭಾವ. ಅವಳನ್ನು ನೋಡಿದ್ರೆ ನಿನಗೆ ಸಾಯಿಸಬೇಕೂಂತ ಅನಿಸುತ್ತಾ ? ವಿಚಿತ್ರ ದನಿ ಮಾಡಿ ನಕ್ಕು ಅವಿನಾಶನೆಂದ, ಚಿಕ್ಕ ಹುಡುಗಿಯರನ್ನು ನೋಡಿದ್ರೆ ಸುನೀಲನಿಗೆ ಕರುಣೆ ಉಕ್ಕಿ ಹರಿಯುತ್ತೆ. ನಿನ್ನ ಆ ಚಿಕ್ಕ ಹುಡುಗಿ ವಿಷಯವೇನಾಯ್ತುಯ್ಯಾ ? ಒಳ್ಳೇ ಮಾಲು......

ನಿಮಿಷದಲ್ಲೇ ನನ್ನ ತಲೆ ಕೆಟ್ಟು ಹೋಯಿತು. ನಾನು ಸಿಟ್ಟಿನಿಂದ ಅವನ ಕಡೆ ನೋಡಿ ಹೇಳಿದೆ, ಹುಷಾರು, ನೀನು ಆ ಹುಡುಗಿ ಬಗ್ಗೆ ಆ ತರಹ ಮಾತನಾಡಬೇಡಯ್ಯ.

ಸ್ವಲ್ಪ ತಬ್ಬಿಬ್ಬಾಗಿ ಅವಿನಾಶ ಪೆಚ್ಚಾದ. ಆನಂತರ ಹೇಳಿದ, ಯಾಕಯ್ಯಾ ಸಿಟ್ಟು ? ನಾನೇನು ತಪ್ಪು ಮಾತನಾಡಿದೆ ? ಹೌರಾ ಬ್ರಿಡ್ಜ್ ಬಳಿಯ ಹೂವಿನ ಪೇಟೆಗೆ ಹೋಗಿ ನೋಡು, ಅವರು ಹೂವಿಗೂ ಮಾಲ್ ಅಂತಲೇ ಕರೆಯೋದು. ಪೇರಿಸಿಟ್ಟ ಹೂವಿನ ಕಡೆ ಬೊಟ್ಟು ಮಾಡಿ, ಆ ಮಾಲ್‌ಗೆ ಇವತ್ತು ಡಜನ್ ಬೆಲೆ ಹೇಗೆ ? ಅಂತಲೇ ಅವರು ಕೇಳೋದು. ಹೂವಿಗೇ ಆ ರೀತಿ ಹೆಸರಾದ ಮೇಲೆ..........

ನಾನೆಂದೆ, ಸ್ವಲ್ಪ ಇರಪ್ಪಾ. ನಂತರ ಸುವಿಮಲನನ್ನು ನಾನು ಪ್ರಶ್ನಿಸಿದೆ, ನೀನು ನಿಮ್ಮ ವಠಾರದ ಆ ಹುಡುಗೀನ ಮದುವೆ ಮಾಡ್ಕೋಬೇಕೂಂತ ಇದ್ದೆಯಲ್ಲ ಏನಾಯ್ತು ?

ನಾನೇನೋ ಅವಳನ್ನು ಮದುವೆ ಮಾಡ್ಕೊಳ್ಳೋಕೆ ತಯಾರಾಗೇ ಇದ್ದೆ. ಆದರೆ ಹುಡುಗಿಯ ಅಪ್ಪ ಜಾತಕ ಹೊಂದಿಕೆಯಾಗಬೇಕು ಅಂತ ಅಂದ. ಜಾತಕದ ಬಗ್ಗೆ ವಾದ ವಿವಾದವಾಯ್ತು. ಕೊನೆಗೆ ಆ ಹುಡುಗಿ ಅವರ ಸಂಗೀತ ಶಾಲೆಯ ಮಾಸ್ತರನನ್ನೇ ಮದುವೆ ಮಾಡಿಕೊಂಡುಬಿಟ್ಟಳು. ಈಗವಳು ಗರ್ಭಿಣಿ.

ಇರಲಿ ಬಿಡೋ, ಸದ್ಯ ತಪ್ಪಿಸಿಕೊಂಡ್ಯಲ್ಲ.

ಆದರೆ ಬರೋ ತಿಂಗಳು ನನಗೆ ಕೆಲಸ ಸಿಗುತ್ತೆ.

ಅದ್ನೋಡಪ್ಪ ಮಜಾ ? ಹಾಗಾದ್ರೆ ನಮ್ಮ ಗುಂಪಿನ ಬ್ಯಾಲೆನ್ಸ್ ಸರಿ ಹೋಯ್ತು. ನಿನಗೆ ಕೆಲಸ ಸಿಕ್ತು, ತಾಪಸನ ಕೆಲಸ ಹೋಯ್ತು.

ಅವಿನಾಶ ಉದ್ವೇಗಗೊಂಡು ಕೇಳಿದ, ಕೆಲಸ ಸಿಕ್ತಾ ? ಸೆಲೆಬ್ರೇಟ್ ಮಾಡಯ್ಯ. ನಡಿ ಈಗ ಎಲ್ಲಾದ್ರೂ ಹೋಗಿ ಕೂತ್ಕೊಳ್ಳೋಣ.

ಈಗ ತಿಂಗಳ ಕೊನೇನಲ್ಲಿ ನನ್ನ ಹತ್ರ ಎಲ್ಲಯ್ಯ ಬರಬೇಕು ದುಡ್ಡು. ಇನ್ನೂ ಕೆಲಸಕ್ಕೆ ಸೇರಿಲ್ಲ. ಯಾರಾದ್ರೂ ಸಾಲ ಕೊಟ್ರೆ–

ವಿಮಲೇಂದುವಿನ ಹತ್ತಿರ ಹೋಗ್ಬಾರ್ದೇ ? ವಿಮಲೇಂದು ಹಾಗೂ ಶೇಖರ ದೂರ ನಿಂತು ಮಾತನಾಡ್ತಾ ಇದ್ದರು. ವಿಮಲೇಂದು ಬಳಿ ಹೋಗಿ ಸುವಿಮಲ ಹಣ ಕೇಳುತ್ತಲೇ ಚಕಿತನಾಗಿ ಅವನೆಂದ, ಈಗ ಪುನಃ ಏನೋ ತಿನ್ಬೇಕು, ಈಗ ತಾನೇ ಸಮಾರಾಧನೆ ಊಟ ಮಾಡ್ಕೊಂಡು ಬಂದಿದೀಯ ? ಅವಿನಾಶನೆಂದ, ಸುಮ್ನಿರಪ್ಪಾ, ಈಗಿನ ಕಾಲದಲ್ಲಿ ಸಮಾರಾಧನೆ ಊಟ ಮಾಡಿದ್ರೆ ಹೊಟ್ಟೆ ತುಂಬುತ್ತ ? ಅದೂ ಅಲ್ಲದೆ ಅವನು ತಿನ್ನೋ ವಿಷಯ ಎಲ್ಲಿ ಹೇಳ್ತಾ ಇದಾನೆ ?

ವಿಮಲೇಂದು ಗಂಭೀರನಾಗಿ ಹೇಳಿದ, ಓ, ಹಾಗಾದ್ರೆ ನೀವೆಲ್ಲ ಗುಂಡು ಹಾಕೋಕೆ ಹೋಗ್ತೀರಾ ? ಅದಕ್ಕಾಗಿ, ನಾನು ಹಣ ಖರ್ಚು ಮಾಡಬೇಕೆ ? ಖಂಡಿತವಾಗಿಯೂ ಸಾಧ್ಯವಿಲ್ಲ, ನನಗೆ ಅದರಲ್ಲೆಲ್ಲ ವಿಶ್ವಾಸವಿಲ್ಲ.

ಅವಿನಾಶ ನಗುತ್ತ ಹೇಳಿದ, ಅಪನಂಬಿಕೆ, ನಂಬಿಕೆ ಇದರಲ್ಲೇನಿದೆ ಹೇಳು. ಹಣ ಕೇಳ್ತಿದ್ದಾನೆ, ಇದ್ದರೆ ಕೊಡ್ತೀಯ ಇಲ್ಲದಿದ್ದರೆ ಕೊಡೋದಿಲ್ಲ ಅಷ್ಟೇ.

ಇದ್ದರೂ ಕೊಡ್ತಿರಲಿಲ್ಲ ಬಿಡು. ಅವೆಲ್ಲ ಔತಣ ಬೊಹೆಮಿಯನಿಜಮ್‌ಗಾಗಿ, ದುಡ್ಡು ಖರ್ಚು ಮಾಡೋದನ್ನು ನಾನು ಖಂಡಿತವಾಗಿಯೂ ಇಷ್ಟಪಡೋದಿಲ್ಲ. ನನ್ನ ನೋಡಿ, ಓದಿ ಬರೆದು ನಾನು ಕೆಲಸದಲ್ಲಿದ್ದೀನಿ. ಮದುವೆ ಬೇರೆ ಮಾಡ್ಕೊಂಡು ಸಂಸಾರ ಹೂಡಿದೀನಿ. ಸಾಹಿತ್ಯ ಸಂಗೀತ ಇವು ಅರ್ಥವಾಗುತ್ತೆ. ಜೀವನದ ಬಗ್ಗೆ ನನ್ನದೇ ಬೇರೆ ಅಭಿಪ್ರಾಯವಾದರೂ, ಅವನಿಗಿಂತ ಕಡಿಮೆ ಏನಿಲ್ಲ. ಆದರೆ ನನಗೆ ಗುಂಡು ಹಾಕೋ ಅವಶ್ಯಕತೆ ಬಂದಿಲ್ಲ.

ಸುವಿಮಲ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು ಹೇಳಿದ, ವಿಮಲೇಂದು ನೀನು ತುಂಬಾ ಒಳ್ಳೆಯವನು ಕಣಯ್ಯ, ಸಭ್ಯಸ್ಥ. ಆದರೆ ಎಲ್ಲರೂ ಒಂದೇ ತರಹ ಇರ್ತಾರಾ ? ನೀನೇ ಹೇಳು ನೋಡೋಣ.

ಗಟ್ಟಿಯಾಗಿ ಹಿಡಿದುಕೊಳ್ಳುವ ನೆಪದಲ್ಲಿ ವಾಸ್ತವವಾಗಿ ಸುವಿಮಲ ವಿಮಲೇಂದುವಿನ ಜೇಬಿನಿಂದ ಹಣ ಎತ್ತಿಕೊಳ್ಳುವ ಪ್ರಯತ್ನ ಮಾಡಿದ್ದ. ಅವನಿಗದು ಗೊತ್ತಾಗಿ ದೊಡ್ಡ ದೇಹದ ವಿಮಲೇಂದು ಸರಿದು ನಿಂತುಕೊಂಡು ಹೇಳಿದ, ಏಯ್ ಏನೋ ಇದು ? ನೀವೆಲ್ಲ ದೊಡ್ಡ ಮೋಸಗಾರರು.

ಸುವಿಮಲನೆಂದ, ನಿಜವಾಗಿಯೂ ನಾವೆಲ್ಲರೂ ಮೋಸಗಾರರೇ. ಮೂವತ್ತು ರೂಪಾಯಿ ಕೊಡಬಾರ್ದೇನಯ್ಯ. ತುಂಬಾ ದುಡ್ಡು ಮಾಡಿದೀಯ, ಸಾಲ್ಟ್ ಲೇಕ್‌ನಲ್ಲಿ ಸೈಟ್ ಬೇರೆ ಕೊಂಡುಕೊಳ್ತಿದೀಯಂತೆ.

ಕೊಂಡ್ಕೋತೀನಿ. ನಿಮಗೆ ಸುಮ್ನೆ ದುಡ್ಡು ಕೊಟ್ಟು ನಾನ್ಯಾಕೆ ಬೋಳಿಸ್ಕೊಳ್ಳಿ,

ಯಾವುದೋ ರಾಜ್ಯದ ಹೆಂಡ ಕುಡುಕರಿಗೆ ಕೊಟ್ಟು.

ತಥ್‌ತೇರಿಕಿ, ಯಾರ್‍ಯಾರು ಬರ್ತೀರೋ ಬನ್ನಿ. ಅವಿನಾಶ ಒಂದು ಚಲಿಸುವ ಬಸ್‌ನ ಕಡೆ ಓಡಿದ. ಗುಂಪಿನಿಂದ ನಾವೂ ಕೆಲವರು ಓಡಿ ಹೋಗಿ ಬಸ್ ಹತ್ತಿದೆವು.

ಎಸ್‌ಪ್ಲಾನೆಡಿಗೆ ಬಂದು ನೋಡಿದ್ರೆ ನಾವು ಇದ್ದದ್ದು ಆರೇ ಜನ. ಅದರಲ್ಲಿ ತಾಪಸ್ ಇಳಿಯೋದಕ್ಕೆ ಇಷ್ಟಪಡಲಿಲ್ಲ. ಅವನನ್ನು ಬಲವಂತ ಮಾಡಿ ಇಳಿಸಿದ್ದಾಯ್ತು. ಒಂದು ಅಂಗಡಿಗೆ ಹೋಗಿ ಒಂದು ರೌಂಡ್‌ಗೆ ಆರ್ಡರ್ ಕೊಟ್ಟ ಮೇಲೆ ಶೇಖರ ಉತ್ತೇಜಿತನಾಗಿ ಹೇಳಿದ, ತುಂಬಾ ದಿನಗಳ ನಂತರ ಬಂದಿದೀವಿ. ಇವತ್ತು ಭಾಳ ಚೆನ್ನಾಗಿದೆ. ಬನ್ನಿ ಎಲ್ಲ ಸೇರಿ ಕೋರಸ್ ಹಾಡು ಹೇಳೋಣ. ಸುವಿಮಲನೆಂದ, ಸ್ವಲ್ಪ ಇರಪ್ಪಾ, ಮೊದಲು ಹೊಟ್ಟೆಗೇನಾದ್ರೂ ಬೀಳಲಿ.

ನೂರೂಲನೆಂದ, ಊಹುಂ, ಹಾಡು ಹಾಡ್ಬೇಡಿ. ಹಾಡು ಶುರು ಮಾಡಿದ್ರೆ ಪಕ್ಕದ ಟೇಬಲಿನವರೂ ಹಾಡೋಕೆ ಪ್ರಾರಂಭಿಸಿ ಬಿಡ್ತಾರೆ. ಆಗ ಅದು ನಮಗೆ ಇಷ್ಟವಾಗೋದಿಲ್ಲ. ನಾವು ಮಾಡಿದ್ದನ್ನೇ ಬೇರೆಯವರು ಮಾಡಿದ್ರೆ ಅದು ಚೆನ್ನಾಗಿರೋದಿಲ್ಲ.

ನಾನು ನೂರೂಲನಿಗೆಂದೆ, ನೀವು ನಿಮ್ಮನ್ನೆ ಇತರರಿಗಿಂತ ಭಿನ್ನ ಅಂತ ಯಾವಾಗಲೂ ಯಾಕೆ ಅಂದ್ಕೊಳ್ತೀರಾ?

ಸುವಿಮಲ ನೂರೂಲನಿಗೆ ಒಂದೇಟು ಕೊಟ್ಟು ಪಕ್ಕದ ಟೇಬಲ್ಲಿನ ಒಬ್ಬ ದೊಡ್ಡ ಗಾತ್ರದ ವ್ಯಕ್ತಿಯನ್ನು ತೋರಿಸಿ ಹೇಳಿದ, ಈತ ಹಾಡು ಹೇಳಬೇಕು ಅಂತೀಯಾ? ನಾವೆಲ್ಲಾ ವಾರೆಗಣ್ಣಿನಿಂದ ನೋಡಿದೆವು. ನಿಜ, ಆತನನ್ನು ನೋಡಿದ್ರೆ ನಗು ಬರೋ ಹಾಗಿತ್ತು. ದೊಡ್ಡ ಆಗಲವಾದ ಮುಖ, ಕೋಟಿನಲ್ಲಿ ಅಲ್ಲಿ ಇಲ್ಲಿ ಎಳೆ ಎದ್ದಿದೆ. ಹಣೆ ಮೇಲೆಲ್ಲ ಕೂದಲು ಹರಡಿದೆ. ತುಂಬಾ ಮತ್ತೇರಿರೋದ್ರಿಂದ ಆತನ ಮುಖ ಕುಂಕುಮದಂತೆ ಕೆಂಪಗಾಗಿ ಬಿಟ್ಟಿದೆ. ಟೇಬಲ್‌ನಲ್ಲಿ ಕೇವಲ ಒಬ್ಬನೇ ಕುಳಿತಿದ್ದಾನೆ. ಟೇಬಲ್ ತುಂಬಾ ತರಿಸಿದ ತಿಂಡಿ ತಟ್ಟೆ ಹಾಗೂ ಸೋಡಾ ಬಾಟಲಿಗಳು. ಸ್ವಲ್ಪ ಸ್ವಲ್ಪವಾಗಿಯೇ ಗುಟುಕರಿಸ್ತಾ ಕೂತಿದ್ದಾನೆ. ಒಂದು ಖಾಲಿ ಲೋಟದಲ್ಲಿ ಒಂದು ಹೊರೆ ಬಿಲ್ಲು ತುಂಬಿದೆ.

ಶೇಖರನೆಂದ, ಪಾಪ ಬಹಳ ದುಃಖ ಅಂತ ಕಾಣುತ್ತೆ. ಒಂಟಿಯಾಗಿ ಯಾರಾದ್ರೂ ಗುಂಡು ಹಾಕೋದಕ್ಕೆ ಬರ್ತಾರಾ?

ನೂರೂಲ್ ಆತನ ಕಡೆ ತಿರುಗಿ ನೋಡಿ ಹೇಳಿದ, ಅಣ್ಣಾ, ಒಂದು ಹಾಡು ಹೇಳ್ತೀರಾ? ಆತ ಬರೀ ಕಣ್ಣರೆಪ್ಪೆ ಮಿಟುಕಿಸಿದ. ಹಣ್ಣಾದ ಕೆಂಪಗಿನ ಲಿಚಿಹಣ್ಣಿನಂತೆ, ಕೆಂಪಡರಿದ ಕಣ್ಣುಗಳ ಆತನೆಂದ, ಬ್ರದರ್, ಹಾಡು ನೃತ್ಯ ಮನರಂಜನೆ ನಡೀಲಿ. ನೂರೂಲನೆಂದ, ಇವತ್ತು ಸ್ವಲ್ಪ ಮನರಂಜನೆಯಾಗಲಿ.

ಆತ ಸ್ವಲ್ಪ ಹಿಂದೆ ತಿರುಗಿ ಏನನ್ನೋ ಮಾತನಾಡಲು ಪ್ರಯತ್ನಪಟ್ಟ. ಬ್ರ... ಉ... ಉ... ಬ್ರ..... ಉ..... ಉ.

ನಾನು ನೂರೂಲನಿಗೆಂದೆ, ಹಿಂದೆ ಸರಿದು ನಿಲ್ಲು, ಅವನು ವಾಂತಿ ಮಾಡ್ಕೋತಾನೆ ಅಂತ ಕಾಣುತ್ತೆ.

ಮೂರನೇ ರೌಂಡ್ ವ್ಹಿಸ್ಕಿ ಕುಡಿದು ಮುಗಿಸಿದ ಮೇಲೆಯೇ, ಸುವಿಮಲನೇ ಮೊದಲು, ಬಿಲ್ ಕೊಡಲು ಹಣವಿದೆಯೋ ಇಲ್ಲವೋ ಎನ್ನುವ ಯೋಚನೆ ಮಾಡಿದ. ಯಾರೊಬ್ಬರ ಜೇಬಿನಲ್ಲೂ ಹೆಚ್ಚಿನ ಹಣವಿರಲಿಲ್ಲ. ಸುವಿಮಲ ಹಾಗೂ ತಾಪಸ್ ಸೊನ್ನೆ. ಇನ್ನುಳಿದವರಲ್ಲಿ, ಪ್ರತಿಯೊಬ್ಬರಲ್ಲೂ ನಾಲ್ಕೈದು ರೂಪಾಯಿಗಳಿಗಿಂತ ಹೆಚ್ಚಿಲ್ಲ. ಎಲ್ಲರೂ ಇದೀಗ ಕೂತಿದ್ದೆವು. ಇಷ್ಟರಲ್ಲೇ ಮುಗಿಸಿಬಿಡಬೇಕು. ಅಲ್ಲದೆ ಬೆಲೆ ಇಳಿಸೋದಕ್ಕೆ ಸಾಧ್ಯವಿಲ್ಲ. ಅವಿನಾಶನೆಂದ, ನನಗಿಲ್ಲಿ ಸ್ವಲ್ಪ ಪರಿಚಯವಿದೆ, ನಾನು ಮ್ಯಾನೇಜರಿಗೆ ಹೇಳಿ ವ್ಯವಸ್ಥೆ ಮಾಡಿಕೊಂಡು ಬರ್ತೀನಿ. ಸ್ವಲ್ಪ ಹೊತ್ತಿನ ನಂತರ ಪೆಚ್ಚು ಮುಖ ಹಾಕಿಕೊಂಡು ಅವಿನಾಶ ಹಿಂತಿರುಗಿ ಬಂದು ಹೇಳಿದ, ಬಡ್ಡೀಮಗ, ನನ್ನ ಗುರುತೇ ಹಿಡೀಲಿಲ್ಲ. ಹಾಳಾದವನು ಸ್ಮಶಾನಕ್ಕೆ ಹೋಗಿ ವ್ಯಾಪಾರ ಮಾಡೋದೇ ಲೇಸು. ಸುಮ್ಮನೆ ಹಾಳಾದವನು ಚೌರಂಗೀನಲ್ಲಿ ಅಂಗಡಿ ಇಟ್ಟುಕೊಂಡಿದ್ದಾನೆ. ಒಂದು ದಿನ ಅವನಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ.

ಸುವಿಮಲನೆಂದ, ಈ ಬಿಲ್ಲುಗಳನ್ನು ಏನು ಮಾಡೋದು? ಅವಿನಾಶನೆಂದ, ಏನೂ ಇಲ್ಲ. ಸುಮ್ನೆ ಬಿಲ್ ಕೊಡದೇನೇ ಹೊರಗೆ ಹೋಗ್ತೀನಿ. ನಮ್ಮ ಆರು ಜನರನ್ನು ತಡೆದು ನಿಲ್ಲಿಸಿ, ಎದುರು ಮಾತನಾಡಲು ಈ ಕಲ್ಕತ್ತೆಯಲ್ಲಿ ಯಾರಿಗೆ ತಾನೇ ಧೈರ್ಯ ಇದೆ?

ನಾನೆಂದೆ, ಒಂದು ಕೆಲಸ ಮಾಡು. ಪಕ್ಕದ ಟೇಬಲನ್ನು ತೋರಿಸಿ ಕಣ್ಸನ್ನೆ ಮಾಡಿದೆ. ಅವಿನಾಶ ಈ ಸಲ ನಕ್ಕ. ಈ ರೀತಿ ಮೂರ್ನಾಲ್ಕು ಸಲ ಮಾಡಿದೀವಿ. ಪಕ್ಕದ ಟೇಬಲ್ಲಿನ ದಪ್ಪನೆಯ ವ್ಯಕ್ತಿ, ಸ್ವಲ್ಪ ಹೊತ್ತಿನ ಮೊದಲಷ್ಟೆ ಎದ್ದು ಬಾತ್‌ರೂಮಿಗೆ ಹೋಗಿದ್ದ. ಅವಿನಾಶ ಆ ಕಡೆ ಈ ಕಡೆ ನೋಡಿ, ಒಂದು ಬಿಲ್ಲನ್ನು ಅವನ ಮೇಜಿನ ಲೋಟದೊಳಗೆ ಇತರ ಬಿಲ್ಲಿನೊಟ್ಟಿಗಿಟ್ಟು ಬಿಟ್ಟ. ಆನಂತರ ನಾವೆಲ್ಲ ಬಹಳ ಎಚ್ಚರಿಕೆಯಿಂದ ಕುಳಿತೇ ಇದ್ದೆವು.

ಆತ ಹಿಂತಿರುಗಿ ಬಂದು, ಲೋಟದೊಳಗಿನಿಂದ ಎಲ್ಲಾ ಬಿಲ್ಲುಗಳನ್ನು ಕೈಗೆತ್ತಿಕೊಂಡು, ಇಸ್ಪೀಟಿನ ಎಲೆ ಜೋಡಿಸುವಂತೆ ಕೈಯಲ್ಲಿ ಜೋಡಿಸಿಟ್ಟುಕೊಂಡ. ಮನಸ್ಸಿನಲ್ಲೇ ಏನೋ ಗುಣಾಕಾರ ಮಾಡಿ ಜೋರಾಗಿ, ಬೇರರ್ ಎಂದು ಕರೆದ. ಬೇರರ್ ಬರುತ್ತಲೆ ಅವನ ಕೈಗೆ ಬಿಲ್ಲನ್ನು ಜೋಡಿಸಿ ಕೊಟ್ಟು ಎಷ್ಟಾಗಿದೆ? ಎಂದ. ಬೇರರ್ ಎಣಿಸಿ, ಎಣಿಸಿ, ಒಮ್ಮೆ ನಮ್ಮ ಕಡೆ ನೋಡಿದ. ಈ ಕಡೆ ಆರು ಜೊತೆ ಕಣ್ಣುಗಳು ಅವನನ್ನು ಸುಟ್ಟು ಬಿಡುವಂತೆ, ದುರುಗುಟ್ಟುತ್ತಿದ್ದವು. ತಕ್ಷಣ ಕಣ್ಣು ಹೊರಳಿಸಿ ಹೇಳಿದ, ಎಂಬತ್ತಾರು ರೂಪಾಯಿ. ದಪ್ಪನೆಯಾತ ಮೆಲ್ಲನೆ ನಕ್ಕು, ಸರಿ ನನ್ನ ಲೆಕ್ಕ ಸರಿಯಾಯ್ತು. ಎಷ್ಟು? ಎಂಟರ ಹತ್ತು ಹಾಗೂ ಆರು ರೂಪಾಯಿ ಸರಿ.

ಆತ ಜೇಬಿನಿಂದ ಒಂದು ಕಟ್ಟು ಹತ್ತರ ನೋಟನ್ನು ಹೊರ ತೆಗೆದು ಎಂಟು ನೋಟನ್ನು ತೆಗೆದು ಹೇಳಿದ, ಬೇಗ ಟ್ಯಾಕ್ಸಿ ತೊಗೊಂಡು ಬಾ.

ನಾವೆಲ್ಲ ದೊಡ್ಡ ನಿಶ್ವಾಸ ಬಿಟ್ಟೆವು. ಬೇರರ್ ಖಂಡಿತವಾಗಿಯೂ ಹತ್ತು ರೂಪಾಯಿ ಹೆಚ್ಚಿಸಿಯೇ ಹೇಳಿದ್ದ. ಅವನಿಗೂ ಸ್ವಲ್ಪ ಲಾಭ, ನಮಗೂ ಸ್ವಲ್ಪ

ಲಾಭವಾಯಿತು. ಆತನ ಕೈಯಲ್ಲಿನ ಹಣದ ಕಟ್ಟಿನ ಕಡೆ, ಆಸೆಯ ಕಣ್ಣುಗಳಿಂದ ನೋಡಿ ಅವಿನಾಶ ಪಿಸುಗುಟ್ಟಿದ, ಇನ್ನೂ ಸ್ವಲ್ಪ ಹೊಡೆಯೋದಕ್ಕಾಗಿದ್ದಿದ್ದರೆ ?

ಸುವಿಮಲನೆಂದ, ತುಂಬಾ ಆಸೆ ಬೇಡಯ್ಯ, ಎಷ್ಟು ಲಭ್ಯವೋ ಅಷ್ಟೇ ಸಾಕು.

ಅವಿನಾಶನೆಂದ, ಅವನದೇನಿಲ್ಲ ಬಿಡು. ಮುಖ ನೋಡಿದ್ರೆ ಬ್ಲ್ಯಾಕ್ ಮನಿ ಅಂತ ಗೊತ್ತಾಗುತ್ತೆ. ಅಂಥವರಿಗೆ ಖರ್ಚು ಮಾಡೋದೇ ಒಂದು ದೊಡ್ಡ ಸಮಸ್ಯೆ.

ಹೊರಗೆ ಎದ್ದು ಬಂದ ಮೇಲೆ, ಅವಿನಾಶ ಗೊಣಗಲಾರಂಭಿಸಿದ, ಇನ್ನೂ ಹತ್ತೇ ಗಂಟೆ. ಅಷ್ಟರಲ್ಲೇ ಎಲ್ಲಾ ಮುಗಿಸಿ ಬಿಟ್ಟಿದೀವಿ. ಇನ್ನೂ ಸ್ವಲ್ಪ ಕುಡೀಬಹುದಿತ್ತು ಅಂತ ಯಾರಿಗೂ ಅನ್ನಿಸಲಿಲ್ಲವಾ ?

ನಾವೆಲ್ಲ ನಮಗೂ ಆಸೆಯಾಗ್ತಾ ಇದೆ ಅಂತ ಒಪ್ಪಿಕೊಳ್ಳಲೇಬೇಕಾಯ್ತು. ಆದರೆ ಬೇರೆ ದಾರಿ ಇಲ್ಲ. ಹೊರಗಿನಿಂದ ಇರೋ ದುಡ್ಡಿನಲ್ಲೇ ಬಾಟ್ಲಿ ಕೊಂಡು ಬರೋಣವೆಂದರೂ, ಹಣ ಸಾಲದು. ಸುವಿಮಲನೆಂದ, ಎಲ್ಲಾದ್ರೂ ಸಾಲ ಸಿಗುತ್ತಾ ಹೇಳು ?

ಯಾರಿಗೂ ಅದಕ್ಕೆ ಉತ್ತರ ಗೊತ್ತಿಲ್ಲ. ಎಲ್ಲರಿಗೂ ಇನ್ನೂ ಬೇಕೆನಿಸಿತ್ತು. ಈಗಲೇ ಯಾರೂ ಗುಂಪು ಬಿಟ್ಟು ಹೋಗಲು ತಯಾರಾಗಿರಲಿಲ್ಲ. ಜಾನ್‌ಬಾಜಾರಿನ ಬೀಡಾದಂಗಡಿಗೆ ಹೋಗಿ ನಿಂತು ಎರಡು ಬಾಟ್ಲಿ, ದೇಶೀ ಗುಂಡು ಹಾಕಿಕೊಂಡೆವು. ಆದರೂ ಇನ್ನೂ ದಾಹ ಇಂಗಿರಲಿಲ್ಲ. ಬಹಳ ದಿನಗಳ ನಂತರ ಸ್ನೇಹಿತರೆಲ್ಲ ಒತ್ತಟ್ಟಿಗೆ ಸೇರಿದ್ದೆವು. ನಿಜವಾಗಿಯೂ ಎಲ್ಲರಿಗೂ ತುಂಬಾ ಸಂತೋಷವಾಗಿತ್ತು. ಸುಮ್ಮನಿರಲಾರದೆ ಸುವಿಮಲನೆಂದ, ಪಾರ್ಕ್ ಸ್ಟ್ರೀಟಿನ ಅಂಗಡಿಗೇ ಹೋಗೋಣ, ಅಲ್ಲಿ ಗುರ್ತು ಪರಿಚಯದವರ್‍ಯಾರಾದ್ರೂ ಸಿಕ್ಕರೂ ಸಿಗಬಹುದು.

ನಾವು ಆರು ಜನಕ್ಕೆ ಕುಡಿಸೋ ಅಂಥವರು ಯಾರು ಸಿಗ್ತಾರೆ ?

ನಡೀರೋ, ನಮ್ಮಲ್ಲಿ ಒಂದಿಬ್ಬರ ಪರಿಚಯದವರಾದ್ರೂ, ಯಾರಾದ್ರೂ ಸಿಗಬಹುದು.

ನಡೆಯುತ್ತ, ನಡೆಯುತ್ತ, ಪಾರ್ಕ್ ಸ್ಟ್ರೀಟಿಗೆ ಬಂದೆವು. ಆ ಅಂಗಡಿಯಲ್ಲಿ ಯಾರೊಬ್ಬ ಪರಿಚಿತರನ್ನೂ ನೋಡಲು ಸಾಧ್ಯವಾಗಲಿಲ್ಲ. ಪಾರ್ಕ್ ಸ್ಟ್ರೀಟಿನ ಕೊನೆತನಕ ಬಂದು, ನಾವೆಲ್ಲರೂ ಬಹಳ ಅಸ್ವಸ್ಥರಾದೆವು. ಆರು ಜನರಲ್ಲಿ ಯಾರೊಬ್ಬರಿಗೂ, ಪರಿಚಯದವರಿರಲಿಲ್ಲ. ಸರಿ ಹಾಗಾದ್ರೆ ಇನ್ನು ಮನೆಗೆ ಹಿಂತಿರುಗೋಣ ಎಂದು ಹೇಳುವ ಸಾಹಸವಾಗಲಿಲ್ಲ. ಆ ರೀತಿ ಹೇಳಿದರೆ ಎಲ್ಲಿ ಹೇಡಿಯ ಪಟ್ಟ ಕಟ್ಟಿಕೊಳ್ಳಬೇಕಾಗುತ್ತಿತ್ತೋ ಅಂತ ಭಯ ಬೇರೆ. ಅವಿನಾಶ ಸಿಟ್ಟು ತಾಳಲಾರದೆ ನುಡಿದ, ಏನ್ರಯ್ಯ ನೀವು, ಎಲ್ಲಿ ಸಾಲ ಸಿಗುತ್ತೋ ಅಂಥ ಒಂದು ಜಾಗಾನಾದ್ರೂ ಹುಡುಕಿ ಹೇಳೋದಕ್ಕೆ ಸಾಧ್ಯವಿಲ್ಲವೇ ? ಹೋಪ್‌ಲೆಸ್. ಶೇಖರನೆಂದ, ನೋಡ್ರೋ ನನ್ನ ಗಡಿಯಾರ ಇದೆ. ಅದ್ರಿಂದೇನಾದ್ರೂ ಉಪಯೋಗವಾಗೋದಾದ್ರೆ ?

ಸುವಿಮಲನೆಂದ, ಬೇಡ ಬೇಡ, ಅವೆಲ್ಲ ರಗಳೇನೇ ಬೇಡ. ಅದರ ಬದಲು ಭಿಕ್ಷೆ ಎತ್ತೋದೇ ಮೇಲು.

ಅವಿನಾಶ ಹಲ್ಲು ಕಚ್ಚಿ ಸಿಡುಕಿದ, ಇದೂ ಒಂದು ಭಿಕ್ಷುಕರ ಜನ್ಮವೇ ? ಭಿಕ್ಷೆ ಬೇಡಿ ಗುಂಡು ಹಾಕಿಕೊಳ್ಳೋಕೆ ಹಣ ಒದಗಿಸಿಕೊಳ್ಳಲು ಎಲ್ಲಾದರೂ ಸಾಧ್ಯವೇ ?

ನೋಡ್ತಾ ಇರಯ್ಯಾ.

ಟ್ರಾಫಿಕ್‌ನ ದೀಪದಲ್ಲಿ, ಹಲವಾರು ವಾಹನಗಳು ಸಾಲಾಗಿ ನಿಂತಿದ್ದವು. ಸುವಿಮಲ ಆ ಕಡೆ ಥಟ್ಟನೆ ಓಡಿ ಹೋಗಿ ಒಂದು ವಾಹನದ ಚಾಲಕನೊಡನೆ ಅದೇನು ಮಾತುಕತೆಯಾಡಿದನೋ ಸ್ವಲ್ಪ ಹೊತ್ತಿನ ಮೇಲೆ ನಗು ನಗುತ್ತ ಕೈ ಮೇಲೆತ್ತಿ ಹಿಂತಿರುಗಿ ಬಂದ. ಅವನ ಕೈಯಲ್ಲಿ ಬಾವುಟದಂತೆ, ಒಂದು ಐದರ ನೋಟು ಹಾರಾಡುತ್ತಿತ್ತು. ನಾವು ಮೂರು – ನಾಲ್ಕು ಜನ ಒಟ್ಟಿಗೆ ಪ್ರಶ್ನಿಸಿದೆವು, ಹೇಗೆ ಸಿಗ್ತೋ, ಯಾರಾದ್ರೂ ಗುರುತಿನವರಿದ್ರಾ ? ಅವನೆಂದ, ಗುರ್ತು ಇಲ್ಲ, ಪರ್ತು ಇಲ್ಲ. ಸುಮ್ಮನೆ ಭಿಕ್ಷೆ ಬೇಡಿದೆ. ಇಂಗ್ಲೀಷಿನಲ್ಲಿ ಅವರಿಗೆಂದೆ, ಸಭ್ಯಸ್ಥರ ಮನೆ ಹುಡುಗ ನಾನು. ನನ್ನ ಪರ್ಸ್ ಕಳ್ಕೊಂಡು ಬಿಟ್ಟಿದೀನಿ. ಟ್ರೈನ್‌ನಲ್ಲಿ ಡೈಮಂಡ್ ಹಾರ್ಬರ್ ತನಕ ಹೋಗಬೇಕು – ಅಷ್ಟಕ್ಕೇ ಕೊಟ್ಟುಬಿಟ್ಟ.

ನಾವೆಲ್ಲರೂ ಹೋ ಎಂದು ಕುಣಿದಾಡಿದೆವು. ಅವಿನಾಶನೆಂದ, ಸರಿ ಹಾಗಾದ್ರೆ ನಾನೂ ಪ್ರಯತ್ನಪಡ್ತೀನಿ. ಅವಿನಾಶನೂ, ಒಂದು ಗಾಡಿಯ ಕಡೆ ಓಡಿ ಹೋದ. ಸ್ವಲ್ಪ ಹೊತ್ತಿನ ಮೇಲೆ, ಖುಷಿಯಿಂದ ಹಿಂತಿರುಗಿದ. ಅವನಿಗೆ ಮೂರು ರೂಪಾಯಿ ಸಿಕ್ಕಿತ್ತು. ಸುವಿಮಲನೆಂದ, ನೋಡ್ದ್ಯಾ ಭಿಕ್ಷಾಟನೆಯೇ ಈ ದೇಶದ ಏಕ ಮಾತ್ರ ಜೀವನೋಪಾಯ. ನೋಡಿದೆಯೋ ಇಲ್ವೋ.

ವಾಹನಗಳ ನಿಲುಗಡೆಯ ಸಮೀಪದಲ್ಲೇ ನಿಂತು ನಾವು ಮಾತನಾಡಿಕೊಂಡು ಒಂದು ತೀರ್ಮಾನಕ್ಕೆ ಬಂದೆವು. ಪಾರ್ಕ್ ಸ್ಟ್ರೀಟಿನ ಟ್ರಾಫಿಕ್ ದೀಪದ ಬೆಳಕಿನಲ್ಲಿ ವಾಹನಗಳು ನಿಂತೇ ನಿಲ್ಲುತ್ತವೆ. ಪ್ರತಿ ಸಲ ಕೆಂಪು ದೀಪ ಹತ್ತಿದಾಗ, ಒಬ್ಬೊಬ್ಬರಾಗಿಯೇ ಹೋಗೋದು ಒಟ್ಟಿಗೆ ಎಲ್ಲರೂ ಹೋದರೆ ಅನುಮಾನ ಬಂದುಬಿಡುತ್ತೆ. ಭಿಕ್ಷೆ ಕೇಳೋದನ್ನು ಇಂಗ್ಲೀಷಿನಲ್ಲೇ ಕೇಳಬೇಕು. ಏಕೆಂದರೆ ಗಾಡಿಗಳಲ್ಲಿ ತಿರುಗಾಡೋ ಜನರಿಗೆ, ಇಂಗ್ಲೀಷ್ ಕೇಳಿಸಿಕೊಳ್ಳದಿದ್ದರೆ ಸಂತೋಷವಾಗೋದಿಲ್ಲ.

ತಾಪಸ್ ತಕರಾರು ತೆಗೆದುಬಿಟ್ಟ. ಅವಿನಾಶ ಅವನನ್ನು ಗದರಿದ, ಹಿಂದೆ ಮುಂದೆ ನೋಡ್ಬೇಡ. ಭಿಕ್ಷೆ ಕೇಳ್ತಾ ಇದೀಯ ಅದರಲ್ಯಾಕೋ ನಾಚಿಕೆ. ನಿನಗಂತೂ ಕೆಲಸವಿಲ್ಲ. ಆಫೀಸಿನವರು ಕಂಡಾರು ಅನ್ನೋ ಭಯವೂ ಇಲ್ಲ. ಶೇಖರನೆಂದ, ನಾನು ಜಮೀನ್ದಾರ ವಂಶದವನು. ನನ್ನಿಂದಂತೂ ಭಿಕ್ಷೆ ಬೇಡಲು ಸಾಧ್ಯವೇ ಇಲ್ಲ. ನಾನು ಬೇಕಾದ್ರೆ ಗಡಿಯಾರ ಮಾರೋದಕ್ಕೂ ಸಿದ್ಧ.

ಸುವಿಮಲನೆಂದ, ಹೋಗು ಹೋಗೋ. ಈಗ ಇಲ್ಲಿ ನನಗಿಂತ ದೊಡ್ಡ ಜಮೀನ್ದಾರಿ ವಂಶದವರು ಬೇರೆ ಯಾರೂ ಇಲ್ಲ. ಮೈಮಾನ್‌ಸಿಂಗ್‌ನಲ್ಲಿ ನಮ್ಮ ಎಷ್ಟು ದೊಡ್ಡ ಬಂಗ್ಲೆ ಇತ್ತು ಅನ್ನೋದನ್ನು ಅವಿನಾಶನನ್ನೇ ಕೇಳಿ ತಿಳ್ಕೊ. ಅವಿನಾಶ ನಮ್ಮ ಕೈಕೆಳಗೇ ಇದ್ದದ್ದು. ಅವಿನಾಶ ಮರ್ಯಾದೆ ತೋರಿಸುವವನಂತೆ ಸುವಿಮಲನ ಗಲ್ಲ ಹಿಡಿದು, ಜಮೀನ್ದಾರಿ ಅಲ್ಲಪ್ಪ, ರಾಜತ್ವವಿತ್ತು? ಆಹಾ, ನಮ್ಮ

ರಾಜಕುಮಾರರು ಬಹಳ ಒಳ್ಳೆಯವರು.....

ಏನೇ ಹೇಳಿದರೂ, ಶೇಖರ ಕೊನೆಗೂ ರಾಜಿಯಾಗಲಿಲ್ಲ. ಶೇಖರನನ್ನೇ ನಮ್ಮ ಕ್ಯಾಶಿಯರ್‌ನನ್ನಾಗಿ ಮಾಡಲಾಯಿತು. ನಾವು ಒಬ್ಬೊಬ್ಬರಾಗಿ ಸರತಿಯ ಪ್ರಕಾರ ಹೋಗಿ, ಬಂದ ಹಣವನ್ನು ಶೇಖರನಿಗೆ ಜಮಾ ಮಾಡಲಾರಂಭಿಸಿದೆವು. ಮೊದಲಿಗೆ ನಾನು ಒಬ್ಬ ಆಂಗ್ಲೋ ಇಂಡಿಯನ್‌ರ ವಾಹನದ ಮುಂದೆ ನಿಂತುಕೊಂಡೆ. ಅವರೇನೂ ಮಾತನಾಡಲಿಲ್ಲ. ಅವರನ್ನು ಬಿಟ್ಟು ಬೇರೆ ವಾಹನಗಳಲ್ಲಿ ಪ್ರಯತ್ನ ಪಡೋಣವೆನ್ನುವಷ್ಟರಲ್ಲೇ ಕೆಂಪು ದೀಪ, ಹಸಿರಾಗಿ ಬದಲಾಯಿಸಲ್ಪಟ್ಟಿತು. ನಾನು ಖಾಲಿ ಕೈಯಿಂದಲೇ ಹಿಂತಿರುಗಬೇಕಾಯಿತು. ಇನ್ನೊಮ್ಮೆ ಒಬ್ಬ ದಂಪತಿಗಳ ವಾಹನವನ್ನು ಹಿಡಿದೆ. ಮುಖ ನೋಡಿದ್ರೆ ಸುಖೀ ಸಂಸಾರ ಅಂತ ಹೇಳಬಹುದು. ದಂಪತಿಗಳಿಬ್ಬರೂ ಜಬರ್ದಸ್ತಾಗಿ ಕುಳಿತಿದ್ದರು. ನನಗೆ ಸ್ವಲ್ಪ ನಾಚಿಕೆಯಾದರೂ, ಮುಖ, ಕಣ್ಣುಗಳಲ್ಲಿ ಕಾತರತೆಯನ್ನು ಸೂಚಿಸಿ ಹೇಳಿದೆ, ಬಿಲೀವ್ ಮೀ ಸರ್, ಕಂಪ್ಲೀಟ್‌ಲಿ ಸ್ಟ್ರ್ಯಾಂಡೆಡ್, ವಿಲ್ ಗೋ ಟು ಡೈಮೆಂಡ್ ಹಾರ್ಬರ್, ಫೈವ್ ರುಪೀಸ್ – ಮಹಿಳೆ ಕೈ ಅಲ್ಲಾಡಿಸಿ ಹೇಳಿದಳು, ಇಲ್ಲ ಇಲ್ಲ. ಆದರೆ ಗಂಡಸು ಮಾತ್ರ ಇಷ್ಟವಿಲ್ಲದಿದ್ದರೂ ಎದೆಯ ಹತ್ತಿರದ ಜೇಬಿನಿಂದ ಎರಡು ರೂಪಾಯಿ ಹೊರತೆಗೆದು ಕೊಟ್ಟ.

ಮಿಕ್ಕವರೆಲ್ಲ ಬಹಳ ಹಣ ಗಳಿಸಿದ್ದರು. ಸುವಿಮಲ ಹಾಗೂ ನೂರೂಲ್ ಇಬ್ಬರೂ ಬೇಗನೆ ಹೋಗಿ ಹಣ ಗಳಿಸಿಕೊಂಡು ಹಿಂತಿರುಗಿ ಬಂದು ಬಿಡುತ್ತಿದ್ದರು. ಅವಿನಾಶನಂತೂ ಪ್ರಾಣ ಬಿಟ್ಟು ವಾಹನಗಳ ಹಿಂದೆ ಓಡಿದರೂ, ಹಿಂತಿರುಗಿ ಬಂದು ಹೇಳುತ್ತಿದ್ದ, ಒಂದೊಂದು ಸಲ ಅದೇನು ರೋಗ ಬಡಿಯುತ್ತೋ ಏನೋ ಬಡ್ಡೀ ಮಕ್ಕಳ ತಂದು. ಸ್ವಚ್ಛ ಇಂಗ್ಲೀಷ್‌ನಲ್ಲಿ ಭಿಕ್ಷೆ ಬೇಡಿದರೂ, ಒಂದಿಬ್ಬರು ಎರಡಾಣೆ, ನಾಲ್ಕಾಣೆ ಕೊಡೋಕೆ ಬರ್ತಾರೆ. ಅವರ ಮುಖಕ್ಕೆ ಒಂದೊಂದು ಬಾರಿಸಬೇಕು.

ಸುವಿಮಲನೆಂದ, ಸದ್ಯ ಆ ರೀತಿ ಮಾಡಬೇಡಪ್ಪ, ಭಿಕ್ಷೆ ಕೇಳೋಕೆ ಬಂದು, ಪುನಃ ಹೊಡೆದಾಟ ಯಾಕೆ ?

ನನಗೆ ಅವರೆಂದರು, ನೀನೊಬ್ಬ ಕೆಲಸವಿಲ್ಲದವನು. ಏನೂ ಸಿಕ್ಕಿಲ್ಲ ಹೋಗೋ.

ನಾನು ಒಬ್ಬ ವ್ಯಾಪಾರಿಯ ಗಾಡಿಯ ಮುಂದೆ ಹೋಗಿ ನಿಂತುಕೊಂಡೆ. ಮುಖದ ಭಾವವನ್ನು ಬಹಳಷ್ಟು ದೈನ್ಯಗೊಳಿಸಿ ಹೇಳಿದೆ, ಏನಾದರೂ ಕೊಡಿ ಉಪಕಾರವಾಗುತ್ತೆ. ಆ ಸಲವೂ ನನಗೇನೂ ದೊರಕಲಿಲ್ಲ.

ನಮ್ಮ ನಡುವೆ, ಕೊನೇವರೆಗೂ, ಭಿಕ್ಷಾಟನೆಯಿಂದಾಗಿ, ಯಾರು ಎಷ್ಟೆಷ್ಟು ಹಣ ಗಳಿಸಲು ಸಾಧ್ಯವಾಯ್ತು ಎನ್ನುವುದರ ಬಗ್ಗೆ ದೊಡ್ಡ ಪೈಪೋಟಿಯೇ ಪ್ರಾರಂಭವಾಗಿ ಬಿಟ್ಟಿತು. ಶೇಖರನ ಜೇಬು ಕ್ರಮೇಣ ತುಂಬಲಾರಂಭಿಸಿತು. ನಾನು ಮೇಲಿಂದ ಮೇಲೆ ವ್ಯರ್ಥವಾಗಿ, ಬರಿಗೈಯಿಂದಲೇ ಹಿಂತಿರುಗಿದೆ. ಇವತ್ತು ನನ್ನ ಹಣೆಬರಹ ಸರಿಯಿರಲಿಲ್ಲ. ಎಷ್ಟೇ ಪ್ರಯತ್ನ ಪಟ್ಟರೂ, ಏನೂ ಸಂಪಾದಿಸಲು ಸಾಧ್ಯವಾಗಿರಲಿಲ್ಲ. ಮೂರು ಜನ ಭಿಕ್ಷುಕರು ನಮ್ಮ ಆಟವನ್ನು ಆಶ್ಚರ್ಯಗೊಂಡು ನೋಡುತ್ತಿದ್ದರು. ಶೇಖರ ನಗು ನಗುತ್ತ ಫಂಡ್‌ನಿಂದ ಸಮನಾಗಿ ಒಬ್ಬೊಬ್ಬರಿಗೂ ಹಣವನ್ನು

ಹಂಚಿಬಿಟ್ಟ.

ಸುವಿಮಲನೆಂದ, ಒಂದೊಂದು ವಾಹನದಲ್ಲೂ ಏನೇನು ದೃಶ್ಯಗಳು ಗೊತ್ತ? ನೋಡ್ತಾ ಇದ್ರೆ ನೋಡ್ತಾನೇ ಇರೋಣವೆಂದು ಅನ್ನಿಸ್ತಾ ಇತ್ತು. ಇನ್ನು ಭಿಕ್ಷೆ ಬೇಡೋದೇನು, ಅವನ್ನೆಲ್ಲ ನೋಡಿದ್ದಕ್ಕೆ ಅಂತಲೇ ಅನೇಕರು ಕೊಟ್ಟುಬಿಟ್ಟಿದ್ದಾರೆ.

ತಾಪಸನೆಂದ, ನನಗೊಬ್ಬ ಪಂಜಾಬಿ ಹುಡುಗ, ಕಿಟಕಿಯ ಒಳಗೆ ಇಣುಕಿ ನೋಡಿದೆ ಅಂತ ಹೊಡೆಯೋದಕ್ಕೆ ಬಂದಿದ್ದ. ನೋಡ್ದೆ ಹುಡುಗಿಯಂತೂ .....

ಅವಿನಾಶ ಒಂದು ವಾಹನದ ಹಿಂದೆ ಓಡಿ ಹೋಗುತ್ತಲಿದ್ದ. ಒಮ್ಮೆಗೆ ಆಶ್ಚರ್ಯಗೊಂಡು ಥಟ್ಟನೆ ನಿಂತುಬಿಟ್ಟು, ಹಿಂತಿರುಗಿ ಬಂದು ಹೇಳಿದ, ಸುನೀಲ್, ನೀನು ಹೋಗು, ನಿನ್ನ ಸರದಿ, ಆ ನೀಲಿ ಕಾರು–

ಅವಿನಾಶ ನನಗೆ ಥಿಕ್ಕ ಹೊಡೆದು ಓಡಿಸಿದ. ಅದೇ ರಭಸದಲ್ಲಿ ನಾನು ಓಡಿ ಬಂದೆ. ಮುಖದ ಭಾವವನ್ನು ತೀರ ಕಾರುಣ್ಯಗೊಳಿಸಿ, ನೀಲಿ ಬಣ್ಣದ ಕಾರಿನ ಬಳಿ ಬಂದು ನಾನಿನ್ನು ಮಾತನಾಡಲು ಪ್ರಾರಂಭಿಸಿರಲಿಲ್ಲ. ಕಿಟಕಿಯ ಹತ್ತಿರ ಜಮುನಾಳನ್ನು ನೋಡಿದೆ. ತಕ್ಷಣ ನಾನು ಹಿಂತಿರುಗಿ ಓಡಿ ಬಂದುಬಿಟ್ಟೆ. ಅವಿನಾಶ, ಯಮದೂತನಂತೆ ಅಲ್ಲೇ ಹತ್ತಿರದಲ್ಲೇ ನಿಂತಿದ್ದ. ಅವನೆಂದ, ಪ್ರಯತ್ನ ಪಡದೇ ಹಿಂತಿರುಗಿ ಬಂದೆ ಅಲ್ವಾ, ನಡಿ. ಇನ್ನೊಮ್ಮೆ ನಾನೆಂದೆ, ಇಲ್ಲ ಈ ಸಲ ನಾನು ಹೋಗೋದಿಲ್ಲ. ಹೋಗೋ ಎಂದು ಹೇಳಿ ಅವಿನಾಶ ನನ್ನನ್ನು ಪುನಃ ತಳ್ಳಿ ಬಿಟ್ಟ. ನಾನು ಹೇಗೋ ಅಂತು ಕಾರಿನ ಬಾಡಿಯ ಮೇಲೆ ಕೈ ಇಟ್ಟು ಬಗ್ಗಿ ನನ್ನನ್ನೇ ಸಾವರಿಸಿಕೊಂಡೆ. ಜಮುನಾ ನನ್ನನ್ನು ಕಂಡು, ಇದೇನು ಸುನೀಲ್‌ದಾ? ಎಂದಳು.

ನಾನು ತಕ್ಷಣ ನಗುಮುಖ ಮಾಡಿಕೊಂಡು ಹೇಳಿದೆ, ಜಮುನಾ ನಿನ್ನನ್ನು ತುಂಬಾ ದಿನಗಳ ನಂತರ ನೋಡ್ತಾ ಇದ್ದೀನಿ. ಚೆನ್ನಾಗಿದೀಯ?

ಕಾರಿನಲ್ಲಿ ಜಮುನಾ ಹಾಗೂ ಸರಸ್ವತಿ, ಮತ್ತೊಬ್ಬ ಅಪರಿಚಿತ ವಿವಾಹಿತ ಮಹಿಳೆ ಮತ್ತು ಒಬ್ಬ ಗಂಡಸು. ಜಮುನಾ, ಇಂದು ಪುನಃ ಕೆಂಪು ಬಣ್ಣದ ಉಡುಪು ತೊಟ್ಟಿದ್ದಾಳೆ. ದೇಹದಲ್ಲಿ ಅದೇ ಕೆಂಪು ಛಾಯೆ. ಗಂಡಸು ನನ್ನನ್ನು ಪ್ರಶ್ನಿಸಿದ, ತಾವು ಕಾರು ಹತ್ತುತ್ತೀರಾ? ಸರಸ್ವತಿ ಎಂದಳು, ಡ್ರಂಕ್, ಡ್ರಂಕ್. ಮುನ್ನಿ ಗಾಜನ್ನು ಸರಿಸಿ ಬಿಡು. ಜಮುನಾಳೆಂದಳು, ಕಾರಿನಲ್ಲಿ ಬರುತ್ತೀರಾ? ಬನ್ನಿ.

ನಾನು ಜಮುನಾಳ ಕಡೆ ನಗು ಮುಖ ಮಾಡಿ ಅತಿ ಸ್ನೇಹದಿಂದ ನಕ್ಕು ಹೇಳಿದೆ, ಜಮುನಾ ನಾನು ನನ್ನ ಹಣ ಕಳೆದುಕೊಂಡು ಬಿಟ್ಟಿದೀನಿ. ನನಗೆ ಐದು ರೂಪಾಯಿ ಇದ್ದರೆ ಕೊಡು, ಕಾರಿನಲ್ಲಿ ನಾನು ಬರೋದಿಲ್ಲ.

ಐದು ರೂಪಾಯಿ ಇಲ್ಲ. ಒಂದು ರೂಪಾಯಿ ಇದೆ.

ಮುನ್ನಿ, ಗಾಜು ಸರಿಸಿ ಬಿಡು.

ಇನ್ನು ಸಮಯವಿಲ್ಲ, ಇನ್ನು ತಡ ಮಾಡಬಾರದು. ಇಷ್ಟರಲ್ಲೇ ಕೆಂಪಿನಿಂದ ದೀಪ ಹಸುರಾಗಿ ಬಿಡುತ್ತೆ.

ತಮಾಷೆ ಏನಂದ್ರೆ ಸರಸ್ವತಿಯೂ ಇವತ್ತು ಹಸಿರು ಸೀರೆ ಉಟ್ಟಿದ್ದಾಳೆ. ಒಮ್ಮೆಗೇ ಅವಳ ಸೀರೆ ಹಾಗೂ ದೀಪ ಎರಡೂ ಹೊಂದಿಕೊಳ್ಳುವಂತೆ ಕಾಣಿಸಿತು. ನಾನು

ಅಧೀರನಾಗಿ ಹೇಳಿದೆ, ಸರಿ ಹಾಗಾದ್ರೆ ಜಮುನಾ, ನೀನು ಒಂದು ರೂಪಾಯಿಯನ್ನೇ ಕೊಡು, ಅಷ್ಟೇ ಸಾಕು.

ಆದರೆ ನಂತರ ಮಾತು ಕೇಳಿಸಲಿಲ್ಲ. ಪುಸ್ ಎಂದು ಕಾರು ಹೊರಟೇ ಬಿಟ್ಟಿತು. ಹಿಂದಿನಿಂದ ಅನೇಕ ಅಸಂಖ್ಯ ವಾಹನಗಳ ಹಾರ್ನ್. ಸಿಕ್ಕಿ ಬೀಳೋ ಭಯದಿಂದ ನಾನು ಓಡಿ ಫುಟ್‌ಪಾತ್ ಹತ್ತಿದೆ. ಮನಸ್ಸು ತೀರಾ ಕೆಟ್ಟು ಹೋಯಿತು. ಭಿಕ್ಷುಕನ ರೂಪದಲ್ಲೂ ಸ್ನೇಹಿತರ ನಡುವೆ ನಾನು ಸೋತು ಹೋಗಿದ್ದೆ, ತಥ್.

ಸುವಿಮಲನೆಂದ, ಏನಯ್ಯ ಈ ಸಲವೂ ಸಿಗಲಿಲ್ಲವೇ ?

ಅವಿನಾಶನೆಂದ, ಸಿಗೋದಿಲ್ಲ ಅಂತ ಗೊತ್ತಿತ್ತು.

ಇದೇ ತರಹ ಯೋಚಿಸಿ ದಿನಗಳು ಕಳೆದುಹೋಗುತ್ತವೆ, ಮತ್ತಿನ್ನೇನು. ಜನರ ಮುಖದ ಕಡೆ, ನಗು ಮುಖದಿಂದ ದಿಟ್ಟಿಸಿದ್ರೆ ಅವರೂ ನಗು ಮುಖದಿಂದ ನಗು ಸೂಚಿಸಿ, ಸಮ್ಮತಿಸುತ್ತಾರೆ. ಬಹುತೇಕ ಮುಖಗಳು ನಿರ್ಲಿಪ್ತ, ಭಾವನಾಹೀನ ಮುಖಗಳು. ಆಕಾಶದಲ್ಲಿ ಮೋಡ ಕವಿಯದೇ ಇದ್ದಾಗ, ಎಲ್ಲರ ಮುಖದಲ್ಲೂ ಒಂದು ರೀತಿಯ ನೀಲಿ ಛಾಯೆ ಮೂಡಿರುತ್ತೆ. ಆ ಛಾಯೆಯನ್ನು ನೋಡಿದ ಮೇಲೆ, ಯಾವುದೋ ಒಬ್ಬ ಅಪರಿಚಿತ ಮನುಷ್ಯನನ್ನು ಪ್ರಶ್ನಿಸಬೇಕೆಂದೆನಿಸುತ್ತೆ, ಹೇಗಿದ್ದೀರಾ ? ಆದರೆ ಪ್ರತಿಯೊಬ್ಬರೂ ಪ್ರಶ್ನಿಸಲು ಇಷ್ಟಪಡುತ್ತಾರೆ. ಯಾರೂ ಉತ್ತರಿಸಲು ಇಷ್ಟಪಡೋದಿಲ್ಲ. ಇಲ್ಲಿಯವರೆಗೂ, ನನ್ನನ್ನು ಯಾರ್‍ಯಾರು ಹೇಗಿದ್ದೀರ ಅಂತ, ಪ್ರಶ್ನಿಸಿದ್ದಾರೋ, ಅವರಲ್ಲಿ ಯಾರೊಬ್ಬರೂ ಉತ್ತರ ಕೇಳೋತನಕ ನಿಂತೇ ಇಲ್ಲ. ಸುಮ್ಮನೆ ನನಗೆ ಹೇಳಬೇಕೆನಿಸುತ್ತೆ. ಒಂದು ವೇಳೆ ನೀವು ಚೆನ್ನಾಗಿದ್ದರೆ, ಹಾಗೇ ನಾನು ಕೂಡಾ ಚೆನ್ನಾಗಿಯೇ ಇದೀನಿ.

ನಾನು ಅನೇಕ ವಿಧದ ತಪ್ಪುಗಳನ್ನು ಮಾಡುತ್ತ ಇನ್ನೂ ಹೊಸ ತಪ್ಪುಗಳನ್ನು ಮಾಡುತ್ತಿದ್ದೇನೆ. ಅದು ನನಗೆ ತುಂಬಾ ಇಷ್ಟವಾಗುತ್ತೆ. ಈ ನಡುವೆ ಬದುಕುಳಿಯುವುದರಲ್ಲಿ ನಾನು ಕ್ರಮೇಣ ತುಂಬಾ ಸುಖ ಕಾಣಲಾರಂಭಿಸಿದ್ದೇನೆ. ಒಂದು ಕಿತ್ತಲೆ ಹಣ್ಣೋ, ಬಾದಾಮಿ ಹಣ್ಣನ್ನೋ ತಿನ್ನೋವಾಗ ನನಗನ್ನಿಸುತ್ತೆ ಇವಕ್ಕೂ ಪ್ರಾಣವಿದೆ. ಅವು ಪಿಸಿ, ಪಿಸಿ ಪಿಸುಗುಟ್ಟುತ್ತವೆ – ನಮ್ಮ ಪ್ರಾಣ ಹೋದ್ರೂ, ನಿನ್ನನ್ನು ಬದುಕುಳಿಸ್ತಿದೀವಿ, ಕೃತಘ್ನನಾಗಬೇಡ. ಇಲ್ಲ, ಕೃತಘ್ನನಾಗೋದಿಲ್ಲ. ಪ್ರಪಂಚದಲ್ಲಿ ಯಾವುದರಿಂದ ಸ್ವಲ್ಪವೂ ಆಘಾತವಾಗುವುದಿಲ್ಲವೋ ಆ ತರಹದ ಭೂಮಿಗೆ ಸ್ವಲ್ಪವೂ ಆಘಾತವಾಗದಂತೆ ಭೂಮಿಯ ಮೇಲೆ ನಿಧಾನವಾಗಿ ಹೆಜ್ಜೆ ಇಡುತ್ತೇನೆ.

ಜಮುನಾಳನ್ನು ನಾನು ಇನ್ನೂ ಒಂದೆರಡು ಸಲ ಕಂಡಿದ್ದೆ. ಒಮ್ಮೆ ವಂಗ ಸಂಸ್ಕೃತ ಸಮ್ಮೇಲನದಲ್ಲಿ, ಅವಳು ನರ್ತಿಸಲು ಬಂದಿದ್ದಳು. ಅವಳನ್ನು ದೂರದಿಂದಲೇ ನೋಡಿದ್ದೆ, ಹೂವಿನಲಂಕಾರದಲ್ಲಿ ಅವಳು ಅಪ್ಸರೆಯ ತರಹ ಕಾಣುತ್ತಿದ್ದಳು. ದೇಹದಲ್ಲಿ ಸ್ವಲ್ಪ ಚಂಚಲತೆ ಬಂದಿದೆ. ಏನೇ ಇರಲಿ. ಆದರೂ ಅದೇ ಗಿಳಿಯ ತರಹದ ದೃಷ್ಟಿ. ಪ್ರಪಂಚದ ರಹಸ್ಯವನ್ನೀಗ ಸ್ವಲ್ಪ ತಿಳಿದುಕೊಂಡು ಇದೀಗ ಅವಳು

ಪ್ರಪಂಚಕ್ಕೆ ತನ್ನ ರಹಸ್ಯವನ್ನು ತೋರಿಸಲಿಚ್ಛಿಸುತ್ತಿದ್ದಾಳೆ ಅನ್ನೋ ರೀತಿ. ಅಂದು ನನ್ನ ಎದೆ ತುಂಬಿ ಬಂದಿತ್ತು.

ಎರಡನೆಯ ಸಲ ನಾನು ಜಮುನಾಳನ್ನು ಕಂಡದ್ದು ಏರ್‌ಪೋರ್ಟಿನಲ್ಲಿ. ತಪನನ ಜೊತೆ ಬೊಂಬಾಯಿಗೆ ಹೊರಟು ನಿಂತಿದ್ದಳು. ಕೊನೆ ಅಕ್ಕ ಹಾಗೂ ಕಲ್ಯಾಣದಾ ವಿಲಾಯತಿಗೆ ಹೋಗುತ್ತಾರೆಂದು ಡಮ್ ಡಮ್‌ಗೆ ನಾನೂ ಹೋಗಿದ್ದೆ. ಜಮುನಾಳ ಜೊತೆ ಅವರಪ್ಪನೂ ಇದ್ದರು. ನಾನು ಜಗದೀಶ್‌ರಾಯರನ್ನು ಅಲಕ್ಷಿಸಿ, ಜಮುನಾಳ ಭುಜದ ಮೇಲೆ ಕೈಯಿಟ್ಟು ಕೇಳಿದೆ, ಹೇಗಿದ್ದೀಯಾ ? ಜಮುನಾ ಚಕಿತಳಾಗಿ ದಿಟ್ಟಿಸಿ ಹೇಳಿದಳು, ನೀವು ?

ನಾನು ಮೃದುವಾಗಿ ಪ್ರಶ್ನಿಸಿದೆ, ನನ್ನನ್ನು ನಿನ್ನ ಮದುವೆಗೆ ಕರೆಯಲೇ ಇಲ್ಲ ? ತಪನನೆಂದ, ನಿಜವಾಗಿಯೂ, ತುಂಬಾ ಅವಸರವಾಗಿ ಹೋಯಿತು. ಒಂದೇ ಸಲ ಆಯ್ತು ನೋಡಿ. ನಾನು ಕೇಳಿದೆ, ಒಂದೇ ಸಲ ? ಜಮುನಾಳೆಂದಳು, ಅಮ್ಮನ ಆರೋಗ್ಯ ತುಂಬಾ ಕೆಟ್ಟಿತ್ತು ಅಂತ ಅಪ್ಪ, ನನ್ನ ಹಾಗೂ ಅಕ್ಕನ ಮದುವೆ ಒಂದೇ ದಿನ ಮಾಡಿ ಬಿಟ್ಟರು. ನೀವು ಬೊಂಬಾಯಿಗೆ ಬಂದರೆ ಖಂಡಿತ ಬನ್ನಿ.

ಜಮುನಾಳ ನಗು ಏನೋ ಒಂದು ರೀತಿಯಲ್ಲಿ ಸುಂದರವೆನಿಸಿತು. ನಾನೂ ಸುಂದರ ಭಾವದಿಂದ ನಕ್ಕೆ. ಅದೇ ತರಹ ನಕ್ಕು ನಾನು ಪ್ರಶ್ನಿಸಿದೆ, ನಾನು ಹೇಗಿದ್ದೀನಿ ಅಂತ ನೀನು ಕೇಳಲೇ ಇಲ್ಲ. ಜಮುನಾಳೆಂದಳು, ನಿಮ್ಮನ್ನು ನೋಡಿದ್ರೆ ಗೊತ್ತಾಗುತ್ತೆ ನೀವು ಚೆನ್ನಾಗಿದೀರ ಅಂತ.

ಆನಂತರ ಒಂದು ದಿನ ಬೆಳಿಗ್ಗೆಯೇ ಪುನಃ ಪಾರಿತೋಷ ಬಂದ. ಅದೇ ಸ್ವಾಭಿಮಾನದ ಮುಖ. ಆಗಲೂ ನಾನಿನ್ನು ವೃತ್ತಪತ್ರಿಕೆಯನ್ನು ಇನ್ನೂ ಓದಿ ಮುಗಿಸಿರಲಿಲ್ಲ. ಮೂರನೇ ಸಲ ಚಹಾ ಕುಡಿದಾಗಿರಲಿಲ್ಲ. ಕೋಪದ ದನಿಯಲ್ಲಿ ಪಾರಿತೋಷನೆಂದ, ನಿನ್ನೆ ನೀವು ಎಲ್ಲಿ ಇದ್ದಿರಿ ? ನಾನು ನಗುತ್ತ ಪ್ರಶ್ನಿಸಿದೆ, ಏಕೆ ? ನಿನ್ನೆ ರಾತ್ರೀನೂ, ಶೇಖರ ಮನೆಗೆ ಹಿಂತಿರುಗಲಿಲ್ಲವೇ ? ಪಾರಿತೋಷನೆಂದ, ಇಲ್ಲ. ನಿನ್ನೆ ನಿಮಗಾಗಿ ತುಂಬಾ ಹುಡುಕಾಡಿದೆ. ನಿಮ್ಮ ಮನೆ ಟೆಲಿಫೋನ್ ಬಹುಶಃ ಕೆಟ್ಟಿದೆ ಅಂತ ಕಾಣುತ್ತೆ. ನಾನೆಂದೆ, ಹೌದು, ಆದರೆ ಹುಡುಕಾಡಿದ್ದಾದರೂ ಏಕೆ ?

ಅಣ್ಣ ಈಗ ಇನ್ನೊಂದು ಹುಚ್ಚಾಟ ಪ್ರಾರಂಭಿಸಿಬಿಟ್ಟಿದ್ದಾರೆ. ಯಾರಿಂದಲೋ, ಕೇಳ್ಕೊಂಡು ಬಂದು ಬಿಟ್ಟಿದ್ದಾರೆ. ಏಳು ದಿನ ಉಪವಾಸ ಮಾಡಿ ಪ್ರಾಣಾಯಾಮ ಮಾಡಿದರೆ ಅಲೌಕಿಕ ಜ್ಞಾನ ಪ್ರಾಪ್ತವಾಗುತ್ತೇಂತ. ಅದಕ್ಕಾಗಿ ಮೂರು ದಿನದಿಂದ ಉಪವಾಸವಿದ್ದು ಧ್ಯಾನಮಗ್ನರಾಗಿ ಕುಳಿತುಬಿಟ್ಟಿದ್ದಾರೆ. ನಿನ್ನೆ ರಾತ್ರಿಯಿಂದ ಹಾಗೇ ಎಚ್ಚರ ತಪ್ಪಿ ಬೀಳ್ತಾನೇ ಇದ್ದಾರೆ. ಜ್ಞಾನವಿಲ್ಲ. ಅದೆಂಥಾ ಅವಸ್ಥೆ, ಅದೇನು ಹಗರಣ ನಿಮ್ಮದೆಲ್ಲ ? ಹೇಳಿ ನೋಡೋಣ ? ಏನೇ ಆಗಲಿ ಅಮ್ಮ ನಿಮಗೆ ಸುದ್ದಿ ಮುಟ್ಟಿಸಿ ಬಾ ಅಂತ ಹೇಳಿದ್ದಾಳೆ.

ಮೂರು ದಿನದಿಂದ ಏನೂ ತಿಂದಿಲ್ಲ ಯಾಕೆ ?

ಅದೇ ತಾನೇ, ಬರೀ ಎಲ್ಲ ಸಿಲ್ಲಿ ವರ್ತನೆ. ಅಮ್ಮನ ಅಭಿಪ್ರಾಯ ಏನೂಂದ್ರೆ ನೀವು ಹೋಗಿ ಹೇಳಿದರೆ ಒಂದು ವೇಳೆ ತಿನ್ತಾನೋ ಏನೋ ಅಂತ.

ಡಾಕ್ಟರನ್ನು ಕರೆಸಬಹುದಾಗಿತ್ತಲ್ಲ ? ನಾನು ಹೋಗಿ ಏನು ಮಾಡೋಕೆ ಸಾಧ್ಯ ? ಇರಲಿ ಬಿಡು, ಅವನೇನು ಪೆದ್ದನಲ್ಲ. ತುಂಬಾ ಹಸಿವಾದ್ರೆ ತಿಂದೇ ತಿನ್ತಾನೆ. ಅವನ ಮುಂದೆ ಸ್ವಲ್ಪ ಸಿಹಿ ಹಾಗೂ ಒಂದು ಲೋಟ ಪಾನಕ ಇಟ್ಟು ಬಿಡಿ. ಒಂದೇ ಸಲಕ್ಕೆ ಎಲ್ಲಾ ತಿಂದು ಮುಗಿಸಿ ಬಿಡ್ತಾನೆ ನೋಡ್ತಾ ಇರಿ.

ನೀವು ಬರೋದಿಲ್ಲವೇ ?

ಮಧ್ಯಾಹ್ನ ಆಫೀಸಿನಿಂದ ಫೋನ್ ಮಾಡಿ ವಿಷಯ ತಿಳ್ಕೋತೀನಿ. ಒಂದು ವೇಳೆ ಆಗಲೂ ಏನೂ ತಿಂದಿಲ್ಲ ಅಂತ ಕೇಳಿದ್ರೆ, ಸಾಯಂಕಾಲ ಮನೆ ಕಡೆ ಬರ್ತೀನಿ. ಭಯ ಪಡೋದೇನೂ ಬೇಕಿಲ್ಲ. ಎಲ್ಲ ಸರಿಯಾಗಿ ಬಿಡುತ್ತೆ.

Lasertypeset at Laser Line Graphics
and printed at Beauty Print, New Delhi-55